# ಸಮಗ್ರ ದಾಸ ಸಾಹಿತ್ಯ

ಸಂಪುಟ : ೧೧ - ಭಾಗ ೧



## ಕಾಖಂಡಕಿ ಕೃಷ್ಣದಾಸರ ಕೀರ್ತನೆಗಳು

ಸಮಗ್ರ ದಾಸ ಸಾಹಿತ್ಯ
ಸಂಪುಟ : ೧೧–ಭಾಗ ೧

# ಕಾಖಂಡಕಿ ಕೃಷ್ಣದಾಸರ ಕೀರ್ತನೆಗಳು
## ಭಾಗ–೧

*ಸಂಪಾದಕರು*
ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ


ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

**SAMAGRA DASA SAHITYA VOLUME - 11 PART- 1 :**
*Kakhandaki Krishnadasara Keerthanegalu,* Edited by Dr. Krishna kolharakulkarni and published by Sri. Y. K. Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 53+ ೩೪೧


ಪ್ರಥಮ ಮುದ್ರಣ : ೨೦೦೩
ಪ್ರತಿ : ೧೨೫೦.

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

ಮುದ್ರಣ ನಿರ್ವಹಣೆ :

ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಮ್ ರಸ್ತೆ
ಬೆಂಗಳೂರು – ೫೬೦ ೦೫೨.

ಮುದ್ರಕರು :

ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩.

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ, ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನೂ ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ, ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿ.ಡಿ. ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಅವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್‌ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಾಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿ.ಡಿ. ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ, ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**
ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಂದೇ ಸಂದರ್ಭಾನುಸಾರ ಹುಟ್ಟಿದ ಹರಿದಾಸಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮಾವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ. ಎಂ. ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು) ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ-ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ, ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ.ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ.ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ವಿ. ಸುಬ್ರಹ್ಮಣ್ಯ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಮತ್ತು ಈ ಯೋಜನೆಯಲ್ಲಿ ಪಾಲ್ಗೊಂಡ ಎಲ್ಲ ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ–ಪಾಮರರನ್ನು ಏಕಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕನ್ನಡಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ-ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ) ನಾಲ್ಕುನೂರಕ್ಕೂ ಮೀರಿದ ದಾಸರಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' - ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೆ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆ ನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆಯ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು

ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ'ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯದಲ್ಲಿ ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ಹರಿದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿಧ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾ ನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದುಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯ ವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದೂ, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದೂ ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು* ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ-ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು, ಕೆಳಗೆ 'ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ-ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿಕೊಡಬೇಕು-ಎಂಬುದಾಗಿ ನಿರ್ಧರಿಸಲಾಯಿತು.

---

*ಇವುಗಳಲ್ಲಿ ಕೆಲವುಗಳಿಗೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ, ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ, ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ, "ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ" ಎಂದು ಘೋಷಿಸಿದರು. ಅದರಂತೆ, ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಡಾ. ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ.ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಡಾ. ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿವೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತಿದ್ದೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ-ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ


| | ವಿಷಯ | ಪುಟ |
|---|---|---|
| ೧. | ಮುನ್ನುಡಿ | 5 |
| ೨. | ಎರಡು ಮಾತು | 7 |
| ೩. | ಯೋಜನೆಯ ಕುರಿತು | 9 |
| ೪. | ಪ್ರಕಾಶಕರ ಮಾತು | 11 |
| ೫. | ಸಂಪಾದಕ ಮಂಡಲಿಯ ನುಡಿ | 13 |
| ೬. | ಪ್ರಸ್ತಾವನೆ | 23 |
| ೭. | ಕೀರ್ತನೆಗಳ ಕ್ರಮಸೂಚಿ | 51 |
| ೮. | ಕೀರ್ತನೆಗಳು | ೧–೪೨೫ |
| ೯. | ಅನುಬಂಧಗಳು | ೩೧೧–೩೪೧ |
| | *೧. ಕಠಿಣಶಬ್ದಗಳ ಅರ್ಥ* | *೩೧೩–೩೨೦* |
| | *೨. ಟಿಪ್ಪಣಿಗಳು* | *೩೨೧–೩೨೫* |
| | *೩. ಕೀರ್ತನೆಗಳ ಅಕಾರಾದಿ* | *೩೨೬–೩೪೧* |

# ಪ್ರಸ್ತಾವನೆ

## ಕಾಖಂಡಕಿ ಕೃಷ್ಣದಾಸರು

ಹರಿದಾಸರು, ಶ್ರೇಷ್ಠ ಅನುಭಾವ ಕವಿಗಳೂ ಆದ ಕಾಖಂಡಕಿಯ ಮಹಿಪತಿ ರಾಯರ ಮಕ್ಕಳು ಕೃಷ್ಣದಾಸರು. ತಂದೆಯ ದಾರಿಯಲ್ಲಿ ಸಾಗಿದ ಕೃಷ್ಣದಾಸರು ಏಳುನೂರಕ್ಕೂ ಮಿಕ್ಕಿದ ಕೀರ್ತನೆಗಳನ್ನು ಬರೆದಿದ್ದಾರೆ, ಉಗಾಭೋಗ, ಒಂದು ಸುಳಾದಿ ಅನೇಕ ವಚನಗಳ ಜೊತೆಗೆ ಅನೇಕ ಖಂಡ ಕಾವ್ಯಗಳನ್ನೂ, ಆಖ್ಯಾನ-ಗಳನ್ನೂ ರಚಿಸಿದ್ದಾರೆ. ವಿಜಾಪುರ ಹಾಗು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಕೃಷ್ಣದಾಸರ ಕೃತಿಗಳು ಜನಪ್ರಿಯವಾಗಿವೆ.

ಮಹಿಪತಿರಾಯರಂತೆ ಅವರ ಮಕ್ಕಳಾದ ಕೃಷ್ಣದಾಸರು ತಮ್ಮ ಕುರಿತು ಚಾರಿತ್ರಿಕವಾಗಿ ಏನನ್ನೂ ಹೇಳಲಿಲ್ಲ. ಆದರೂ ಮಹಿಪತಿರಾಯರ ಕುರಿತು ಕೃಷ್ಣದಾಸರ ಮೊಮ್ಮಕ್ಕಳು ಅಲ್ಲಲ್ಲಿ ಹೇಳಿರುವರು. ರುಕ್ಮಜದಾಸನೆಂಬ ಕವಿಯ ಮರಾಠಿ ಅಪೂರ್ಣ ಕಾವ್ಯ ದೊರೆಯುತ್ತದೆ. ಆದರೆ ಕೃಷ್ಣದಾಸರ ಕುರಿತು ಏನೂ ದೊರೆಯುವುದಿಲ್ಲ.

ಪರಂಪರೆಯಿಂದ ಕೇಳಿಬಂದ ಚರಿತ್ರೆಯಂತೆ, ಮಹಿಪತಿರಾಯರಿಗೆ ಇಬ್ಬರು ಮಕ್ಕಳು. ಒಬ್ಬರ ಹೆಸರು ದೇವರಾಯ ಇನ್ನೊಬ್ಬರ ಹೆಸರು ಕೃಷ್ಣದಾಸ. ಅವರ ಕಾಲ ಕ್ರಿ.ಶ. ಸು. ೧೬೭೩ ರಿಂದ ೧೭೨೯[೧]. ಮಹಿಪತಿರಾಯರು ತಮ್ಮ ಸಾಧನೆಗೆ ವಿಜಾಪುರದ ಹತ್ತಿರದ ಕಾಖಂಡಕಿ ಗ್ರಾಮದಲ್ಲಿ ಬಂದು ವಾಸಮಾಡ ಹತ್ತಿದರು.

೧. ಡಾ ॥ ಕೃಷ್ಣ ಕೊಲ್ಹಾರ ಕುಲಕರ್ಣಿ – ಕಾಖಂಡಕಿ ಶ್ರೀ ಮಹಿಪತಿರಾಯರು

ಅಲ್ಲಿ ಅವರಿಗೆ ಅವಳಿ ಮಕ್ಕಳ ಜನನವಾಯಿತು. ದೇವರಾಯರು ತಮ್ಮ ಕ್ಷಾತ್ರ ವೃತ್ತಿಯಿಂದ ಜಾಲವಾದಿಯ ದೇಸಗತಿಯನ್ನು ಸಂಪಾದಿಸಿದರು. ಅಂದಿನ ಕಾಲದಲ್ಲಿ 'ಡೋಣ ಶಿವಾಜಿ' ಎಂದು ಹೆಸರು ಗಳಿಸಿದರು. ಕೃಷ್ಣದಾಸರು ತಂದೆಯ ಮಾರ್ಗದರ್ಶನದಲ್ಲಿ ತಾಳ ತಂಬೂರಿಗಳನ್ನು ಹಿಡಿದರು. ಹರಿದಾಸರಾದರು. ಕೃಷ್ಣದಾಸರಿಗೆ ಏಳು ಜನ ಗಂಡು ಮಕ್ಕಳು. ಅವರ ಮನೆತನದ ವಂಶಾವಳಿಯಲ್ಲಿ ಎಲ್ಲ ಏಳು ಜನರ ಹೆಸರುಗಳೂ ದೊರೆಯುತ್ತವೆ. ಬಹುತೇಕ ಅವೆಲ್ಲ ಮನೆತನಗಳು ಇಂದಿಗೂ ಜೀವಂತವಾಗಿವೆ. ಮಹಿಪತಿರಾಯರ ವೃಂದಾವನದ ಹತ್ತಿರ ಕಾಖಂಡಕಿಯಲ್ಲಿ ಕೃಷ್ಣದಾಸರ ವೃಂದಾವನವೂ ಇದೆ. ಅಲ್ಲಿ ಪ್ರತಿವರುಷ ಮಾಘ ಶುದ್ಧ ದ್ವಾದಶಿಯಂದು ಆರಾಧನೆ ಜರುಗುತ್ತದೆ. ಕೃಷ್ಣದಾಸರ ಮುದ್ರಿಕೆಗಳು:- ಮಹಿಪತಿನಂದನ, ಮಹಿಪತಿಕಂದ, ಮಹಿಪತಿಸುತ, ಮಹಿಪತಿಸುತ ಪ್ರಭು, ಮಹಿಪತಿನಂದನ ಕೈವಾರಿ, ಮಹಿಪತಿಚಿನ್ನ ಪ್ರಭು, ಮಹಿಪತಿಜ, ಮಹಿಪತಿ ಅಣುಗ, ಬಾಬಾಮಹಿಪತಿ, ಗುರುಮಹಿಪತಿ ಪ್ರಭು, ತಂದೆ ಮಹಿಪತಿ, ತಂದೆ ಮಹಿಪತಿ ನಂದನ, ತಂದೆ ಗುರುವರಮಹಿಪತಿ, ತಂದೆ ಮಹಿಪತಿನಂದನ ಪ್ರಾಣ, ತಂದೆ ಮಹಿಪತಿನಂದನ ಸಾರಥಿ, ತಂದೆ ಮಹಿಪತಿಕಂದ, ತಂದೆ ಮಹಿಪತಿಬಾಲ, ಗುರುಮಹಿಪತಿಸುತ, ಗುರುವರ ಮಹಿಪತಿ ಮತ್ತು ಗುರುವರ ಮಹಿಪತಿ ನಂದನ, ಕೃಷ್ಣನ ಸ್ವಾಮಿ.

ಕೃಷ್ಣದಾಸರ ಸುಮಾರು ೭೫೦ಕ್ಕಿಂತ ಅಧಿಕ ಕೃತಿಗಳನ್ನು ಇಲ್ಲಿ ಸಂಪಾದಿಸಲಾಗಿದೆ. ಅವುಗಳನ್ನು

೧. ದೇವತಾಸ್ತುತಿ

೨. ಗುರುಸ್ತೋತ್ರ

೩. ಗುರುಭಕ್ತಿ

೪. ಲೋಕ ಸಂಗ್ರಹ ಹಾಗು

೫. ಸಮ್ಮಿಶ್ರ ಎಂದು ಐದು ವಿಭಾಗಗಳಲ್ಲಿ ವಿಂಗಡಿಸಲಾಗಿದೆ.

## ದೇವತಾ ಸ್ತೋತ್ರ

ಮೂಲತಃ ಮಾಧ್ವರಾದ ಕೃಷ್ಣದಾಸರು ಮಧ್ವ ಸಿದ್ಧಾಂತ ಅನುಗುಣವಾಗಿ ದೇವತಾ ತಾರತಮ್ಯದ ಸ್ತುತಿ-ಪರ ಕೀರ್ತನೆಗಳನ್ನು ರಚಿಸಿದ್ದಾರೆ. ತಂದೆ ಮಹಿಪತಿರಾಯರದು ಯೋಗ ಪ್ರಧಾನವಾದ ಸಾಧನೆಯಾಗಿತ್ತು. ಅಲ್ಲಿ ಕಾಣದ ಸಾಹಿತ್ಯ ಮಗನಲ್ಲಿ ವಿಪುಲವಾಗಿ ರಚಿತವಾಗಿದೆ.

ಹರಿಸರ್ವೋತ್ತಮತ್ವವನ್ನು ಪ್ರತಿಪಾದಿಸುವಾಗ ಶ್ರೀಹರಿಯ ಗುಣಗಾನವನ್ನು ಮಾಡುವಾಗ ಆತನ ಹತ್ತು ಅವತಾರಗಳಿಗೆ ವಿಶೇಷ ಪ್ರಾಧ್ಯಾನವನ್ನು ಕೊಟ್ಟಿದ್ದಾರೆ. ಉಳಿದ ಹರಿದಾಸರಂತೆ ರಾಮಾಯಣ ಭಾಗವತಗಳ ಕಥಾನಕಗಳು, ಹರಿಭಕ್ತರ ಉಲ್ಲೇಖಗಳು ಹೇರಳವಾಗಿ ಬರುತ್ತವೆ. ಪರಮಾತ್ಮನಲ್ಲಿ ಅನನ್ಯವಾದ ಭಕ್ತಿ, ಸರ್ವಸಮರ್ಪಣ ಭಾವ, ಆತನ ದರ್ಶನ ಕುತೂಹಲ, ಆರ್ತ ಭಾವ, ವಾತ್ಸಲ್ಯ ಅವರ ಕೃತಿಗಳಲ್ಲಿ ಉಕ್ಕಿ ಹರಿದಿವೆ.

ಅವರ ೭೫೦ಕ್ಕಿಂತ ಅಧಿಕ ಕೃತಿಗಳಲ್ಲಿ ಸುಮಾರು ನಾಲ್ಕು ನೂರು ಕೃತಿಗಳು ದೇವತಾ ಸ್ತುತಿಗೆ ಮೀಸಲಾಗಿದೆ.

'ಬರೆ ವಾಚಾಭಿಮಾನವೇತಕೆ
ಹರಿ ಲೀಲಾಮೃತ ಸೇವಿಸಲಿಕ್ಕೆ'

ಎಂಬುದು ಅವರ ಅಭಿಪ್ರಾಯ 'ಸಂಸ್ಕೃತ ವಂದ್ಯ ಪ್ರಾಕೃತ ನಿಂದ್ಯ - ಸುಕೃತಿಗಳಾಡುದೇ ಕುಂದಾ' ಎಂದು ಸಂಸ್ಕೃತ ಪಂಡಿತರಿಗೆಯೇ ಅದು ಕುಂದು ಎನ್ನುತ್ತಾರೆ. 'ಕನ್ನಡ ನುಡಿ ಎಂದ್ಹಳಿಯಬೇಡಿ ಕನ್ನಡಿ ದರ್ಪಣವಲ್ಲವೆ ನೋಡಿ' ಎನ್ನುವಾಗ ಸ್ವರೂಪ ದರ್ಶನ ಕನ್ನಡ ಮಾಧ್ಯಮದಿಂದಲೇ ಸಾಧ್ಯವೆನ್ನುತ್ತಾರೆ.

ಕೃಷ್ಣದಾಸರು ಮಾಧ್ವರು. ಮಧ್ವಮತದ ಅನುಸಾರವಾಗಿ ತಾರತಮ್ಯೋಕ್ತ ದೇವತಾ ಸ್ತುತಿಗಳನ್ನು ರಚಿಸಿದ್ದರೂ ಅವುಗಳಲ್ಲಿ ಪರಮಾತ್ಮನ ಸ್ತುತಿಗೆ ಅಧಿಕ ಪಾಲು ದೊರೆತಿದೆ.

ದೊರೆತ ಸುಮಾರು ೪೦೦ಕ್ಕಿಂತ ಅಧಿಕ ದೇವತಾ ಸ್ತುತಿಪರವಾದ ರಚನೆಗಳಲ್ಲಿ ತುಳಸಿ, ಕೃಷ್ಣವೇಣಿ, ಭಾಗೀರಥಿ, ಗಣಪತಿ, ಪಾರ್ವತಿ, ಶಿವ, ಹನುಮಂತ, ಶಾರದೆ, ಲಕ್ಷ್ಮೀ, ವೇದವ್ಯಾಸರು ಹಾಗು ಭಗವದ್ಗೀತೆಗಳ ಕುರಿತು ಸುಮಾರು ೨೦ ಕೃತಿಗಳಿವೆ. ಅದರಲ್ಲೂ ಅರ್ಧದಷ್ಟು ಶಿವನ ಸ್ತುತಿಪರಕೃತಿಗಳು. ಸಮಕಾಲೀನ ಉತ್ತರಾದಿ ಮಠದ ಯತಿಗಳಾದ ಶ್ರೀ ಸತ್ಯ ಪೂರ್ಣರ ಕುರಿತು ಮೂರು ಕೃತಿಗಳಿವೆ. ಉಳಿದಂತೆ ಯಾವ ಮಾಧ್ವಯತಿಗಳಾಗಲೀ, ಹರಿದಾಸ ಪರಂಪರೆಯ ತಮ್ಮ ಹಿಂದಿನ ಯಾವ ದಾಸರನ್ನು ಸ್ಮರಿಸದಿದ್ದದು ವಿಶೇಷವಾಗಿದೆ. ಪುರಂದರ – ಕನಕ ದಾಸರನ್ನೂ ಸ್ಮರಿಸುವುದಿಲ್ಲ. ಆದರೆ ಅವರ ಹಾಗು ಸಮಕಾಲೀನ ಎಲ್ಲ ಹರಿದಾಸರ ಕೃತಿಗಳ ಪರಿಚಯ ಅವರಿಗಿತ್ತು ಎಂಬುದನ್ನು ಕಾಣಬಹುದಾಗಿದೆ. ಅವರ ಕೃತಿಗಳೊಂದಿಗೆ ಶಿವಶರಣರ ವಚನಗಳೂ ಅವರಿಗೆ ಪರಿಚಿತವಾಗಿದ್ದುವು ಎನ್ನಲು ಅವರ ಪ್ರಭಾವದಲ್ಲಿಯೇ ರಚಿಸಿದ ಹಲವಾರು ವಚನಗಳಿಂದ ಕಾಣಬಹುದು.

ಕೃಷ್ಣದಾಸರ ದೇವತಾ ಸ್ತುತಿಗಳ ವೈಶಿಷ್ಟ್ಯವೆಂದರೆ, ಪ್ರಾಸ–ಅನುಪ್ರಾಸ ಹಾಗು ಪೌರಾಣಿಕ ಕಥೆಗಳ ಗಾಢ ಪ್ರಭಾವ, ಭಾರತ, ಭಾಗವತ ಹಾಗು ರಾಮಾಯಣಗಳ ಅತಿ ಸಣ್ಣ ಪಾತ್ರವೂ ಅವರ ತುದಿನಾಲಿಗೆಯ ಮೇಲಿರಬೇಕು. ಶಿವನ ಮೇಲಿನ ಒಂದು ಷಟ್ಪದಿ.

ನಕ್ಷತ್ರರಮಣನಯ್ಯನಿಗೊಲಿದು ಶರವನ್ನಿತ್ತೆ ।
ನಕ್ಷತ್ರದೊಲ್ಲಭನ ತಮ್ಮನಸುತನ ಸುಟ್ಟೆ ।
ನಕ್ಷತ್ರ ಇಲ್ಲದವನ ವೈರಿಗಮನನ ತಾತ ನಕ್ಷತ್ರಕಾಂತಧರನೆ ॥

ನಕ್ಷತ್ರ ಜಾತನಗ್ರಜನ ಮಸ್ತಕವ ತರಿದೇ ।
ನಕ್ಷತ್ರ ಸಹಸ್ರ ಉಳ್ಳವನ ದ್ವಾರವನು ಕಾಯ್ದೆ ।
ನಕ್ಷತ್ರ ನೀನೆ ಇಂದ್ರಾದಿದೇವತೆಗಳಿಗೆ ಗುರು
ಮಹಿಪತಿ ಸ್ವಾಮಿ ನಕ್ಷತ್ರ ಭೂಷ ಸಲಹೋ ॥

ಇಲ್ಲಿಯ ಪ್ರತಿಯೊಂದು ನಕ್ಷತ್ರಗಳು ೨೭ ನಕ್ಷತ್ರಗಳಲ್ಲಿಯ ಒಂದಾಗಿದ್ದು ಅವುಗಳ ಹೆಸರಿನಿಂದ ಭಾರತ ಭಾಗವತಾದಿಗಳಲ್ಲಿಯ ಉಪಕಥೆಗಳನ್ನು ನೆನಪಿಸುತ್ತಾರೆ. ನಕ್ಷತ್ರ ರಮಣಯ್ಯನಿಗೆ ಒಲಿದು ಶರವನ್ನಿತ್ತೆ ಎಂದಾಗ ಉತ್ತರೆ (ನಕ್ಷತ್ರ) ಯ ಗಂಡ ಅಭಿಮನ್ಯುವಿನ ಅಪ್ಪ ಅರ್ಜುನನಿಗೆ ಒಲಿದು ಪಾಶು-ಪತಾಸ್ತ್ರವನ್ನಿತ್ತವನು ಶಿವನೆಂದಾಗುತ್ತದೆ. ಮಹಾಭಾರತದಲ್ಲಿ ಬರುವ ಕಥೆ.

ಎರಡನೆಯ ಸಾಲು, ನಕ್ಷತ್ರದೊಲ್ಲಭನ ತಮ್ಮನ ಸುತನ ಸುಟ್ಟೆ ಎನ್ನುವಾಗ ರೇವತಿ (ನಕ್ಷತ್ರ)ಯ ಗಂಡ ಬಲರಾಮನ ತಮ್ಮ ಕೃಷ್ಣನ ಮಗ ಮನ್ಮಥನನ್ನು ಸುಟ್ಟ ಶಿವ ಎಂದಾಗುತ್ತದೆ. ಮೂರನೆಯ ಸಾಲು, ನಕ್ಷತ್ರ ಇಲ್ಲದವನ ವೈರಿಗಮನನ ತಾತ ಎನ್ನುವಾಗ ಶ್ರವಣಾ (ನಕ್ಷತ್ರ)= ಕಿವಿ ಇಲ್ಲದ ಹಾವಿನ ವೈರಿ ನವಿಲಿನ ಮೇಲೆ ಹೋಗುವ ಷಣ್ಮುಖನ ಅಪ್ಪ ಶಿವ ಎಂದಾಯಿತು. ಹೀಗೆಯೇ ಪ್ರತಿಯೊಂದು ನಕ್ಷತ್ರಕ್ಕೂ ವಿಶೇಷ ಅರ್ಥವಿದೆ.

ಹೀಗೆ ಕಥೆ – ಉಪಕಥೆಗಳನ್ನು ಹೆಣೆದು ಸ್ತುತಿಸುವ ದಾಸರು ಅದೇ ಶಿವನನ್ನು 'ದೇಹ ದೇವಾಲಯದಲ್ಲಿ ಹೃದಯ ಜಲ ಹರಿಯಲಿ ಊಹಿಸಿ ನೆಲೆಯಾಗಿ ಹೊಳೆವ ಆತ್ಮಲಿಂಗ' ಪೂಜೆ ಮಾಡುವ ಬನ್ನಿ ಎನ್ನುವಾಗ ಅಪ್ಪಟ ಶಿವ ಶರಣರಾಗುತ್ತಾರೆ.

ಮಾಧ್ವರ ಮೋಕ್ಷಕ್ಕೆ ದಾರಿ ತೋರುವವನು ಹನುಮಂತ ಆತ 'ಮುಖ್ಯ ಪ್ರಾಣದೇವರೂ ಹೌದು. ಅವನನ್ನು ಸ್ತುತಿಸುವ 'ಶರಣೆಂಬೆ ಗುರುರಾಯ' ಎಂಬ ಕೀರ್ತನೆಯಲ್ಲಿ ಶ್ರೀ ಮಧ್ವಾಚಾರ್ಯರ ಮಹಾಭಾರತ ತಾತ್ಪರ್ಯ ನಿರ್ಣಯ ಗ್ರಂಥದ ಸಾರವನ್ನೆ ಸಾಂಕೇತಿಕವಾಗಿ ಹೇಳಿದ್ದು ದಾಸರ ಪಾಂಡಿತ್ಯಕ್ಕೆ ಉದಾಹರಣೆಯಾಗಿದೆ.

ಲಕ್ಷ್ಮೀದೇವಿಯನ್ನು ಸ್ತುತಿಸುವ 'ಎದ್ದಳಿಗಿದಕೋ ಶ್ರೀರಮಣಿ ಎಲ್ಲಳೀಗಿದಕೋ' ಎಂಬ ಕೀರ್ತನೆ ಅವರ ಶೃಂಗಾರ ಕಲ್ಪನೆಗೆ ಹೆಸರಾಗಿದೆ. 'ಮುದ್ದು ಶ್ರೀ ಹರಿಯ ತೋಳತೆಕ್ಕೆಯ ನುಸುಳಿ' ಎದ್ದಳಂತೆ ! ಹಿಂದಿನ ರಾತ್ರಿ ಪರಮಾತ್ಮನೊಡನಾದ

ರತಿಕ್ರೀಡೆಯನ್ನು ನವಿರಾಗಿ ಹೇಳುತ್ತ, ಕೊನೆಯಲ್ಲಿ 'ತನ್ನ ನಂಬಿದ ಬಾಲರ ಹೊರೆಯಲು ಈರೇಳು ಜಗದ ಜೀವನ ಪಡೆದ ಜನನಿ' ಎದ್ದಳಂತೆ

ಪರಮಾತ್ಮನನ್ನು ಸ್ತುತಿಸಲು ಶಬ್ದಗಳೇ ಸಾಲವು. ಆತನ ದರ್ಶನ ಕುತೂಹಲ ಆಗಮನ, ಬಾಲಲೀಲೆ, ಶ್ರೀ ಹರಿಯ ಹತ್ತವತಾರಗಳ ವರ್ಣನೆಯನ್ನು ಮಾಡುವಾಗ ದಾಸರು ತನ್ಮಯರಾಗಿ ಬಿಡುತ್ತಾರೆ. ಅವನೊಂದಿಗಿನ ದಾಸ್ಯ, ಸಖ್ಯ–ವಾತ್ಸಲ್ಯ ಭಾವನೆಗಳೊಂದಿಗೆ ವಿರಹದಿಂದ ಬಳಲಿದ್ದಾರೆ.

'ಭಕುತರರಿಣಕಂಜಿ ಅಡಗಿದರೇ
ಅಖಿಳದಿ ಬಿಡುವರೇ ಪ್ರಕಟಿಸಿ ಬಾ ರಂಗಯ್ಯ'

ಎಂದು ಪ್ರಾರಂಭವಾಗುವ ಮೂರು ನುಡಿಗಳ ಕೀರ್ತನೆಯಲ್ಲಿ ಶ್ರೀಹರಿಯ ದಶಾವತಾರಗಳನ್ನು ಸುಂದರವಾಗಿ ಸ್ಮರಿಸುತ್ತಾರೆ "ಕತ್ತಲೆಯೊಳು ಹೆಜ್ಜೆದೊರದೇ ತಿರುಗುತಾ " (ಮತ್ಸ್ಯ) ಮತ್ತೆ ದೊಡ್ಡ ಬೆಟ್ಟದಾ ಮರಿಲ್ಯಾಡುತಾ (ಕೂರ್ಮ) ಅತ್ತತ್ತ ನೋಡದವೆ ಝುಡಪಿನೊಳು ಹೊಕ್ಕು (ವರಾಹ) ಉತ್ತಮ ನರಮೃಗ ದಂತಡವಿಯ ಸೇರಿ (ನಾರಸಿಂಹ) ಹೀಗೆ ಸಾಗುತ್ತದೆ.

ರಾಮ ಬಂದನೇನೆ ಶ್ರೀ ರಘುರಾಮ ಬಂದನೇನೆ, ಪ್ರೇಮಿಕ ಜನರನ್ನು ಪೊರೆಯಲು ಎಂಬ ೫ ನುಡಿಗಳ ಕೀರ್ತನೆ ಪದಗಳ ಅನುರಣನದಿಂದ ಕರ್ಣಮಧುರವಾಗಿದೆ.

'ನಮ್ಮರಂಗ ಮಧುರೆಗೆ ನಡೆತರಲು' ಎಂಬ ಒಂಭತ್ತು ನುಡಿಗಳ ನಿಡಿದಾದ ಕೃತಿಯಲ್ಲಿ ದಾಸರ ಕಲ್ಪನೆ ಗರಿ ಕಟ್ಟುತ್ತದೆ. ವೃಂದಾವನದಿಂದ ಅಕ್ರೂರನೊಡನೆ ಮಥುರೆಗೆ ಹೋಗುವಾಗ ಕೃಷ್ಣನ ಅಗಲುವಿಕೆಯ ಚಿತ್ರ ಅನೇಕ ಕೃತಿಗಳಲ್ಲಿ ಬಂದಿದೆ. ಆದರೆ ಇಲ್ಲಿ ಕೃಷ್ಣ ಮಥುರಾ ನಗರದಲ್ಲಿ ಪ್ರವೇಶಿಸಿದಾಗ ಆಗಲೇ ಆತನ ಮಹಿಮೆಯನ್ನು ಕೇಳಿದ ಜನರು ಹೇಗೆ ಸ್ಪಂದಿಸಿದರು ಎಂಬುದನ್ನು ದಾಸರು ತುಂಬ ಸುಂದರವಾಗಿ ಚಿತ್ರಿಸಿದ್ದಾರೆ.

ಮೋಹನಕೃಷ್ಣನನ್ನು ಕಾಣಲು ಒಬ್ಬಳು ಅಳುತ್ತಿರುವ ಕಂದನಿಗೆ ಮೊಲೆ ಕೊಡದೆ ಬಂದರೆ ಇನ್ನೊಬ್ಬಳು ತಲೆಗೆ ಎಣ್ಣೆ ಹಚ್ಚಿಕೊಳ್ಳುತ್ತಿರುವಾಗ ಅರ್ಧದಲ್ಲಿಯೇ ಬಂದಳಂತೆ. ಮತ್ತೊಬ್ಬಳ ಕುಪ್ಪಸದ ಗುಂಡಿ ಬಿಚ್ಚಿದ ಅರಿವೇ ಇಲ್ಲದೇ ಬಂದರೆ ಮಗದೊಬ್ಬಳು 'ಅಚ್ಚ ಮೈಯಿಂದ ಬಚ್ಚಲಲ್ಲಿ ಮಜ್ಜಕ್ಕೆ ಕುಳಿತವಳು' ಹಾಗೆಯೇ ಬಂದಳಂತೆ. ಇನ್ನೊಬ್ಬಳು ಗಡಿಬಿಡಿಯಲ್ಲಿ ತನ್ನ ಮಗುವೆಂದು ಅಳತೆಯ ಮಾನವನ್ನು ಬಗಲಲ್ಲಿ ಇಟ್ಟುಕೊಂಡು ಬಂದು ಕಣ್ಣು ಪಾರಣೆ ಮಾಡಿಕೊಂಡಳಂತೆ. ಮುನ್ನಿನ ದೋಷಗಳನ್ನೆಲ್ಲ ಪರಿಹರಿಸಿಕೊಂಡು ಪುಣ್ಯ ಸಂಗ್ರಹ ಮಾಡಿದಳಂತೆ!

'ಅಹುದಹುದು ಅನಾಥ ಬಂಧು' ಪರಮಾತ್ಮನು ಎಂಬಾಗ ತಮ್ಮ ಕುರಿತು 'ಪತಿತರೊಳು ಪತಿತ ಅಧಮಾ ಆಮ್ಯಾಲ ಮತಿಹೀನ ಮೂಢ ಪರಮ' ರೆಂದು ಹೇಳಿಕೊಳ್ಳುತ್ತ ಅನಾಥ ಬಂಧುವು 'ಮಹಿಪತಿ ಸುತನ ಕರ ಪಿಡಿದು ತನ್ನ ದಾಸರ ದಾಸ ದಾಸನೆನಿಸಿದ' ನಂತೆ !

'ಈ ಪರಿಯ ಸೊಬಗಿನ್ನಾವ ದೇವರಲ್ಲಿ ಕಾಣೆ' ಎಂದು ಪುರಂದರದಾಸರು ಹೇಳಿದರು. ಆದರೆ ಆ ಸೊಬಗು ಮಾತ್ರದಿಂದಲಲ್ಲ' ಎಂದೆಂದು ಆತನ ಜನ ಬಂಧು ಧೀನನಾಥ ತಂದೆ ಮಹಿಪತಿ ಸ್ವಾಮಿಯಂದರೇನು ಮಂದಮತಿ ಕುಂದು ಘನವಂದು ನೋಡದೆ. ಇಂದು ನಂದನನಿಗೆ ಸೇವೆ ಪದಲಿಡದಿದ್ದರೆ' ಆರು ನಿನಂಘ್ರಿ ಭಜಿಸುವರಯ್ಯಾ ಎಂದು ಪರಮಾತ್ಮನನ್ನು ಕೇಳುತ್ತಾರೆ. ಆತ ಕಮಲಭವ ಇಂದ್ರವಂದ್ಯನಾಗಿರಬೇಕು, ರಮೆ 'ಧರಾದೇವಿಯ ರಮಣನಾಗಿರಬೇಕು ಜಗದುತ್ಪತ್ತಿ ಸ್ಥಿತಿಯ ಕರ್ತನಾಗಿರಬೇಕು ಆದರೆ ಯಮ ದೂತರೊಳಗಾದ ಅಜಮಿಳ, ಸುಗುಣ ಪ್ರಹ್ಲಾದ ಅಂಬರೀಷ ಕರಿವರ ಧ್ರುವಾದಿಗಳನುದ್ಧರಿಸಿ ಕಾಯದಿದ್ದರೆ' ಯಾರು ಆತನ ಅಂಘ್ರಿಗಳನ್ನು ಭಜಿಸುತ್ತಿದ್ದರು? ಆತನು ಸಾರ ಹೃದಯ ಸುರ ಮುನಿಜನ ಪ್ರಿಯನಾಗಿದ್ದರಿಂದಲೇ ಆತನ ಮಹಿಮೆ ತಾನೆ ? ಎನ್ನುತ್ತಾರೆ.

'ಇಂದಿರೇಶನ ಇಂದುವದನವ ಕಂಡು' ಧನ್ಯರಾದ ದಾಸರು 'ಮುಕುಂದನ ಕೃಪೆಯಿಂದ ಪರಮಾನಂದ' ರಾಗಿದ್ದಾರೆ.

## ಗುರುಸ್ತೋತ್ರ ಗುರುಭಕ್ತಿ

ಪರಮಾತ್ಮನ ಸ್ತುತಿಯ ಅನಂತರ ಕೃಷ್ಣದಾಸರ ಬಹುತೇಕ ಕೃತಿಗಳು ತಮ್ಮ ಗುರುಗಳಾದ ಸ್ವರೂಪೋದ್ಧಾರಕರಾದ ತಂದೆ ಮಹಿಪತಿ ರಾಯರ ಕುರಿತಾಗಿವೆ. ಸುಮಾರು ನೂರಕ್ಕಿಂತ ಅಧಿಕ ಕೃತಿಗಳಲ್ಲಿ ಮಹಿಪತಿರಾಯರನ್ನು ಸ್ತುತಿಸಿದ್ದಾರೆ.

ಗುರುವಿನ ಕರುಣೆ ಅಗಾಧವಾದದ್ದು ಎನ್ನುತ್ತಾರೆ. ತುಂಬಿದ ಭವ ಮಹಾಶರಧಿಯಲ್ಲಿ ಒಂಭತ್ತು ಛಿದ್ರದ ನಾವೆಯಲ್ಲಿ ನಂಬಿದ ಶರಣರನ್ನು ದಾಟಿಸುವ ಅಂಬಿಗನಾಗಿದ್ದಾನೆ. ಹರಿಯೆಲ್ಲರೊಳೆಂಬುದನ್ನು ಸಾರುತ್ತ ಹರಿಭಕ್ತಿಯ ಕೀಲವನ್ನು ತೋರಿಸಿ, ಜನನ–ಮರಣದ ದಾರಿಯನ್ನು ಹರಿಸಿದ್ದಾರೆ. ಗುರು ಮಹಿಪತಿ ಸ್ವಾಮಿಗಳ ಕರುಣೆ ಅಗಾಧವಾಗಿದೆ, ಅವರು ಪರಮ ಉದಾರಿಗಳು ಎನ್ನುತ್ತಾರೆ.

'ಎನಗಿನ್ಯಾವ ಹಂಗು, ಘನಗುರು ತಾನಾದ ಶ್ರಯಧೇನು' ಎಂದು ಹೇಳಿದರೆ, ಮತ್ತೊಮ್ಮೆ 'ಏನು ಪುಣ್ಯವ ಮಾಡಿದನೋ ಮುನ್ನೆ ಧನ್ಯಗೈಸಿದ ಗುರುಮಹೀಪತಿ ತಾನು' ಎನ್ನುತ್ತಾರೆ. 'ಏನೆಂದು ಬಣ್ಣಿಸಲಿ ಗುರುರಾಯನಾ, ತಾ ನೆನೆದರೆ ಧನ್ಯಗೈಸುವನು' ಎಂಬುದಾಗಿ ಗುರುಗಳ ಮಹಿಮೆಯನ್ನು ಬಣ್ಣಿಸುವುದೇ ಅಸಾಧ್ಯವೆನ್ನುತ್ತಾರೆ. ಅಂಥ 'ಗುರುರಾಯನ ಪಾದಗಳನ್ನು ಹಿಡಿ, ಹಿಡಿಹಿಡಿ ಪರಮ ಸದ್ಭಾವನೆ ಜಡಿ ಜಡಿಜಡಿ, ಎಂದು ಹೇಳುತ್ತಾರೆ.

'ಗುರುರಾಯನಂಥ ಕರುಣಾಳು ಕಾಣೆನು ಜಗದೊಳಗೆ' ಎಂದು ಪ್ರಾರಂಭವಾಗುವ ಐದು ನುಡಿಗಳ ಒಂದು ಕೃತಿಯಲ್ಲಿ ಗುರುಗಳ ಕರುಣೆಯನ್ನು ತುಂಬು ಹೃದಯದಿಂದ ಸ್ಮರಿಸುತ್ತಾರೆ. ಅಂತೆಯೇ 'ಗುರುರಾಯನಾ ಮನೆಯಾ ನಾಯಿ ನಾನು' ಎಂದು ಇನ್ನೊಂದು ಕೃತಿಯಲ್ಲಿ ಹೇಳುತ್ತ 'ಗುರು ಗುರು ಎನುತಲಿ ಇರುವೆ ಬಾಗಿಲದೊಳು' ಎನ್ನುತ್ತಾರೆ.

ಗುರುಗಳ ಆಶ್ರಯದ ಹೊರತು ದಾಸರಿಗೆ ಇನ್ನೇನೂ ಬೇಡ 'ಗುರು ಕ್ಷೇತ್ರವೇ ಎನಗಿದು ಕಾಶಿ' ಎನ್ನುತ್ತಾರೆ. ಗುರುಗಳು ಹಾಗು ತಮ್ಮ ತಂದೆ ಮಹಿಪತಿರಾಯರ

ಕುರಿತು ಅನನ್ಯವಾದ ಭಕ್ತಿ-ಸಂಪೂರ್ಣ ಸಮರ್ಪಣೆ ಕೃಷ್ಣದಾಸರದು. 'ಶರಣೆಂದು ಗುರುಮಹಿಪತಿ ಶುಭ ಚರಣಕ ಹೊಯ್ಯಂದ ಡಂಗುರವ' ಎಂದು ಹೇಳುತ್ತ 'ಸಂತರೊಳು ಮಹಂತನು ಈತನೆ', 'ಗುರು ಎಂದರೆ ಜಗದೊಳು ತಾನೆ ತಾನೇ' ಎಂದೆಲ್ಲ ಹೇಳುತ್ತ ಕೊನೆಗೆ 'ನರನಲ್ಲ ನರನಲ್ಲ ಅವತಾರ ದೇಹೆಂದು ಧರೆಯೊಳು ಮುಂಡಿಗೆ ಹಾಕುವೆ ಇದಕಿನ್ನು' ಎಂದು ಘಂಟಾ ಘೋಷವಾಗಿ ಹೇಳುತ್ತಾರೆ.

ಹೀಗೆ ತಮ್ಮ ಗುರುಗಳನ್ನು ಸ್ತುತಿಸಿದ ದಾಸರು ಸಾರ್ವತ್ರಿಕವಾಗಿ ಗುರುಭಕ್ತಿಯ ಮಹಿಮೆಯನ್ನು ಹಲವಾರು ಕೃತಿಗಳಲ್ಲಿ ಹೇಳುತ್ತಾರೆ. 'ಅವಗೆಲ್ಲಿಹುದೋ ನಿಜ ಮುಕ್ತಿ ದಾವಗಿಲ್ಲವೋ ಗುರುಪಾದ ಭಕ್ತಿ' ಎನ್ನುತ ಗುರುಪಾದ ಭಕ್ತಿ ಇರದಿದ್ದರೆ ಮುಕ್ತಿ ಇಲ್ಲವೆನ್ನುತ್ತಾರೆ. ಸದ್ಗುರುವಿನಿಂದಲೇ ಕೈವಲ್ಯವೆಂದು ಮತ್ತೊಂದು ಕೃತಿಯಲ್ಲಿ ಹೇಳುತ್ತಾರೆ 'ಏನಾದರೇನು ಗುರುದಯ ಪಡಿದನಕಾ ತಾನೊಲಿಯನು ಹರಿ ಕಾವನ ಜನಕಾ' 'ಎಲ್ಲಿ ಶ್ರೀ ಗುರುವಿನ ದಯದೊಲವಿಹುದು ಅಲ್ಲಿ ದುರಿತ ಭಯ ಮುಟ್ಟಲರೆಯದು' 'ಗುರು ಪರಂದೈವವೆಂದು ಗುರುಮನೆಯ ಹೊಕ್ಕು ಪಡಿ ಪರಗತಿ' 'ಗುರುಭಕ್ತನೇ ಧನ್ಯನು ಬಲು ಮಾನ್ಯನು' 'ಗುರುವಿನ ಕಾಣದೇ ಪರಗತಿ ದೊರೆಯದು' 'ಮೋಕ್ಷವಿಲ್ಲ ಗುರುಕೃಪೆವಿನಾ' ಎಂದು ಮುಂತಾಗಿ ಹಲವಾರು ಕೃತಿಗಳಲ್ಲಿ ಗುರು-ಗುರುಭಕ್ತಿಯ ಮಹಿಮೆಯನ್ನು ಬಣ್ಣಿಸಿದ್ದಾರೆ.

## ಲೋಕ ಸಂಗ್ರಹ

ಸಂತರು, ದಾಸರು, ಮಹಾತ್ಮರು, ತಮ್ಮ ಸಾಧನೆಯಿಂದ ಜನನ-ಮರಣಗಳನ್ನು ಹರಿದು ಮೋಕ್ಷವನ್ನು ಸಾಧಿಸುವುದರೊಂದಿಗೆ ಸುತ್ತಲಿನ ಸಮಾಜವನ್ನು ಉದ್ಧರಿಸುವುಗು ಅವರ ಪರಮ ಕಾರ್ಯಗಳಲ್ಲಿ ಒಂದು. ತಮ್ಮ ಅನುಭವಗಳ ಮೂಸೆಯಲ್ಲಿ ಜಗದ ವ್ಯಾಪಾರವನ್ನು ತಿಕ್ಕಿ-ತಿಕ್ಕಿ ನೋಡುತ್ತ ಈ ಬದುಕನ್ನು ಕುರಿತು ಹಲವಾರು ವಿಷಯಗಳನ್ನು ತಿಳಿಸಿ ಹೇಳುತ್ತಾರೆ. ಅವುಗಳನ್ನೇ ಕೆಲವರು 'ಬೋಧಪ್ರದ' ಎಂದೋ 'ಉಪದೇಶ'ವೆಂದೋ ಇಲ್ಲ 'ಲೋಕ ಸಂಗ್ರಹ'ವೆಂದೋ

ಕುರಿತು ಅನನ್ಯವಾದ ಭಕ್ತಿ–ಸಂಪೂರ್ಣ ಸಮರ್ಪಣೆ ಕೃಷ್ಣದಾಸರದು. 'ಶರಣೆಂದು ಗುರುಮಹಿಪತಿ ಶುಭ ಚರಣಕ ಹೊಯ್ಯಂದ ಡಂಗುರವ' ಎಂದು ಹೇಳುತ್ತ 'ಸಂತರೊಳು ಮಹಂತನು ಈತನ', 'ಗುರು ಎಂದರೆ ಜಗದೊಳು ತಾನೆ ತಾನೇ' ಎಂದೆಲ್ಲ ಹೇಳುತ್ತ ಕೊನೆಗೆ 'ನರನಲ್ಲ ನರನಲ್ಲ ಅವತಾರ ದೇಹೆಂದು ಧರೆಯೊಳು ಮುಂಡಿಗೆ ಹಾಕುವೆ ಇದಕಿನ್ನು' ಎಂದು ಘಂಟಾ ಘೋಷವಾಗಿ ಹೇಳುತ್ತಾರೆ.

ಹೀಗೆ ತಮ್ಮ ಗುರುಗಳನ್ನು ಸ್ತುತಿಸಿದ ದಾಸರು ಸಾರ್ವತ್ರಿಕವಾಗಿ ಗುರುಭಕ್ತಿಯ ಮಹಿಮೆಯನ್ನು ಹಲವಾರು ಕೃತಿಗಳಲ್ಲಿ ಹೇಳುತ್ತಾರೆ. 'ಅವಗೆಲ್ಲಿಹುದೋ ನಿಜ ಮುಕ್ತಿ ದಾವಗಿಲ್ಲವೋ ಗುರುಪಾದ ಭಕ್ತಿ' ಎನ್ನುತ ಗುರುಪಾದ ಭಕ್ತಿ ಇರದಿದ್ದರೆ ಮುಕ್ತಿ ಇಲ್ಲವೆನ್ನುತ್ತಾರೆ. ಸದ್ಗುರುವಿನಿಂದಲೇ ಕೈವಲ್ಯವೆಂದು ಮತ್ತೊಂದು ಕೃತಿಯಲ್ಲಿ ಹೇಳುತ್ತಾರೆ 'ಏನಾದರೇನು ಗುರುದಯ ಪಡಿದನಕಾ ತಾನೊಲಿಯನು ಹರಿ ಕಾವನ ಜನಕಾ' 'ಎಲ್ಲಿ ಶ್ರೀ ಗುರುವಿನ ದಯದೊಲವಿಹುದು ಅಲ್ಲಿ ದುರಿತ ಭಯ ಮುಟ್ಟಲರೆಯದು' 'ಗುರು ಪರಂದೈವವೆಂದು ಗುರುಮನೆಯ ಹೊಕ್ಕು ಪಡಿ ಪರಗತಿ' 'ಗುರುಭಕ್ತನೇ ಧನ್ಯನು ಬಲು ಮಾನ್ಯನು' 'ಗುರುವಿನ ಕಾಣದೇ ಪರಗತಿ ದೊರೆಯದು' 'ಮೋಕ್ಷವಿಲ್ಲ ಗುರುಕೃಪೆವಿನಾ' ಎಂದು ಮುಂತಾಗಿ ಹಲವಾರು ಕೃತಿಗಳಲ್ಲಿ ಗುರು–ಗುರುಭಕ್ತಿಯ ಮಹಿಮೆಯನ್ನು ಬಣ್ಣಿಸಿದ್ದಾರೆ.

## ಲೋಕ ಸಂಗ್ರಹ

ಸಂತರು, ದಾಸರು, ಮಹಾತ್ಮರು, ತಮ್ಮ ಸಾಧನೆಯಿಂದ ಜನನ–ಮರಣಗಳನ್ನು ಹರಿದು ಮೋಕ್ಷವನ್ನು ಸಾಧಿಸುವುದರೊಂದಿಗೆ ಸುತ್ತಲಿನ ಸಮಾಜವನ್ನು ಉದ್ಧರಿಸುವುಗು ಅವರ ಪರಮ ಕಾರ್ಯಗಳಲ್ಲಿ ಒಂದು. ತಮ್ಮ ಅನುಭವಗಳ ಮೂಸೆಯಲ್ಲಿ ಜಗದ ವ್ಯಾಪಾರವನ್ನು ತಿಕ್ಕಿ–ತಿಕ್ಕಿ ನೋಡುತ್ತ ಈ ಬದುಕನ್ನು ಕುರಿತು ಹಲವಾರು ವಿಷಯಗಳನ್ನು ತಿಳಿಸಿ ಹೇಳುತ್ತಾರೆ. ಅವುಗಳನ್ನೇ ಕೆಲವರು 'ಬೋಧಪ್ರದ' ಎಂದೋ 'ಉಪದೇಶ'ವೆಂದೋ ಇಲ್ಲ 'ಲೋಕ ಸಂಗ್ರಹ'ವೆಂದೋ

ಕರೆಯುತ್ತಾರೆ. ಕೃಷ್ಣದಾಸರ ಇಂಥ ಕೃತಿಗಳಲ್ಲಿ ಅಂದಿನ ಸಮಾಜದ ಚಿತ್ರಣ ಬಂದಿದೆ. ಅವರ 'ಲೋಕ ಸಂಗ್ರಹ' ಕೃತಿಗಳು ಒಂದು ಮತಕ್ಕೆ, ಜಾತಿಗೆ ಸಂಬಂಧಿಸಿದವುಗಳಲ್ಲ, ಇಡೀ ಮಾನವ ಕುಲಕ್ಕೇ ಸಂಬಂಧಿಸಿದ ಕೃತಿಗಳಾಗಿವೆ.

ಮನುಷ್ಯ ಜೀವನ ಸಾರ್ಥಕವಾಗಬೇಕಾದರೆ ಮೊದಲು ಆತನ ಸಹವಾಸ ಚೆನ್ನಾಗಿರಬೇಕು. ಸತ್ಸಂಗದಿಂದ ಏನೆಲ್ಲ ಸಾಧಿಸಬಹುದು. 'ಇದ್ದರಿರಬೇಕು ಅನುದಿನಾ ಒಳ್ಳೆವರರಾ ಸಹವಾಸಾ–ಗುರುವರ ಮಹಿಪತಿ ಸುತ ಪ್ರಭು ಸ್ಮರಣೆಯಾ ಮರಸು ಮರೆಸುವರದರುದ್ದೇಶ' 'ಕೇಳು ಹಿತವಾ ಬಾಳು ಮನವೇ ಸಾಧು ಸಂಗ ಮಾಡು' 'ಸತ್ಸಂಗವಿನಾ ಏನ ಸಾಧಿಸುವದೇನರದು' 'ಸಾಧುರ ಸಂಗವ ಮಾಡೋ ಪ್ರಾಣಿ.' 'ಸಾಧು ಸಂತರಾಶ್ರಯ ಮಾಡಿ' 'ಸಿಕ್ಕಲು ನೋಡೇ ಸತ್ಸಂಗ ಯನ ಗಕ್ಕಿತು ಸ್ವಾನುಭವದಂಗ.'

'ಸಂತರ ನೋಡಿರ್‍ಯೆ ಅನಂತನ ಪಾಡಿರ್‍ಯೆ', 'ಸಂತರ ಸಹವಾಸಮಾಡು ಮನುಜ ನೀ ಭ್ರಾಂತ ಜನರ ಸಂಗ ವೀಡ್ಯಾಡು' ಹೀಗೆ ಸಂತರ ಸತ್ಸಂಗದ ಮಹಿಮೆಯನ್ನು ಬಣ್ಣಿಸಿದ್ದಾರೆ.

'ಹೊತ್ತು ವ್ಯರ್ಥ ಹೋಗುತಿದಕೊ ಮುತಿನಂಥಾ' ಎಂದು ಹೇಳುವಾಗ ಬದುಕಿನಲ್ಲಿ ಸಾಧಿಸುವ ಮೋಕ್ಷದ ಗುರಿಯನ್ನು ಹೇಳುತ್ತಾರೆ. 'ಇಂದು ನರದೇಹದಿಂದ ಬಂದು ಬರಡ ಮಾಡಬ್ಯಾಡಿ ತಂದೆ ಮಹಿಪತಿ ದಯದಿಂದ ಮುಕ್ತಿಯ ಪಡಿಯಿರೋ' 'ಸಾರವಲ್ಲ ಸಂಸಾರವಿದು' ಎಂಬ ಕೃತಿಯಲ್ಲಿ ಜೀವನದ ಅನೇಕ ಪಾಶಗಳನ್ನು ವರ್ಣಿಸುತ್ತಾರೆ.

'ಶರೀರವ ಜರಿಯಬೇಡ – ಬೆರಿಯ ಬೇಡಾ ' ಎಂಬ ೫ ನುಡಿಗಳ ದೀರ್ಘ ಕೃತಿಯಲ್ಲಿ ಮನುಷ್ಯ ಈ ಶರೀರದಿಂದಲೆ ಏನೆಲ್ಲ ಸಾಧಿಸುತ್ತಾನೆಂಬುದನ್ನು ಬಹು ಸುಂದರವಾಗಿ, ಅಷ್ಟೇ ಮಾರ್ಮಿಕವಾಗಿ ಬಣ್ಣಿಸುತ್ತಾರೆ.

ಕರೆಯುತ್ತಾರೆ. ಕೃಷ್ಣದಾಸರ ಇಂಥ ಕೃತಿಗಳಲ್ಲಿ ಅಂದಿನ ಸಮಾಜದ ಚಿತ್ರಣ ಬಂದಿದೆ. ಅವರ 'ಲೋಕ ಸಂಗ್ರಹ' ಕೃತಿಗಳು ಒಂದು ಮತಕ್ಕೆ, ಜಾತಿಗೆ ಸಂಬಂಧಿಸಿದವುಗಳಲ್ಲ, ಇಡೀ ಮಾನವ ಕುಲಕ್ಕೇ ಸಂಬಂಧಿಸಿದ ಕೃತಿಗಳಾಗಿವೆ.

ಮನುಷ್ಯ ಜೀವನ ಸಾರ್ಥಕವಾಗಬೇಕಾದರೆ ಮೊದಲು ಆತನ ಸಹವಾಸ ಚೆನ್ನಾಗಿರಬೇಕು. ಸತ್ಸಂಗದಿಂದ ಏನೆಲ್ಲ ಸಾಧಿಸಬಹುದು. 'ಇದ್ದರಿರಬೇಕು ಅನುದಿನಾ ಒಳ್ಳೆವರರಾ ಸಹವಾಸಾ–ಗುರುವರ ಮಹಿಪತಿ ಸುತ ಪ್ರಭು ಸ್ಮರಣೆಯಾ ಮರಸು ಮರೆಸುವರದರುದ್ದೇಶ' 'ಕೇಳು ಹಿತವಾ ಬಾಳು ಮನವೇ ಸಾಧು ಸಂಗ ಮಾಡು' 'ಸತ್ಸಂಗವಿನಾ ಏನ ಸಾಧಿಸುವದೇನರದು' 'ಸಾಧುರ ಸಂಗವ ಮಾಡೋ ಪ್ರಾಣಿ.' 'ಸಾಧು ಸಂತರಾಶ್ರಯ ಮಾಡಿ' 'ಸಿಕ್ಕಲು ನೋಡೇ ಸತ್ಸಂಗ ಯನ ಗಕ್ಕಿತು ಸ್ವಾನುಭವದಂಗ.'

'ಸಂತರ ನೋಡಿರ್ರೈ ಅನಂತನ ಪಾಡಿರ್ರೈ', 'ಸಂತರ ಸಹವಾಸಮಾಡು ಮನುಜ ನೀ ಭ್ರಾಂತ ಜನರ ಸಂಗ ವೀಡ್ಯಾಡು' ಹೀಗೆ ಸಂತರ ಸತ್ಸಂಗದ ಮಹಿಮೆಯನ್ನು ಬಣ್ಣಿಸಿದ್ದಾರೆ.

'ಹೊತ್ತು ವ್ಯರ್ಥ ಹೋಗುತಿದಕೊ ಮುತಿನಂಥಾ' ಎಂದು ಹೇಳುವಾಗ ಬದುಕಿನಲ್ಲಿ ಸಾಧಿಸುವ ಮೋಕ್ಷದ ಗುರಿಯನ್ನು ಹೇಳುತ್ತಾರೆ. 'ಇಂದು ನರದೇಹದಿಂದ ಬಂದು ಬರಡ ಮಾಡಬ್ಯಾಡಿ ತಂದೆ ಮಹಿಪತಿ ದಯದಿಂದ ಮುಕ್ತಿಯ ಪಡಿಯಿರೋ' 'ಸಾರವಲ್ಲ ಸಂಸಾರವಿದು' ಎಂಬ ಕೃತಿಯಲ್ಲಿ ಜೀವನದ ಅನೇಕ ಪಾಶಗಳನ್ನು ವರ್ಣಿಸುತ್ತಾರೆ.

'ಶರೀರವ ಜರಿಯಬೇಡ – ಬೆರಿಯ ಬೇಡಾ ' ಎಂಬ ೫ ನುಡಿಗಳ ದೀರ್ಘ ಕೃತಿಯಲ್ಲಿ ಮನುಷ್ಯ ಈ ಶರೀರದಿಂದಲೆ ಏನೆಲ್ಲ ಸಾಧಿಸುತ್ತಾನೆಂಬುದನ್ನು ಬಹು ಸುಂದರವಾಗಿ, ಅಷ್ಟೇ ಮಾರ್ಮಿಕವಾಗಿ ಬಣ್ಣಿಸುತ್ತಾರೆ.

'ಶರಣಾರ್ಥಿ ಶಿವ ಶರಣಾರ್ಥಿ - ಹರಿಹರ ಎಂದು ಶಿವಪದ ಕಂಡವಗೆ' ಎಂಬ ಕೃತಿಯಲ್ಲಿ ಹರಿ-ಹರ ಅಭೇದವನ್ನು ಕಾಣಿಸುತ್ತಾರೆ. 'ಮಾನವಾದಮ್ಯಾಲ ತಾನಾರೆಂದರಿಯ ಬೇಕು' ಎಂಬ ಕೃತಿಯಲ್ಲಿ ಮಾನವ ಧರ್ಮವನ್ನು ಹೇಳುತ್ತಾರೆ. ಮನುಷ್ಯ-ರಾಕ್ಷಸರು ಇಲ್ಲಿಯೇ ಇದ್ದಾರೆಂದು ತೋರಿಸುತ್ತ 'ಪರರ ಸದ್ಗುಣ ವಾಲಿಸಿಕೊಳುತಲಿ ಸಕಲರಿಗೆ ಮನ್ನಿಸುವವನೆ ಮನುಜನು, ಗರುವ ಹಿಡಿದು ತನ್ನ ಹೊಗಳುತ ಅನ್ಯರ ಬರಿದೆ ನಿಂದಿಸುವವನೆ ದನುಜನು' ಎಂದು ಮುಂತಾಗಿ ಐದು ನುಡಿಗಳಲ್ಲಿ ಮನುಜ-ದನುಜರ ಅಂತರವನ್ನು ಸೊಗಸಾಗಿ ನಿರೂಪಿಸಿದ್ದಾರೆ.

'ಮನಿಮನಿಗೆ ಗುರುಭಕ್ತರಾದವರು ಜಗದೊಳಗೆಲ್ಲಾ' ಎಂದು ಜಗದತುಂಬ ಗುರುಭಕ್ತರು ಸಿಗುತ್ತಾರೆ, ಆದರೆ ಘನನೆಲೆ ಕಂಡವರೊಬ್ಬರಿಲ್ಲಾ' ಎನ್ನುತ್ತ 'ಗುರುಸ್ವರೂಪ ವರಿಯದೆ, ನರಭಾವ ಮರಿಯದೆ, ಗುರುಭಕ್ತಿ ಕೀಲವನ್ನು ತಿಳಿಯದೆ' ಗುರುಭಕ್ತರಾದವರಿವರು ! ಆದ್ದರಿಂದಲೇ 'ಭಾವನೆ ಬಲೀದನಕಾ ಒಣ ಭಕ್ತಿಯ ಮಾಡಿದರೇನು ದೇವ ದೇವೋತ್ತಮನ ಪದ ಸುಮ್ಮನೆ ದೊರಕುವುದೆ ?' ಎಂದು ಮತ್ತೊಂದು ಕೃತಿಯಲ್ಲಿ ಕೇಳುತ್ತಾರೆ.

'ಇದು ಯಾತರ ಜ್ಞಾನಾ' ಎಂಬ ಮೂರು ನುಡಿಗಳ ಕಿರಿದಾದ ಕೃತಿಯಲ್ಲಿ ಪಾಂಡಿತ್ಯದಿಂದ ಸಾಧಿಸಿದ್ದೇನು ಎಂದು ಕೇಳುತ್ತಾರೆ. 'ವೇದವನೋದಿ - ವಿವಾದವ ಮಾಡಿ ಸಾಧಿಸಿದ್ಯಭೀಮನಾ' ಹೌದು ನೀನು ಬಹುದೊಡ್ಡ ಜಾಣನೆಂಬ ಅಭಿಮಾನವನ್ನು ಗಳಿಸಿರಬೇಕು. ಆದರೆ ಸಾಧನೆಯ ದೃಷ್ಟಿಯಿಂದ ಅದು ಬೆಟ್ಟವ ಶೋಧಿಸಿ ಕಷ್ಟದಿ ಇಲಿಯಾ ನೆಟ್ಟನೆ ತೆಗೆದೆ' ಎನ್ನುತ್ತಾರೆ. ವಾಸ್ತವದಲ್ಲಿ ಸಾಧಿಸಬೇಕಾದದ್ದು " ಘನಗುರು ಮಹಿಪತಿ ಸ್ವಾಮಿಯ ನೆನೆದು ಅನುದಿನವಿಡೀ ಧ್ಯಾನ ಅಲ್ಲವೆ?"

'ಶರಣಾರ್ಥಿ ಶಿವ ಶರಣಾರ್ಥಿ – ಹರಿಹರ ಎಂದು ಶಿವಪದ ಕಂಡವಗೆ' ಎಂಬ ಕೃತಿಯಲ್ಲಿ ಹರಿ–ಹರ ಅಭೇದವನ್ನು ಕಾಣಿಸುತ್ತಾರೆ. 'ಮಾನವಾದಮ್ಯಾಲ ತಾನಾರೆಂದರಿಯ ಬೇಕು' ಎಂಬ ಕೃತಿಯಲ್ಲಿ ಮಾನವ ಧರ್ಮವನ್ನು ಹೇಳುತ್ತಾರೆ. ಮನುಷ್ಯ–ರಾಕ್ಷಸರು ಇಲ್ಲಿಯೇ ಇದ್ದಾರೆಂದು ತೋರಿಸುತ್ತ 'ಪರರ ಸದ್ಗುಣ ವಾಲಿಸಿಕೊಳುತಲಿ ಸಕಲರಿಗೆ ಮನ್ನಿಸುವವನೆ ಮನುಜನು, ಗರುವ ಹಿಡಿದು ತನ್ನ ಹೊಗಳುತ ಅನ್ಯರ ಬರಿದೆ ನಿಂದಿಸುವವನೆ ದನುಜನು' ಎಂದು ಮುಂತಾಗಿ ಐದು ನುಡಿಗಳಲ್ಲಿ ಮನುಜ–ದನುಜರ ಅಂತರವನ್ನು ಸೊಗಸಾಗಿ ನಿರೂಪಿಸಿದ್ದಾರೆ.

'ಮನಿಮನಿಗೆ ಗುರುಭಕ್ತರಾದವರು ಜಗದೊಳಗೆಲ್ಲಾ' ಎಂದು ಜಗದತುಂಬ ಗುರುಭಕ್ತರು ಸಿಗುತ್ತಾರೆ, ಆದರೆ ಘನನೆಲೆ ಕಂಡವರೊಬ್ಬರಿಲ್ಲಾ' ಎನ್ನುತ್ತ 'ಗುರುಸ್ವರೂಪ ವರಿಯದೆ, ನರಭಾವ ಮರಿಯದೆ, ಗುರುಭಕ್ತಿ ಕೀಲವನ್ನು ತಿಳಿಯದೆ' ಗುರುಭಕ್ತರಾದವರಿವರು ! ಆದ್ದರಿಂದಲೇ 'ಭಾವನೆ ಬಲೀದನಕಾ ಒಣ ಭಕ್ತಿಯ ಮಾಡಿದರೇನು ದೇವ ದೇವೋತ್ತಮನ ಪದ ಸುಮ್ಮನೆ ದೊರಕುವುದೆ ?' ಎಂದು ಮತ್ತೊಂದು ಕೃತಿಯಲ್ಲಿ ಕೇಳುತ್ತಾರೆ.

'ಇದು ಯಾತರ ಜ್ಞಾನಾ' ಎಂಬ ಮೂರು ನುಡಿಗಳ ಕಿರಿದಾದ ಕೃತಿಯಲ್ಲಿ ಪಾಂಡಿತ್ಯದಿಂದ ಸಾಧಿಸಿದ್ದೇನು ಎಂದು ಕೇಳುತ್ತಾರೆ. 'ವೇದವನೋದಿ – ವಿವಾದವ ಮಾಡಿ ಸಾಧಿಸಿದ್ಯಭೀಮನಾ' ಹೌದು ನೀನು ಬಹುದೊಡ್ಡ ಜಾಣನೆಂಬ ಅಭಿಮಾನವನ್ನು ಗಳಿಸಿರಬೇಕು. ಆದರೆ ಸಾಧನೆಯ ದೃಷ್ಟಿಯಿಂದ ಅದು ಬೆಟ್ಟವ ಶೋಧಿಸಿ ಕಷ್ಟದಿ ಇಲಿಯಾ ನೆಟ್ಟನೆ ತೆಗೆದೆ' ಎನ್ನುತ್ತಾರೆ. ವಾಸ್ತವದಲ್ಲಿ ಸಾಧಿಸಬೇಕಾದದ್ದು " ಘನಗುರು ಮಹಿಪತಿ ಸ್ವಾಮಿಯ ನೆನೆದು ಅನುದಿನವಿಡೀ ಧ್ಯಾನ ಅಲ್ಲವೆ?"

## ಸಂಪಾದನೆ

ಕಾಖಂಡಕಿಯ ಕೃಷ್ಣದಾಸರ ಕೃತಿಗಳು ಈವರೆಗೆ ಇಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲ. 'ಶ್ರೀ ಗುರುಮಹಿಪತಿದಾಸ ಸಾಹಿತ್ಯ ಪ್ರಚಾರ ಸಮಿತಿ–ಕಾಖಂಡಕಿ' ಅವರು ಕಳೆದ ಹಲವು ವರುಷಗಳಲ್ಲಿ ಕೃಷ್ಣದಾಸರ ಕೆಲವು ಕೃತಿಗಳನ್ನು ಬಿಡಿ–ಬಿಡಿಯಾಗಿ ಪ್ರಕಟಿಸಿದ್ದಾರೆ. ಅವುಗಳೊಂದಿಗೆ ಇಲ್ಲಿಯ ಎಲ್ಲ ಕೃತಿಗಳ ಹಸ್ತ ಪ್ರತಿಯನ್ನು ನೀಡಿದವರು ದಾಸರ ವಂಶದವರೇ ಆದ ಕೀರ್ತನ ಕೇಸರಿ ಶ್ರೀ ದ್ಯಾವಪ್ಪಯ ಕಾಖಂಡಕಿ ಅವರು. ಬೇರೆ ಬೇರೆ ಮೂಲಗಳಿಂದ ಪಡೆದು ನಕಲು ಮಾಡಿದ ಹಸ್ತಪ್ರತಿಯನ್ನು ಕೊಟ್ಟಿದ್ದಾರೆ. ಅವರಿಗೂ, 'ಶ್ರೀ ಗುರುಮಹಿಪತಿ ದಾಸ ಸಾಹಿತ್ಯ ಪ್ರಚಾರ ಸಮಿತಿ–ಕಾಖಂಡಕಿಯ' ಪದಾಧಿಕಾರಿಗಳಿಗೂ, ವಿಶೇಷವಾಗಿ ಕಾಯದರ್ಶಿಗಳಾದ ಶ್ರೀ ರಾಮಯ್ಯ (ಅಪ್ಪು) ಗುರಪ್ಪಯ್ಯ ಹರಿದಾಸ ಅವರಿಗೆ ಕೃತಜ್ಞತೆಗಳು.

–ಕೃಷ್ಣ ಕೊಲ್ಹಾರಕುಲಕರ್ಣಿ

## ಸಂಪಾದನೆ

ಕಾಖಂಡಕಿಯ ಕೃಷ್ಣದಾಸರ ಕೃತಿಗಳು ಈವರೆಗೆ ಇಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲ. 'ಶ್ರೀ ಗುರುಮಹಿಪತಿದಾಸ ಸಾಹಿತ್ಯ ಪ್ರಚಾರ ಸಮಿತಿ–ಕಾಖಂಡಕಿ' ಅವರು ಕಳೆದ ಹಲವು ವರುಷಗಳಲ್ಲಿ ಕೃಷ್ಣದಾಸರ ಕೆಲವು ಕೃತಿಗಳನ್ನು ಬಿಡಿ–ಬಿಡಿಯಾಗಿ ಪ್ರಕಟಿಸಿದ್ದಾರೆ. ಅವುಗಳೊಂದಿಗೆ ಇಲ್ಲಿಯ ಎಲ್ಲ ಕೃತಿಗಳ ಹಸ್ತ ಪ್ರತಿಯನ್ನು ನೀಡಿದವರು ದಾಸರ ವಂಶದವರೇ ಆದ ಕೀರ್ತನ ಕೇಸರಿ ಶ್ರೀ ದ್ಯಾವಪ್ಪಯ ಕಾಖಂಡಕಿ ಅವರು. ಬೇರೆ ಬೇರೆ ಮೂಲಗಳಿಂದ ಪಡೆದು ನಕಲು ಮಾಡಿದ ಹಸ್ತಪ್ರತಿಯನ್ನು ಕೊಟ್ಟಿದ್ದಾರೆ. ಅವರಿಗೂ, 'ಶ್ರೀ ಗುರುಮಹಿಪತಿ ದಾಸ ಸಾಹಿತ್ಯ ಪ್ರಚಾರ ಸಮಿತಿ–ಕಾಖಂಡಕಿಯ' ಪದಾಧಿಕಾರಿಗಳಿಗೂ, ವಿಶೇಷವಾಗಿ ಕಾಯದರ್ಶಿಗಳಾದ ಶ್ರೀ ರಾಮಯ್ಯ (ಅಪ್ಪು) ಗುರಪ್ಪಯ್ಯ ಹರಿದಾಸ ಅವರಿಗೆ ಕೃತಜ್ಞತೆಗಳು.

–ಕೃಷ್ಣ ಕೊಲ್ಹಾರಕುಲಕರ್ಣಿ

# ಕೀರ್ತನೆಗಳ ಕ್ರಮಸೂಚಿ


| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೧ | ಬರೇ ವಾಚಾಭಿಮಾನವಿದೇಕೆ | ೩ |
| ೨ | ಓಂ ನಮೋ ಸಕಲ ಮಂಗಲದಾಯಕ | ೩ |
| ೩ | ಉದಯದಲೆದ್ದು ಶ್ರೀಹರಿ ನಾಮಂಗಳನು | ೪ |
| ೪ | ಏಳುತಲಿ ಎದ್ದು ಎಚ್ಚರಿಸುತ ನೀ ನೆನೆಯೋ | ೬ |
| ೫ | ಶ್ರೀರಮಣಿಯರಸ ಕಂ ಜೋದ್ಭವಾರ್ಚಿತ ಪುಣ್ಯ | ೭ |
| ೬ | ಗೋಪಾಲ ಬಾಲಾ ಏಳು ಏಳೈಯ್ಯ | ೧೦ |
| ೭ | ಏಳಯ್ಯಾ ಏಳು ಕಂದಾ | ೧೦ |
| ೮ | ಏಳೈಯ್ಯಾ ಆತ್ಮಾರಾಮಾ ಯತಿ ಮುನಿಜನ ಪ್ರೇಮ | ೧೧ |
| ೯ | ಏನೆಂದು ಬಣ್ಣಿಸುವೆನೋ ನಾನು | ೧೨ |
| ೧೦ | ಜಯ ಕೃಷ್ಣವೇಣಿ ಜಗಪಾವನೀ | ೧೩ |
| ೧೧ | ಶರಣು ಕೃಷ್ಣವೇಣಿ ಶರಣು ಪುಣ್ಯಾಭರಣಿ | ೧೪ |
| ೧೨ | ಜಯ ಭಾಗೀರಥಿದೇವಿ ಜಯ ಜಾಹ್ನವಿ | ೧೪ |
| ೧೩ | ಜಯದೇವಿ ಜಯದೇವಿ ಜಯ ಪಾವನಗಂಗೇ | ೧೫ |
| ೧೪ | ಬೆಳಗಾಯಿ ತೇಳಿರಯ್ಯಾ | ೧೬ |
| ೧೫ | ಚರಣವನೆನೆಮನವೆ | ೧೭ |
| ೧೬ | ಧನ್ಯನಾದೆನು ಗುರು ನಿಮ್ಮಯ ದಯದೀ | ೧೭ |
| ೧೭ | ಗಜಾನನಾ ಗಜಾನನಾ ಸ್ವಾಮಿ ನಿನ್ನವನಾ | ೧೮ |
| ೧೮ | ನಮೋ ನಮೋ ಗಣೇಶಾ | ೧೯ |
| ೧೯ | ಶರಣು ಶ್ರೀ ಗಣನಾಥ ಮೂಷಿಕೇಂದ್ರ ವರೂಢ | ೧೯ |

# ಕೀರ್ತನೆಗಳ ಕ್ರಮಸೂಚಿ


| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೧ | ಬರೇ ವಾಚಾಭಿಮಾನವಿದೇಕೆ | ೩ |
| ೨ | ಓಂ ನಮೋ ಸಕಲ ಮಂಗಲದಾಯಕ | ೩ |
| ೩ | ಉದಯದಲೆದ್ದು ಶ್ರೀಹರಿ ನಾಮಂಗಳನು | ೪ |
| ೪ | ಏಳುತಲಿ ಎದ್ದು ಎಚ್ಚರಿಸುತ ನೀ ನೆನೆಯೋ | ೬ |
| ೫ | ಶ್ರೀರಮಣಿಯರಸ ಕಂ ಜೋದ್ಭವಾರ್ಚಿತ ಪುಣ್ಯ | ೭ |
| ೬ | ಗೋಪಾಲ ಬಾಲಾ ಏಳು ಏಳೈಯ್ಯ | ೧೦ |
| ೭ | ಏಳಯ್ಯಾ ಏಳು ಕಂದಾ | ೧೦ |
| ೮ | ಏಳೈಯ್ಯಾ ಆತ್ಮಾರಾಮಾ ಯತಿ ಮುನಿಜನ ಪ್ರೇಮ | ೧೧ |
| ೯ | ಏನೆಂದು ಬಣ್ಣಿಸುವೆನೋ ನಾನು | ೧೨ |
| ೧೦ | ಜಯ ಕೃಷ್ಣವೇಣಿ ಜಗಪಾವನೀ | ೧೩ |
| ೧೧ | ಶರಣು ಕೃಷ್ಣವೇಣಿ ಶರಣು ಪುಣ್ಯಾಭರಣಿ | ೧೪ |
| ೧೨ | ಜಯ ಭಾಗೀರಥಿದೇವಿ ಜಯ ಜಾನ್ಹವಿ | ೧೪ |
| ೧೩ | ಜಯದೇವಿ ಜಯದೇವಿ ಜಯ ಪಾವನಗಂಗೇ | ೧೫ |
| ೧೪ | ಬೆಳಗಾಯಿ ತೇಳಿರಯ್ಯಾ | ೧೬ |
| ೧೫ | ಚರಣವನೆನೆಮನವೆ | ೧೭ |
| ೧೬ | ಧನ್ಯನಾದೆನು ಗುರು ನಿಮ್ಮಯ ದಯದೀ | ೧೭ |
| ೧೭ | ಗಜಾನನಾ ಗಜಾನನಾ ಸ್ವಾಮಿ ನಿನ್ನವನಾ | ೧೮ |
| ೧೮ | ನಮೋ ನಮೋ ಗಣೇಶಾ | ೧೯ |
| ೧೯ | ಶರಣು ಶ್ರೀ ಗಣನಾಥ ಮೂಷಿಕೇಂದ್ರ ವರೂಢ | ೧೯ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೨೦ | ಶರಣೆಂಭೆ ತನುಮನದಿಂದ ಗಣರಾಯಾ | ೨೦ |
| ೨೧ | ಮಂಗಳಾರತಿಯ ತಂದೆತ್ತಿರೇ | ೨೦ |
| ೨೨ | ಕಾಳಿ ಭವಾನಿ ಶಿವೆ ಪಾಲಿಸೇ | ೨೧ |
| ೨೩ | ಅಕ್ಕ ಕೇಳೆ ನಿನ್ನ ತಪಸಿಯರೊಳಗೊಬ್ಬ | ೨೧ |
| ೨೪ | ಜೋಗಿಯ ನೋಡಿರೇ ತಾಪಸ ಯೋಗಿಯ | ೨೨ |
| ೨೫ | ಇದೋ ಶಿವ ಬಂದಾ | ೨೩ |
| ೨೬ | ಇಂದು ಕಂಡೆನಾನು ಶಂಕರನಾ | ೨೪ |
| ೨೭ | ಇಷ್ಟಲಿಂಗಾರ್ಚನವಾ ಮಾಡುವರಾ | ೨೪ |
| ೨೮ | ಏನು ಕೊಟ್ಟನೇ ಮಗಳಾ | ೨೫ |
| ೨೯ | ನಕ್ಷತ್ರ ರಮಣ ನಯ್ಯನಿಗೊಲಿದು ಶರವನಿತ್ತೆ | ೨೭ |
| ೩೦ | ನಿನ್ನ ನಾನೇನೆಂದೆ ನಿರ್ಮಲ ರೂಪನೆ | ೨೭ |
| ೩೧ | ನೋಡುವ ಬನ್ನಿ ಪೂಜೆ ಮಾಡುವ ಬನ್ನಿ | ೨೮ |
| ೩೨ | ಪಾದಕ ನಮಿಸುವೆನಾ ಶಿವನಾ ಪಾದಕ ನಮಿಸುವೆನಾ | ೨೯ |
| ೩೩ | ಪಾಹಿಮಾಂ ಪಾಹಿ ಶಿವಹರ ಮೃಡ ಶಂಭೋ | ೨೯ |
| ೩೪ | ವಾರಿವದನ ಗೇಹ ವಾಸಮಾಡಿಹನ | ೩೦ |
| ೩೫ | ಶರಣು ಶ್ರೀ ಗುರುಲಿಂಗ ಶರಣು ಮುನಿಜನಸಂಗ | ೩೧ |
| ೩೬ | ಶರಣು ಶರಣು ಹರ ಸುಂದರ ಶಂಕರಾ | ೩೧ |
| ೩೭ | ಶರಣು ಹೈಮವತೀಶ ಶಿವಶಂಭು ಅವಿನಾಶ | ೩೨ |
| ೩೮ | ಶಿವ ಶಿವ ಮಹಾದೇವಾ ಶಂಕರಾ ಹರಹರ | ೩೨ |
| ೩೯ | ಶ್ರೀ ಗಿರೀಶಾ ನಮೋ ಮಹಾದೇವಾ | ೩೩ |
| ೪೦ | ಶಿವನಾ ಭವನಾ ಮನವೇ ನೀನೆನೆ ಗಿರಿಜಾಧವನಾ | ೩೪ |
| ೪೧ | ಶಿವ ಶಿವಯನ್ನಿ ಮನದೊಳೂ ಹರಹರಯನ್ನಿ | ೩೪ |
| ೪೨ | ಸ್ಮರಿಸೋ ಎಲೆ ಮನವೇ ಜಗದಯ್ಯನಾ | ೩೫ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೪೩ | ಸಾಂಬಶಿವಾ ಜಯ ಸಾಂಬಶಿವಾ | ೩೫ |
| ೪೪ | ಹೊಂದಿ ಸುಖಿನಿನೆರೈಯ್ಯ | ೩೬ |
| ೪೫ | ಹೊಂದಿ ಬದುಕಿರೈಯ್ಯಾ ದೇವನಾ | ೩೬ |
| ೪೬ | ನವ ಸುವರ್ಣದಾ ಪರಿಯ ಹೊಳೆವ ಕೆಂಜೆಡೆಯಲೀ | ೩೭ |
| ೪೭ | ಜಯ ಮಂಗಳಂ ನಿತ್ಯ ಶುಭ ಮಂಗಳಂ | ೩೯ |
| ೪೮ | ಜಯ ಜಯ ಜಯದೇವ ಶಂಕರ | ೩೯ |
| ೪೯ | ಜಯದೇವ ಜಯದೇವ ಜಯ ಶಂಕರ ಮೂರ್ತಿ | ೪೦ |
| ೫೦ | ಜಯದೇವ ಜಯದೇವ ಜಯಗುರು ಮಹೇಶಾ | ೪೧ |
| ೫೧ | ಜಯದೇವ ಜಯದೇವ ಜಯ ರಾಮಲಿಂಗಾ | ೪೧ |
| ೫೨ | ಜಯ ಜಯಾ ದೇವ ದೇವಾ | ೪೨ |
| ೫೩ | ಪಾರ್ವತಿಪತಿ ಆರ್ವರಾಭಿಷ್ಟಿಯ | ೪೩ |
| ೫೪ | ಈತನನೇ ಹನುಮನು ಈತನನೇ ನಮ್ಮಗುರು | ೪೪ |
| ೫೫ | ದ್ಯುಮಣಿ ಮಂಡಲವ ತುಡುಕಲು ಹವಣಿಸಿದ ಹಸ್ತ | ೪೪ |
| ೫೬ | ಜಯಜಯವೆಂದು ಶರಣೆನ್ನಿ ಹನುಮಯ್ಯಗ | ೪೫ |
| ೫೭ | ನಮೋ ನಮೋ ಮುಖ್ಯ ಪ್ರಾಣ ನಾಥನೇ | ೪೫ |
| ೫೮ | ಪ್ರಾಣನ್ನೋಡಿರೇ ಮುಖ್ಯ ಪ್ರಾಣನ್ನೋಡಿರೇ | ೪೬ |
| ೫೯ | ಬಣ್ಣಿಸಲಳವಲ್ಲ ನಿಮ್ಮ ಪ್ರಸನ್ನ ಮೂರುತಿ | ೪೭ |
| ೬೦ | ಶರಣೆಂಬೆ ಗುರುರಾಯಾ ಶರಣ ಜನರಾಶ್ರಯಾ | ೪೮ |
| ೬೧ | ಸಾರಿರೈಯ್ಯಾ ಜನರು ಗಂಭೀರ ಗುಣನಿಧಿ ಮುಖ್ಯ | ೪೯ |
| ೬೨ | ಹನುಮಾ ಹನುಮಾಯನ್ನೆ ಉದ್ಧರಿಸುವೆ ನೀ | ೪೯ |
| ೬೩ | ಹೊಂದಿ ಸುಖಿಸಿ ಹೊಂದಿ ಸುಖಿಸಿ | ೫೦ |
| ೬೪ | ಜಯದೇವ ಜಯದೇವ ಜಯಜಯ ಹನುಮಂತಾ | ೫೧ |
| ೬೫ | ಬಲವಂತರೊಳಗೆ ಬಲವಂತ ಹನುಮಾ | ೫೨ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೬೬ | ಶರಣು ಶಾರದೆ ವಾಣಿ | ೫೨ |
| ೬೭ | ಶರಣು ಶಾರದೆ ವಾಣೀ ಸರಸಿ ಜಾಸನ ರಾಣಿ | ೫೩ |
| ೬೮ | ಎದ್ದಳೀಗಿದಕೋ ಶ್ರೀರಮಣಿ ಎದ್ದಳೀಗಿದಕೋ | ೫೩ |
| ೬೯ | ಉಪಕಾರವೇನಾ ಹೇಳಲಿ ಮಾಯಾದೇವಿಯಾ | ೫೪ |
| ೭೦ | ನಮೋ ಶ್ರೀ ರಮಣಿ ಜಯ ತ್ರಿಭುವನ ಜನನೀ | ೫೫ |
| ೭೧ | ಬಾರವ್ವ ಜಗದಂಬೆ ಶರಣೆಂದು ಬಲಗೊಂಬೆ | ೫೫ |
| ೭೨ | ವನರುಹಾಕ್ಷಿ ವನಮಾಲಿಂಗೇ ಏನು ಮರುಳಾದೆ ನೀ | ೫೬ |
| ೭೩ | ಶರಣು ಶರಣು ಸರ್ವಾತೀತೆ ಸುರ ಬ್ರಹ್ಮಾದಿವಂದಿತೆ | ೫೭ |
| ೭೪ | ರಘುಪತಿಯಾ ತೋರಮ್ಮಾ | ೫೭ |
| ೭೫ | ಜಯಜಯ ಜಗಜ್ಜನನಿ ಜಗದಂಬಿಕೆ | ೫೮ |
| ೭೬ | ಜಯದೇವಿ ಜಯದೇವಿ ಜಯ ಆದಿಶಕ್ತಿ | ೫೯ |
| ೭೭ | ಆರತಿ ಬೆಳಗುವೆನಾ ಅಸುರವಂದ್ಯಗೆ | ೫೯ |
| ೭೮ | ಜಯದೇವಿ ಜಯದೇವಿ ಜಯಭಗವದ್ಗೀತೆ | ೬೦ |
| ೭೯ | ತಂದು ತೋರೆ ಮಂದ ಹಾಸನಾ ತಂದು ತೋರೇ | ೬೧ |
| ೮೦ | ಇದಿರುಗೊಂಡಳು ಇಂದಿರಾದೇವಿ | ೬೧ |
| ೮೧ | ನೀರೇ ದೋರೆ ದೋರೆ ರಂಗನಾ | ೬೨ |
| ೮೨ | ಹೆಳೆಲೆ ಸಖಿ ಘಮ್ಮನೆ ಸುಳಿದವನಾರೇ | ೬೩ |
| ೮೩ | ಎಂದು ಕಾಂಭುವೆ ರಂಗಯ್ಯ ನಾ | ೬೪ |
| ೮೪ | ಓಎನ್ನಬಾರದೆ ಹರಿಯೇ ನಾ ಕರೆದರೆ | ೬೪ |
| ೮೫ | ನಿನ್ನ ಮೂರುತಿಯ ತೋರಿಸೋ ರಂಗಯ್ಯಾ | ೬೬ |
| ೮೬ | ಬಾರೋ ಬಾರೋ ರಂಗಾ | ೬೭ |
| ೮೭ | ಬಾರೈಯ್ಯಾ ಕುರುಣಾ ಸುರಾರ್ಚಿತ | ೬೭ |
| ೮೮ | ಬಾರೋ ಬಾರೋ ಭಾವಜನೈಯ್ಯಾ | ೬೮ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೮೯ | ಬಾರೋ ಬಾರೋ ಬಾರೋ ರಂಗಾ | ೬೮ |
| ೯೦ | ಬಾರೋ ವಾರಿಜ ಚರಣಾ | ೬೯ |
| ೯೧ | ಬಾರೋ ಈ ರೇಳು ಜಗಜೀವನಾ | ೭೦ |
| ೯೨ | ಬಾರಯ್ಯಾ ಗೋವಿಂದಾ ಕೀರ್ತನೆಗೆ ಮುಕುಂದಾ | ೭೦ |
| ೯೩ | ಬಾರಯ್ಯಾ ಗೋವಿಂದಾ ಬಾರೋ ನಂದನ ಕಂದಾ | ೭೧ |
| ೯೪ | ಬಾರೋ ಬಾರೊ ರಂಗಯ್ಯಾ ನೀ ಬಾರೋ ನಿನ್ನ | ೭೧ |
| ೯೫ | ಬಾರೋ ಬಾರೋ ರಂಗಯ್ಯಾ | ೭೨ |
| ೯೬ | ಬಾರೋ ಬಾರೋ ಎನ್ನ ನೀ ತಾರಿಸ ಬಾರೋ | ೭೩ |
| ೯೭ | ಬಾರೋ ಬಾರೋ ಮೋಹನಾ ಶ್ರೀದೇವಾ | ೭೩ |
| ೯೮ | ಬಾರಯ್ಯಾ ಗೋವಿಂದಾ | ೭೪ |
| ೯೯ | ಭಕುತರ ರಿಣಕಂಜಿ ಅಡಗಿದರೇ | ೭೪ |
| ೧೦೦ | ತೋರಿಸೇ ಗೋಪಿ ತೋರಿಸೇ | ೭೫ |
| ೧೦೧ | ಏ ನೀರೇ ತೋರೇ ರಂಗನಾ | ೭೫ |
| ೧೦೨ | ಅರುಣಾನುಜ ವೈರಿಯಾ ಭರಣನ ಮಿತ್ರನ ತೋರೆ | ೭೬ |
| ೧೦೩ | ಏನು ಕಾರಣ ವೆನ್ನ ಮನೆಗಿಂದು ಬಾರನು | ೭೬ |
| ೧೦೪ | ಬಾರನೇನೆ ಭಾಗ್ಯನಿಧಿ ಬಡವರ ಮರೆಯದೇ | ೭೭ |
| ೧೦೫ | ತಂದು ತೋರೆ ಮಂದಹಾಸನ ಕಾಮಿನಿ | ೭೮ |
| ೧೦೬ | ಎನ್ನ ಪ್ರಿಯನಾ ನೀ ತಂದು ತೋರೇ ಸುಜ್ಞಾನೇ | ೭೮ |
| ೧೦೭ | ನೋಡಿರೇ ನೋಡಿರಮ್ಮಾ ಚೆಲುವನಾ | ೭೯ |
| ೧೦೮ | ನರಹರಿ ತಾರಿಸೊಎನ್ನಾ ದುರಿತಾರಿ | ೮೦ |
| ೧೦೯ | ನರಹರಿ ಬಂದು ಮೂಡಿದಾ | ೮೧ |
| ೧೧೦ | ಆನಿ ಬಂತಿದೆಕೋ ಮಹ ಮದ್ದಾನಿ ಬಂತಿದಕೋ | ೮೨ |
| ೧೧೧ | ನಡಿಯ ಬೇಕಲ್ಲೋರಂಗಾ ವಳಮನಿಗೆ | ೮೨ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೧೧೨ | ರಾಮ ಬಂದನೇನೆ ಶ್ರೀ ರಘುರಾಮ ಬಂದನೇನೆ | ೮೩ |
| ೧೧೩ | ಕಂಡೇವಮ್ಮ ರಂಗನಾ ಕಂಡೇವಮ್ಮಾ ಕೃಷ್ಣನಾ | ೮೪ |
| ೧೧೪ | ಅವನೆವೆ ಧನ್ಯ ನೋಡಿ | ೮೪ |
| ೧೧೫ | ಅವತಾರ ಹರಿಯ ವಿವರಿಸೆ ಬ್ರಹ್ಮಗಳ ಅಳವಲ್ಲಾ | ೮೫ |
| ೧೧೬ | ಈತ ಸೀತಾನಾಥನೇ ವಾತಾಜಾತ ಪ್ರೀತನೇ | ೮೫ |
| ೧೧೭ | ಎಂಥಾ ಮೋಹನನೇ ನೋಡಮ್ಮಯ್ಯಾ | ೮೬ |
| ೧೧೮ | ನಾಥದೀನಾನಾಥ ಸದ್ಗತಿ ದಾತ ನೋಡಿರೋ ಭವ | ೮೬ |
| ೧೧೯ | ನಮ್ಮ ರಂಗ ಮಧುರೆಗೆ ನಡೆತರಲು | ೮೭ |
| ೧೨೦ | ಅಯ್ಯಾಜಗದಯ್ಯಾ | ೮೮ |
| ೧೨೧ | ಅಹುದಹುದನಾಥ ಬಂಧು | ೯೦ |
| ೧೨೨ | ಅಹುದಹುದು ದೀನ ಬಂಧು | ೯೧ |
| ೧೨೩ | ಅಂದೇನಿಂದೆನುತಾ | ೯೨ |
| ೧೨೪ | ಅಂಥವನಲ್ಲಾ ಕಾಣಿರೇ ಸಂತತ ತೃಪ್ತಾ | ೯೩ |
| ೧೨೫ | ಆರೇ ಸುಳಿದವನಿಂದು | ೯೪ |
| ೧೨೬ | ಆರೋಗಣೆಯ ಮಾಡೋ ವಾರಿಜರಮಣಾ | ೯೪ |
| ೧೨೭ | ಆರೋಗಣೆಯ ಮಾಡೋ ಮುಕುಂದಾ | ೯೫ |
| ೧೨೮ | ಆರು ನಿನ್ನಂಘ್ರಿ ಭಜಿಸುವರಯ್ಯಾ | ೯೬ |
| ೧೨೯ | ಆವ ಪುಣ್ಯವ ಮಾಡಿದಳೋ ಮುನ್ನ ಗೋಪಿ | ೯೭ |
| ೧೩೦ | ಇದೇನಿದೇನು ನಿನ್ನ ಪದವ | ೯೭ |
| ೧೩೧ | ಇದೋ ಬಂದಾನೇಳೆ ಭಾವೇ ನಿನ್ನರಸಾ | ೯೮ |
| ೧೩೨ | ಇನ್ಯಾಕೆ ದೇವಿ ಮುನಿಸು ಮಾತಾಡೇ | ೯೯ |
| ೧೩೩ | ಇವನಾ ನೆಲೆಗಾಣೆ ನಮ್ಮಯ್ಯಾ ಸಣ್ಣವನೇ | ೯೯ |
| ೧೩೪ | ಇವನೋಡಮ್ಮಾ ಮಾನವನೆ | ೧೦೦ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೧೩೫ | ಇಂದ್ಯಾಕೆ ಬಾರನಮ್ಮಾ ಎನ್ನೊಳು ದಯಾ | ೧೦೧ |
| ೧೩೬ | ಇಂದಿರೆಯರಸಿನಾಡಿದ ಆಟನೋಡಿ ನಲಿದಾಡಿ | ೧೦೧ |
| ೧೩೭ | ಇಂದಿರೆ ರಮಣಾ ಇಟ್ಟಾಂಗಿರಬೇಕು | ೧೦೨ |
| ೧೩೮ | ಇಂತುಯನ್ನಾ ಬಯಕೆ ಕೈಗೂಡಿಸೋ ದೇವಾ | ೧೦೩ |
| ೧೩೯ | ಇಂದುಕುಲಮಣಿಯಾ | ೧೦೩ |
| ೧೪೦ | ಇಂದು ಕಂಡೆನಾ ಇಂದು ಕುಲಕಮಣಿ | ೧೦೪ |
| ೧೪೧ | ಇಂದು ಧನ್ಯನಾ | ೧೦೫ |
| ೧೪೨ | ಇಂದು ಪರಮಾನಂದ ನಮಗ | ೧೦೬ |
| ೧೪೩ | ಇಂದು ಕಂಡೆ ಚರಣಾ ಶ್ರೀಕೃಷ್ಣನಾ | ೧೦೬ |
| ೧೪೪ | ಇಂದು ನಮ್ಮ ಸಲಹಯ್ಯಾ ಸಿರಿರಮಣಾ | ೧೦೭ |
| ೧೪೫ | ಇಂದು ಸಲಹಿದೇ ಆರ್ತರ ಬಂಧು | ೧೦೭ |
| ೧೪೬ | ಇನ್ನಾರ ಭಜಿಸಲ್ಯೆಯ್ಯಾ ಯನ್ನ ಗತಿ | ೧೦೮ |
| ೧೪೭ | ಎನಗ ನೀ ಕಾಯಲಾಗದೇ ಆಗದೇ ದೇವಾ | ೧೦೯ |
| ೧೪೮ | ಎನ್ನ ಪಾಲಿಸುವದಾಗದೇ ಸಿರಿ ರಮಣಾ | ೧೦೯ |
| ೧೪೯ | ಎನ್ನ ಪಾಲಿಸೋ ಕರುಣಾಕರಾ | ೧೧೦ |
| ೧೫೦ | ಎನ್ನ ಸಲಹೋ ನೀ ದಯಾಂಬುಧಿ | ೧೧೧ |
| ೧೫೧ | ಎನ್ನ ಸಲಹುದೋ ರಂಗಾ ಎನ್ನ ಸಲಹು | ೧೧೧ |
| ೧೫೨ | ಎನ್ನ ಸಲಹೋ ಚರಣವನ್ನು ದೋರಿ ಪರಮ | ೧೧೨ |
| ೧೫೩ | ಏನಾದರೇನು ಗುರುದಯ ಪಡದನಕಾ | ೧೧೩ |
| ೧೫೪ | ಎಮ್ಮಳವೇ ಪೊಗಳಲಮ್ಮಮ್ಮಾ | ೧೧೪ |
| ೧೫೫ | ಎಲೆ ದೇವಿ ಇಂತು ಚಿಂತೆಯು ಯಾಕ | ೧೧೪ |
| ೧೫೬ | ಎಷ್ಟೆಂದು ಸಾರುವೆ ನಿಮ್ಮ ನಾಮ ಮಹಿಮಾ | ೧೧೫ |
| ೧೫೭ | ಎಂತು ನೋಡುವಿಯನ್ನ ಅಂತ ಹರಿಯೇ | ೧೧೬ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೧೫೮ | ಎಂಥವ ನಿವನಮ್ಮಾ ಬಾಲಕನಂತಿಹ ಗೋಪೆಮ್ಮಾ | ೧೧೬ |
| ೧೫೯ | ಎಂಥಾ ಬಾಲಕನಿವನು ಎಷ್ಟೆಂದ್ಹೇಳಲಿ ನಾನು | ೧೧೭ |
| ೧೬೦ | ಎಂಥಾ ಮಾಯಾಗಾರನೇ | ೧೧೮ |
| ೧೬೧ | ಎಂದು ಕಾಂಬೆನೆ ಯದುವರನಾ | ೧೧೯ |
| ೧೬೨ | ಏನಯ್ಯ ವಾರಿಜನಯನಾ ಎನ್ನನುದ್ಧರಿಸಲಾರೆಯಾ | ೧೨೦ |
| ೧೬೩ | ಏನು ಕಾರಣವಿಲ್ಲೆ ನಿಂದೇ ಅಶ್ವತ್ಥ | ೧೨೦ |
| ೧೬೪ | ಏನೆಂದು ಬಣ್ಣಿಪೆ ಶ್ರೀನಾಥ ನಿನ್ನಯ | ೧೨೧ |
| ೧೬೫ | ಇಂದಿನ ದಿನವೇ ಶುಭದಿನವು | ೧೨೨ |
| ೧೬೬ | ಏನೆಂದ್ಹೇಳಲಿರಂಗನಟ್ಟುಳಿ | ೧೨೨ |
| ೧೬೭ | ಓಂ ನಮೋ ರಾಘವೇಂ | ೧೨೩ |
| ೧೬೮ | ಕಮಲಂಶಂಖಗದಾರಿಪಾಣಿಕಮಲಂ | ೧೨೪ |
| ೧೬೯ | ಕರುಣಾಕರಾ ಕಮಲಾರಮರಣ | ೧೨೬ |
| ೧೭೦ | ಕರುಣಿಸು ಶ್ರೀ ರಾಮಾ | ೧೨೭ |
| ೧೭೧ | ಕರೆತಾರೆ ನೀ ಮನದಾ ಮೋಹನನಾ ಸುಜ್ಞಾನೇ | ೧೨೮ |
| ೧೭೨ | ಕರೆದುಣ್ಣಲಿಲ್ಲಾ ಹರಿನಾಮ ಕಾಮಧೇನುವನು | ೧೨೮ |
| ೧೭೩ | ಕಾಣಲಿಲ್ಲಿ ದೇವರ ನೋಡಲಿಲ್ಲೇ | ೧೨೯ |
| ೧೭೪ | ಕಾಯಬೇಕಲೋ ರಂಗಾ ಎನ್ನಾ | ೧೨೯ |
| ೧೭೫ | ಕಾಯಯ್ಯಾ ಎನ್ನಾ | ೧೩೦ |
| ೧೭೬ | ಕಾಯಯ್ಯ ಕಾಯೊ ಮುರಾರಿ ದಯದಲೆನ್ನಾ | ೧೩೦ |
| ೧೭೭ | ಕಾಯಿ ಕಾಯಯ್ಯಾ ಅನಾಥ ಬಂಧೋ | ೧೩೧ |
| ೧೭೮ | ಕಾಯಯ್ಯ ರಘನಾಥ ದೀನಜನೋದ್ಧಾರಿ | ೧೩೧ |
| ೧೭೯ | ಕಾಯೋ ಕರುಣಾನಿಧೆ | ೧೩೨ |
| ೧೮೦ | ಕಾಯೋ ಕರುಣಿಸಿ ಯನ್ನರಂಗಾ | ೧೩೨ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೧೮೧ | ಕಾಯೋ ದಯದಿಂದೆನ್ನ ಕಾರುಣ್ಯ ನಿಧಿಯೇ | ೧೩೩ |
| ೧೮೨ | ಕಾಯೊ ಪರಮಾನಂದಾ ನಾರಾಯಣಾ | ೧೩೪ |
| ೧೮೩ | ಕಾಲಕಾಲದಿ ಕರುಣಿಗಳರಸನಾದ | ೧೩೫ |
| ೧೮೪ | ಕಾವದು ಎನ್ನನುದಿನಾ ರಂಗಾ | ೧೩೬ |
| ೧೮೫ | ಕೇಳವ್ವ ಗೋಪಿ ನಿನ್ನ ಬಾಲನ ಮಾಡುವ ಆಟದ | ೧೩೮ |
| ೧೮೬ | ಕೇಳಿ ಬಂದೆ | ೧೩೮ |
| ೧೮೭ | ಕೊಡು ಹರಿಯೇ ದಾಸರ ಸಂಗವನು | ೧೩೯ |
| ೧೮೮ | ಕೃಷ್ಣಾ ಬಿಡು ದಾರಿ ದಾರಿ ದಾರಿ | ೧೪೦ |
| ೧೮೯ | ಕೃಷ್ಣಾಕಾಯೋ ಕರುಣಾನಿಧಿಯೇ | ೧೪೦ |
| ೧೯೦ | ಕಂಡಿರೇನೇ ರಂಗನಾ ನಿಮ್ಮ ಮನೆಗಳಲ್ಲಿ | ೧೪೧ |
| ೧೯೧ | ಚದುರಂಗನಾಡುವ ನೋಡಿರೇ | ೧೪೨ |
| ೧೯೨ | ಚರಣವದೋರಿ ಸಲಹೋ ಮುರಾರಿ | ೧೪೨ |
| ೧೯೩ | ಚರಣಾರಾದಿಸೋ ಚಾರುತರ ಭೂ | ೧೪೩ |
| ೧೯೪ | ಜಗದ ಜೀವರನುದರದಲಿಟ್ಟು ಕರುಣಾಮೃತದಿ | ೧೪೪ |
| ೧೯೫ | ಜೋಗಿ ಬಂದನೋಗೋವಿಂದಾ ನಮ್ಮಾ | ೧೪೪ |
| ೧೯೬ | ಡಂಭಕ ಹರಿದೂರ ಪ್ರಾಣಿ | ೧೪೫ |
| ೧೯೭ | ತಪ್ಪುಗಳೆಣಿಸದೆ ಸಿದ್ದೇಶಾ | ೧೪೬ |
| ೧೯೮ | ತಪ್ಪು ಕ್ಷಮೆ ಮಾಡೋ ಕೃಪೆಯಿಂದ ನೋಡೋ | ೧೪೭ |
| ೧೯೯ | ತಾನೇ ತಾನು ಜಗದಂತರ್ಯಾಮಿ ವಿಶ್ವಂಭರಿತಾ | ೧೪೭ |
| ೨೦೦ | ತಾರಿಸಬೇಕೋ ಯನ್ನಾ ಯಾದವ ರನ್ನಾ | ೧೪೮ |
| ೨೦೧ | ತಾಳಲಾರೆನಮ್ಮಾ ಬಾಲಕನಟ್ಟುಳ್ಳಿ ಗೋಪಿಘನವಮ್ಮ | ೧೪೯ |
| ೨೦೨ | ತಿಳಿಯದು ಆಟಾ ಶ್ರೀಹರಿ ನಿನ್ನ | ೧೪೯ |
| ೨೦೩ | ತಿಳಿಯದ್ಯೆ ಶ್ರೀ ಹರಿಯೆ ನಿನ್ನ ಮಹಿಮೆ | ೧೫೦ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೨೦೪ | ತೋರವ್ವಾ ಕೇಳದೀ ಶ್ರೀನಿಧಿಯಾ ಕಾರುಣ್ಯಾಂಬುಧಿಯಾ | ೧೫೧ |
| ೨೦೫ | ತೋರವ್ವಾ ಕೆಳದಿ ಶ್ರೀರಂಗನಾ ಭವ ಭಂಗನಾ | ೧೫೨ |
| ೨೦೬ | ದಯಮಾಡ್ಯೈ ಶ್ರೀ ಹರಿಯನಗಿಂದು | ೧೫೨ |
| ೨೦೭ | ದಾರಿ ದೋರೆನಗೆ ಮುಕ್ಕುಂದಾ | ೧೫೩ |
| ೨೦೮ | ದಾರೇನೆಂಬುರ್ರೈ ಹರಿ ಭಕ್ತರಿಗೆ ದಾರಲ್ಲವೆಂಬುರ್ರೈ | ೧೫೩ |
| ೨೦೯ | ದಾಸನಾಗುವೆನು ಹರಿಯೇ ನಿಮ್ಮ | ೧೫೪ |
| ೨೧೦ | ದೇವತನದ ಮಹಿಮೆಯಗಳೆದೇ | ೧೫೫ |
| ೨೧೧ | ದೇವ ದೇವಾ ಸಾರಂಗಪಾಣೀ | ೧೫೬ |
| ೨೧೨ | ದೇವ ದೇವ ದೇವ ದೇವ ದೇವಾದಿದೇವಾ | ೧೫೭ |
| ೨೧೩ | ದೀನ ದಯಾಳು ಹರೀ ಕೃಪಾನಿಧಿ | ೧೫೭ |
| ೨೧೪ | ಧ್ಯಾನ್ಯ ನಮೌನಗಳೆಂಬ ಜ್ಞಾನಸಾಧನಗಳನು | ೧೫೮ |
| ೨೧೫ | ಧೂಪಾರತಿಯ ನೋಡುವ ಬನ್ನಿರಯ್ಯಾ | ೧೫೮ |
| ೨೧೬ | ನಡಿ ನೀರೇ ಪೋಪಾ ದೇವಿ ಇದ್ದೆಡೆಗೆ | ೧೫೯ |
| ೨೧೭ | ನಮ್ಮ ರಂಗನ ಕಂಡಿರ್ಯಾ ಹೇಳಿರಿ ನೀವಮ್ಮಾ | ೧೫೯ |
| ೨೧೮ | ನಮೋ ನಮೋ ನಮೋ ಎಂಬೆ ನಿನಗೆ ಸ್ವಾಮಿ | ೧೬೦ |
| ೨೧೯ | ನಮೋ ನಮೋ ವೆಂಕಟೇಶ | ೧೬೦ |
| ೨೨೦ | ನರನಾದ ಮ್ಯಾಲ ಹರಿನಾಮ ಜಿವ್ಹೆದಲಿರಬೇಕು | ೧೬೧ |
| ೨೨೧ | ನರ ಹರಿನಾಮವ ನೀ ನೆನೆದರೆ | ೧೬೧ |
| ೨೨೨ | ನಾಮ ನೆನೆಯೊ ನೀಲಾಂಗನಾ | ೧೬೨ |
| ೨೨೩ | ನಾರಾಯಣ ನರಹರಿ ಮಾಧವ ನಿಮ್ಮ ಪಾದಾ | ೧೬೩ |
| ೨೨೪ | ನಿನಗೇನಾಯಚ್ಚರಿಲ್ಲೊ ಕೇಳಾತ್ಮಾ | ೧೬೩ |
| ೨೨೫ | ನಿನ್ನ ನಗಲಿದಾ ಮೊದಲು ಪನ್ನಗವೇಣಿ | ೧೬೪ |
| ೨೨೬ | ನಿನ್ನನೆ ನಂಬಿದೆನಯ್ಯಾ | ೧೬೫ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೨೨೭ | ನಿನ್ನವ ನಾನೆಂದು ಸಿರಿನಲ್ಲಾ ರಕ್ಷಿಸೋ | ೧೬೫ |
| ೨೨೮ | ನಿನ್ನವನೆನಿಸಿದಾ ಮಾನವನಿಂಗೆ | ೧೬೬ |
| ೨೨೯ | ನಿನ್ನ ಹಿತವಾ ಪಡಿಯೋ ಹರಿಯ ಭಜಿಸಿ | ೧೬೭ |
| ೨೩೦ | ನಿಲ್ಲದೋ ನಿಲ್ಲದೋ ಮನವಿದು ಸಲ್ಲದೋ | ೧೬೭ |
| ೨೩೧ | ನಿಲಿಸಯ್ಯಾ ನಿಲಿಸೆನ್ನ ಮನವ ಶ್ರೀ ಹರಿಯೇ | ೧೬೮ |
| ೨೩೨ | ನೀಡಲೋ ಶ್ರೀರಂಗಾ ನಿನ್ನ ದಾಸರ ಸಂಗಾ | ೧೬೯ |
| ೨೩೩ | ನೀರಜಗಂಧಿಯೇ ಹೇಳೇ ಸುಳಿದವರಾರಮ್ಮಾ | ೧೬೯ |
| ೨೩೪ | ನೀರೇ ಜಗದಾಧಾರನ ತೋಳ ಮೋಹನಕಾರೇ | ೧೭೧ |
| ೨೩೫ | ನೀರೇ ತೋರೇ ಪಯೋನಿಧಿ ವಾಸನಾ | ೧೭೨ |
| ೨೩೬ | ನೀರೆ ನಿಕರೆ ತಾರೇ ಪ್ರಾಣದೊಲ್ಲಭನಾ ಜಾಣಿ | ೧೭೩ |
| ೨೩೭ | ನೀರೇ ತೋರೆಲೆ ಜಗಪಾಲ ಮುಕುಂದನಾ | ೧೭೩ |
| ೨೩೮ | ನೀ ಯನ್ನ ಸಲಹುತಿಹೆ ಜನುಮ ಜನುಮಗಳಲ್ಲಿ | ೧೭೪ |
| ೨೩೯ | ನುಡಿ ಎನಪ್ರಿಯನಾ ನೀ ತಂದು ತೋರೇ | ೧೭೫ |
| ೨೪೦ | ನೆನಿ ಮನವೇ ನೀ ಮುಕುಂದನ | ೧೭೫ |
| ೨೪೧ | ನೆನೆಯೋ ನೀ ಎನ್ನ ಮನವೇ | ೧೭೬ |
| ೨೪೨ | ನೆನೆವೆನಾ ನೆನೆವರಿಗೊಲಿವನಾ | ೧೭೭ |
| ೨೪೩ | ನೋಡಮ್ಮಮ್ಮಾ ಎಂಥವನಿವಾ ಚಿನ್ನನೆ | ೧೭೭ |
| ೨೪೪ | ನೋಡಮ್ಮಾ ಶ್ರೀವಾಸುದೇವನಾ ನಮ್ಮ | ೧೭೮ |
| ೨೪೫ | ನೋಡಿರೇ ನಂದ ಕಂದನಾ | ೧೭೯ |
| ೨೪೬ | ನೋಡಿರೆ ನೋಡಿರೆ ನಂದನ ಕಂದನ | ೧೮೦ |
| ೨೪೭ | ನೋಡುವರೇ ಅಂತವಾ ನೋಡುವರೇ | ೧೮೧ |
| ೨೪೮ | ನಂದಕಂದನ ನೋಡಿರೇ ಅಂದದಿ ಛಂದದಿ | ೧೮೧ |
| ೨೪೯ | ನಂದ ಕಂದನೇ ಇವಸುರವೃಂದ ವಂದ್ಯನೇ | ೧೮೨ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
| --- | --- | --- |
| ೨೫೦ | ನಂದನಂದನ ಪದ್ಮಾನಂದನ ವಂದ್ಯನೇ | ೧೮೩ |
| ೨೫೧ | ನಂಬಬೇಕು ಹರಿಯ ನಾಮಾ | ೧೮೪ |
| ೨೫೨ | ನಂಬಿ ನೆಮಯೋ ಹರಿಯನಾಮ ವಿಡಿದು | ೧೮೫ |
| ೨೫೩ | ನಂಬಿ ಭಜಿಸಿರೈಯ್ಯಾ ಶರಣರು | ೧೮೫ |
| ೨೫೪ | ನಂಬಿ ಭಜಿಸು ಹರಿಯಾ | ೧೮೬ |
| ೨೫೫ | ನಂಬುಗೆ ಪಡೆಯಿರೋ ದೇವರ ದೇವನಾ | ೧೮೭ |
| ೨೫೬ | ನಂಬು ದಯಾನಿಧಿ ರಾಮನಾ | ೧೮೮ |
| ೨೫೭ | ನಂಬಿದವರ ಇಂಬಾದಾ ಕಮಲಾಂಬಕನೇ | ೧೮೮ |
| ೨೫೮ | ನಂಬು ನರಮೃಗನಾ ಮನುಜಾ | ೧೮೯ |
| ೨೫೯ | ನಂಬು ಮನವೆ ರಾಮಚಂದ್ರನಾ | ೧೮೯ |
| ೨೬೦ | ನಂಬು ಹರಿಯ ಎನ್ನ ಮನವೇ | ೧೯೦ |
| ೨೬೧ | ಪಾದಾನಂಬು ಮನವೇ ಶ್ರೀರಂಗಯ್ಯನ | ೧೯೧ |
| ೨೬೨ | ಪಾಲಯಾನಂತ ಶಯನಾ | ೧೯೧ |
| ೨೬೩ | ಪಾಲಿಸಯ್ಯ ಎನ್ನ ಪಾದಪದ್ಮದೋರಿ ನೀ | ೧೯೨ |
| ೨೬೪ | ಪಾಲಿಸೆನ್ನಾ ದೀನದಯಾಳಾ | ೧೯೩ |
| ೨೬೫ | ಪಾಲಿಸೋ ಎನ್ನ ನೀ ಘನಕರುಣದಲಿ | ೧೯೩ |
| ೨೬೬ | ಪಾಲಿಸೋ ರಘುರಾಯಾ | ೧೯೪ |
| ೨೬೭ | ಪೂಜೆಯ ನಾನೇನ ಮಾಡಿವೆ ಮಹಾ ರಾಜರಾಜ | ೧೯೫ |
| ೨೬೮ | ಫಲಹಾರವ ಮಾಡೋ ಪದುಮಲೋಚನನೆ | ೧೯೬ |
| ೨೬೯ | ಬರದು ಬಂದು ದೂರಬ್ಯಾಡಿರೇ ನೀವೆಲ್ಲಾ | ೧೯೬ |
| ೨೭೦ | ಬರಹೇಳಮ್ಮಾ ಭಾವೇ ಮನೆಗೆ | ೧೯೭ |
| ೨೭೧ | ಬಾರನ್ಯಾತಕ ಯದು ವೀರಾ ಪಾದಾಂಬುಜವದೋರಾ | ೧೯೮ |
| ೨೭೨ | ಬಾಲನೇ ಗೋಪಿ ಬಾಲನೇ | ೧೯೯ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೧೭೩ | ಬಾರೆನ್ನ ಸಖಿಯೇ ಕರೆದು ತೋರಿಸೇ | ೧೯೯ |
| ೧೭೪ | ಬಾರೋ ಬಾರೋ ಕೋಪವಿನ್ಯಾತಕೆನ್ನ ಕೂಡಾ | ೨೦೦ |
| ೧೭೫ | ಬಾಲಲೀಲ ಕೃಷ್ಣನ ನೆನೆವನಾ | ೨೦೦ |
| ೧೭೬ | ಬಿಡೆ ಬಿಡೆನೋ ನಿನ್ನಾ ಅಡಿಗಳ ಯುಗಳನ್ನಾ | ೨೦೧ |
| ೧೭೭ | ಬೆಳಗುವಾರುತಿ ಬನ್ನಿ ಲಲನೆಯರೆಲ್ಲರು | ೨೦೨ |
| ೧೭೮ | ಬಂದ ಜನ್ಮ ಬರಲಂಜಲ್ಯಾತ ಕಗೋ | ೨೦೨ |
| ೧೭೯ | ಬಂದನಮ್ಮಾ ಬಂದನಮ್ಮಾ ನಮ್ಮ ರಂಗನು | ೨೦೩ |
| ೧೮೦ | ಬಂದಾನಲ್ಲೆವೆ ಮನೆಗಿಂದು ಕೇಳವ್ವಾ | ೨೦೪ |
| ೧೮೧ | ಬಂದನೇಳೆ ದೇವಿ ರಂಗ ಮನೆಗೆ | ೨೦೪ |
| ೧೮೨ | ಬಂದವನಾರ್ರೈಯ್ಯಾ ನೀನು | ೨೦೫ |
| ೧೮೩ | ಭಕುತಿಯಲಿ ಭಜಿಸಿ ಹರಿಯ ಸುಖಿಸಬಾರದೇ | ೨೦೬ |
| ೧೮೪ | ಭಜಿಸು ಮನವೆ ಶ್ರೀ ರಂಗಯ್ಯನಾ | ೨೦೬ |
| ೧೮೫ | ಭಾವ ಭಕುತಿಗೆ ವಲಿವ ನೋಡಿರೋ | ೨೦೭ |
| ೧೮೬ | ಮತ್ತೆ ನಾನೇನೆಂದೆ ಮದನ ಜನಕ | ೨೦೮ |
| ೧೮೭ | ಮದ್ದಾನೆ ಗತಿ ಸಖಿ ಬಾರಮ್ಮಾ | ೨೦೯ |
| ೧೮೮ | ಮರುಳು ಮಾಡಿದನಲ್ಲೇ ಏಣಾಕ್ಷಿ | ೨೦೯ |
| ೧೮೯ | ಮಾಡು ಸಂತರ ಬಳಕೀ ಏ ಮಾನವಾ | ೨೧೦ |
| ೧೯೦ | ಮಾಡಲೋ ಹರಿಪಾದ ಭಜನಿ ಮನವೇ ನೀ | ೨೧೦ |
| ೧೯೧ | ಮಾತನಾಡಲೆ ಜಾಣೆ ಮೋಹನಬಿ ಮದಯಾನೆ | ೨೧೧ |
| ೧೯೨ | ಮಾಧವಾ ನಿಮ್ಮ ನಾಮ ಸಾಲದೇ | ೨೧೨ |
| ೧೯೩ | ಮಾಧವಾ ರಕ್ಷಿಸೆನ್ನಾ ಮೋಹನಾ ನಿನ್ನಾ | ೨೧೩ |
| ೧೯೪ | ಮಾಮನೋಹರಾ ಮುರಾರಿ ಬಾರೋ | ೨೧೪ |
| ೧೯೫ | ಮುಕುತಿಗೆ ಹೊಣೆಯಿದಕೋ ಭಕುತಿ | ೨೧೪ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೧೯೬ | ಮುದ್ದು ತಾರೋ ರಂಗಾ ಮುದ್ದು ತಾರೋ ಕೃಷ್ಣಾ | ೨೧೫ |
| ೧೯೭ | ಮುನಿದಳ್ಯಾತಕ ನೀರೇ ಪಾರ್ವತಿ ಮಾಡಸವರತಿ | ೨೧೬ |
| ೧೯೮ | ಮೊರೆಯ ಹೊಕ್ಕೆನು ನಿನ್ನಾ ಚರಣ ಕಮಲಕ | ೨೧೬ |
| ೧೯೯ | ಯಾಕೆಲೋ ರಂಗಾ ನಿನ್ನರಸಿಯೊಳಗಮುನಿದಿರುವೆ | ೨೧೭ |
| ೨೦೦ | ಯಾಕೆ ರಂಗ ನಿನಗೆ ಮಾಕಾಂತೆಯೊಳು ಗರ್ವ | ೨೧೮ |
| ೨೦೧ | ಯಾಕೆ ವದಗಲೊಲ್ಲೆಯನ್ನಯ ಬಿನ್ನಹಕ | ೨೧೯ |
| ೨೦೨ | ರಘುನಾಥ ದೀನಾನಾಥ ಸದ್ಗತಿದಾತ ನೋಡಿರ್‍ಯೋ | ೨೨೦ |
| ೨೦೩ | ರಘುರಾಯ ಯನ್ನಮನವ ನಿಲಿಸಲಾಗದೇ | ೨೨೦ |
| ೨೦೪ | ರಕ್ಷಿಸೆನ್ನ ನೀ ಲಕ್ಷುಮೀಪತಿ | ೨೨೧ |
| ೨೦೫ | ರಾಮ ಕೃಷ್ಣ ಗೋವಿಂದ ಗೋಪಾಲಾ ಜಯ | ೨೨೨ |
| ೨೦೬ | ರಾಮಾಕೃಷ್ಣಾ ಗೋವಿಂದಾ ಗೋಪಾಲ ಕೇಶವಾ | ೨೨೩ |
| ೨೦೭ | ರಾಮಚಂದ್ರನೇ ಪರದೈವನೊ ನಮ್ಮ | ೨೨೪ |
| ೨೦೮ | ರಾಮನಾಮವನು ನೆನಿಯಬಾರದೆ | ೨೨೫ |
| ೨೦೯ | ರಾಮ ರಸಾಯನವಾ ಬನ್ನಿರಯ್ಯ ಸೇವಿಸುವಾ | ೨೨೫ |
| ೨೧೦ | ರಮಾಯನ್ನಿ ರಾಮಾಯನ್ನಿ ರಾಮಯನ್ನಿರೈಯ್ಯಾ | ೨೨೬ |
| ೨೧೧ | ರಾಮ ರಘೋತ್ತಮ ಕೃಷ್ಣ ಘನ | ೨೨೬ |
| ೨೧೨ | ರಾಮ ಸಲಹಯ್ಯ ಪುಣ್ಯನಾಮ | ೨೨೭ |
| ೨೧೩ | ರಂಗನಟ್ಟುಳಿ ಕೇಳಿ ಗೋಪೆಮ್ಮಾ | ೨೨೮ |
| ೨೧೪ | ರಂಗ ಬಂದಾನಮ್ಮ ಭಂಗಿಸಿ ಕಾಳಿಯ | ೨೨೮ |
| ೨೧೫ | ವದನದಲಿ ಮನವೆ ನೆನಿನಾಮ ಶ್ರೀಹರಿಯಾ | ೨೨೯ |
| ೨೧೬ | ವಾಸುದೇವನ್ನಾ ಪಾದವ ನಂಬಬಾರದೇ | ೨೩೦ |
| ೨೧೭ | ವಿವೇಕದಿಂದಾ ಮತಿಯಕ್ತನಾಗಿ | ೨೩೧ |
| ೨೧೮ | ಶರಣಜನೋದಧಿಚಂದ್ರಾ ಸಿರಿ | ೨೩೨ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೩೧೯ | ಶರಣರೆಳಕಂದಿ ನೀನ್ಯಾಕೆ ಕರುಣಿಸಲೊ | ೨೩೩ |
| ೩೨೦ | ಶರಣು ವೆಂಕಟರಮಣ ಭಕ್ತ ಸಂಕಟಹರಣ | ೨೩೪ |
| ೩೨೧ | ಶರಣು ಶಿರೀಶ ಹರೇಗೋವಿಂದಾ | ೨೩೪ |
| ೩೨೨ | ಶರಣು ಶಿರೀಶ ಹರೇ | ೨೩೫ |
| ೩೨೩ | ಶಿಶುಗಳಪರಾಧಕೆ ಶಿಕ್ಷೆ ಕಣ್ಣಿಲಲ್ಲದೇ | ೨೩೭ |
| ೩೨೪ | ಶಿಶುವಿನ ಯಾತಕೆ ದೂರುವಿರೆ | ೨೩೮ |
| ೩೨೫ | ಶ್ರೀ ಕೃಷ್ಣನಾ ಚರಣಾ ನಂಬಿ ಭಜಿಸುವುದು ಬಲು | ೨೩೮ |
| ೩೨೬ | ಶ್ರೀ ರಾಮನಾಮ ಸ್ಮರಿಸೀಕ್ಷಕಾರಿ | ೨೩೯ |
| ೩೨೭ | ಶ್ರೀ ಲತಾಂಗಿಯ ವಲ್ಲಭಾ ಎನ್ನ | ೨೪೧ |
| ೩೨೮ | ಶ್ರೀವಧು ನಯನಾಬ್ಜ ವಿಲೋಚಿನಾ | ೨೪೧ |
| ೩೨೯ | ಶ್ರೀ ವಧುರಮಣನ ಚರಿತಾಮೃತನು ಸೇವಿಸಬಾರದೆ | ೨೪೪ |
| ೩೩೦ | ಸಖೀ ಕೇಳೇ ಇನ್ನು ಹರುಷದ ಮಾತಾ | ೨೪೫ |
| ೩೩೧ | ಸಖಿಬಾರೆ ಸುರಮೋಹನ ನೀಕರತಾರೆ | ೨೪೫ |
| ೩೩೨ | ಸಣ್ಣವನೆ ಘನನೀಲಾ ಗೋಪಿ ಸಣ್ಣವನೆ ಘನನೀಲಾ | ೨೪೬ |
| ೩೩೩ | ಸ್ಮರಿಸೆನ್ನ ಮನವೇ ಯಾದವರಾಯನಾ | ೨೪೬ |
| ೩೩೪ | ಸ್ಮರಿಸು ಮನವೇ ನೀ ಪೂರ್ಣ ಕರುಣಾಸಾಗರ | ೨೪೭ |
| ೩೩೫ | ಸರಸಿಜಾನನೆ ಉಚಿತವಲ್ಲದು | ೨೪೮ |
| ೩೩೬ | ಸರಸಿ ಜಾಂಬಕಿ ನೀರೇ ಎನಗ ತ್ವರಿತದಿ ತೋರೆ | ೨೪೯ |
| ೩೩೭ | ಸಲಹಯ್ಯಾ ನಿನ್ನ ಸಾರಿದೇ ಶ್ರೀ ರಮಣನಾ | ೨೫೦ |
| ೩೩೮ | ಸಲಹು ಸಲಹು ಸಲಿಲಜನಯನಾ ಎನ್ನಾ | ೨೫೦ |
| ೩೩೯ | ಸಲಹುದ್ಯೆ, ಸಲಹುದ್ಯೆ, ಸಲಹುದ್ಯೆ ಎನ್ನಾ | ೨೫೧ |
| ೩೪೦ | ಸಲಹು ಸಲಹು ಹರಿಯೇ ದಯದಿಂದಲಿ | ೨೫೨ |
| ೩೪೧ | ಸಲಹು ಸಲಹು ಸಲಿಲಜಾಂಬಕ | ೨೫೨ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೩೪೨ | ಸಿರಿದೇವ ನಮ್ಮ ನಿದ್ಯೆವನು ಶರಣುರಕ್ಷಕವಾವನು | ೨೫೩ |
| ೩೪೩ | ಸುಖಿಸು ವರದ ಕೊಂಡು | ೨೫೪ |
| ೩೪೪ | ಸುಮ್ಮನೆ ದೋರಯ್ಯಾ ರಮ್ಮೆಯ ಕರದಲಿ | ೨೫೪ |
| ೩೪೫ | ಸಂಗಮಾಡೆಲೋ ಶ್ರೀಹರಿದಾಸರಾ | ೨೫೫ |
| ೩೪೬ | ಹರಿಕೃಪೆಯೋಗ್ಯ ಮುಮುಕ್ಷನು | ೨೫೬ |
| ೩೪೭ | ಹರಿದಾಸನವನೇ ನೋಡಿ | ೨೫೭ |
| ೩೪೮ | ಹರಿಯ ನೆನಿಯೆ ಹರಿಯ | ೨೫೮ |
| ೩೪೯ | ಹರಿಯೇ ಗತಿ ಭರ್ತನು ಜಗಕೇ | ೨೫೯ |
| ೩೫೦ | ಹರಿ ನೀನೆವೆ ಸರ್ವ ಚೇತನ ಧೃತಿಯ ಸಕಲವೇ | ೨೫೯ |
| ೩೫೧ | ಹರಿಪಾದವ ನಂಬಿರೋ ಮನುಜರೆಲ್ಲ | ೨೬೨ |
| ೩೫೨ | ಹರಿ ಪರಮಾನಂದಾ ಗೋವಿಂದಾ | ೨೬೨ |
| ೩೫೩ | ಹರಿ ಭಜನೆಯ ಮಾಡು ಮನವೆ | ೨೬೩ |
| ೩೫೪ | ಹರಿಯಾ ಪಾದಕ ಶರಣೆನ್ನಿ | ೨೬೩ |
| ೩೫೫ | ಹರಿಯಾ ಪೂಜೆಯಾ ಮಾಡಿ ಗತಿಗಳ ಬೇಡಿ | ೨೬೪ |
| ೩೫೬ | ಹರಿಯೇ ಕಾವುದು ಕಾವದು ನೀ | ೨೬೫ |
| ೩೫೭ | ಹರಿಯೇ ದಯಮಾಡು ಮಾಡು ಮಾಡು ಮಾಡು | ೨೬೬ |
| ೩೫೮ | ಹರಿಯೇ ನಮ್ಮ ಪರದೈವಾ ಹರಿಯೇ ತ್ರಿಭುವನ | ೨೬೬ |
| ೩೫೯ | ಹರಿಯೆಂದೆನ್ನಿ | ೨೬೭ |
| ೩೬೦ | ಹರಿ ಲೀಲೆಯ ನೋಡಿ ಹರಿಯಾಡುವದೀ | ೨೬೮ |
| ೩೬೧ | ಹರಿ ವಿಮುಖನಾದ ಮನುಜಶ್ವಪಚ ಶ್ರೇಷ್ಠನು | ೨೬೮ |
| ೩೬೨ | ಹರಿ ಹರಿ ಎನ್ನಬಾರದೇ ಮನವೇ ನೀನು | ೨೬೯ |
| ೩೬೩ | ಹರಿಹರಿ ಕೊಡು ನಿನ್ನಯಚ್ಚರನು | ೨೬೯ |
| ೩೬೪ | ಹರಿ ಹರಿ ಗೋವಿಂದ ಯನಬಾರದೇ ಪ್ರಾಣಿ | ೨೭೦ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೩೬೫ | ಹರಿ ಹರಿ ತಾರಿಸೆನ್ನ ಸಹಕಾರಿ ದಯಬೀರಿ | ೨೭೦ |
| ೩೬೬ | ಹರಿ ಹರಿ ಯನ್ನಿರೋ | ೨೭೧ |
| ೩೬೭ | ಹರಿ ಹರಿಹರಿ ಹರಿಯೆಂದು ನೆನೆದವನೆ ಧನ್ಯ | ೨೭೨ |
| ೩೬೮ | ಹರಿ ಹರಿ ಯೆಂದು ಸ್ಮರಿಸೆಲೋ ಪ್ರಾಣಿ | ೨೭೨ |
| ೩೬೯ | ಹರಿ ಹರಿ ಹರೀ ಎನ್ನಿ ಮನದೊಳು | ೨೭೩ |
| ೩೭೦ | ಹಾರುವರಿಗೆ ಭೂಮಿಯಾ ನೀಡಿದೆನೆಂದು | ೨೭೩ |
| ೩೭೧ | ಹಿತ ನೋಡಿ ಸಂತರ ಕೂಡೀ | ೨೭೪ |
| ೩೭೨ | ಹಿಡಿ ಹಿಡಿರಿಂದು ಸಿಕ್ಕಿದ ಕಳ್ಳನಾ | ೨೭೫ |
| ೩೭೩ | ಹಿರಿಯ ಒಡೆಯಕಂಡೆನಮ್ಮಾ ಧರಿಯ | ೨೭೫ |
| ೩೭೪ | ಹೊಂದಿ ಬದಕಿರ್ಯೋ | ೨೭೬ |
| ೩೭೫ | ಜ್ಞಾನ ಸಖೀಕೇಳೇ ಜ್ಞಾನಿಗಳಾರಾಧಿಸುವಾ | ೨೭೭ |
| ೩೭೬ | ಆರತಿಯೆತ್ತಿರೆ ಆರತ ಭಕುತಿಲಿ ಆರತಿ ಪತಿ ಪಿತ | ೨೭೮ |
| ೩೭೭ | ಕೇಶವಾಚ್ಯುತ ಮಾಧವಾನಂತ ಶ್ರೀ ಶಕಮಲದಳೇಕ್ಷಣ | ೨೭೮ |
| ೩೭೮ | ಜಯರಾಘವ ಜಯರಾಘವ ಜಯರಾಘವ ರಾಮಾ | ೨೮೦ |
| ೩೭೯ | ಜಯದೇವ ಜಯದೇವ ಜಯ ವೆಂಕಟೇಶಾ | ೨೮೦ |
| ೩೮೦ | ಜಯಜಯಾ ಶ್ರೀನಿವಾಸಾ | ೨೮೧ |
| ೩೮೧ | ಜಯ ಮಂಗಳಂ ಮಹಾ ಶುಭ ಮಂಗಳಂ ಭಯ | ೨೮೨ |
| ೩೮೨ | ಜಯದೇವ ಜಯದೇವ ಜಯ ರಾಘವ ರಾಮಾ | ೨೮೨ |
| ೩೮೩ | ಜಯ ಮಂಗಳಂ ಮಹಾ ಶುಭ ಮಂಗಳಂ | ೨೮೪ |
| ೩೮೪ | ಜಯ ಮಂಗಳಂ ಮಹಾ ಶುಭ ಮಂಗಳಂ | ೨೮೪ |
| ೩೮೫ | ಜಯ ಮಂಗಳಂ ಮಹಾ | ೨೮೫ |
| ೩೮೬ | ಜಯ ಜಯ ರಾಮ ಸಕಲ ಗುಣಧಾಮನೇ | ೨೮೬ |
| ೩೮೭ | ಜಯ ಜಯ ಯಾದವನಾಥ ಮುರಾರಿ | ೨೮೭ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೩೮೮ | ಮಂಗಳಂ ಜಯ ಮಂಗಳಂ ಶುಭಮಂಗ ನ್ನಿರೇ | ೨೮೮ |
| ೩೮೯ | ಮಂಗಳ ಮಹಿಮ ಶುಭಾಂಗಗ ಮಂಗಳ | ೨೮೮ |
| ೩೯೦ | ಮಂಗಳಂ ಶ್ರೀರಂಗಗ ಮಂಗಳಂ | ೨೮೯ |
| ೩೯೧ | ಮಂಗಳಾರುತಿಯಾ ತಂದೆತ್ತಿರೇ | ೨೯೦ |
| ೩೯೨ | ಮಂಗಳ ಜಯ ಜಯ ಮಯಳಾ ಶುಭ | ೨೯೧ |
| ೩೯೩ | ಜಯದೇವ ಜಯದೇವ ಜಯ ಗೋಪಾಲಕೃಷ್ಣ | ೨೯೨ |
| ೩೯೪ | ಜಯ ಜಯ ಮಂಗಳ ಗುರುಮೂರ್ತಿ | ೨೯೨ |
| ೩೯೫ | ಜಯರಘುರಾಮಾ | ೨೯೩ |
| ೩೯೬ | ಜೋ ಜೋ ನಿಜಕಂದ ಮುಕುಂದಾ | ೨೯೪ |
| ೩೯೭ | ಜೋಜೋಜೋ ಬಾಲ ಮುಕುಂದಾ | ೨೯೪ |
| ೩೯೮ | ಜೋ ಜೋಯೆನ್ನುತಲಿ ಗೋಪಿ | ೨೯೫ |
| ೩೯೯ | ಜೋ ಜೋ ಜೋ ಜೋ ದೇವರದೇವನೆ ಜೋ | ೨೯೬ |
| ೪೦೦ | ಶ್ರೀಮತ್ಕಾಂಚನ ಕೋಟಿರನ್ನತನಯಾ | ೨೯೬ |
| ೪೦೧ | ಕಮಲನಯನೆ ತಾನ್ಯಾಕ ಮನಕೆಬಾರನೇ | ೨೯೯ |
| ೪೦೨ | ಕಶ್ಯಪಋುಷಿಯ ಪುತ್ರನ ಪೌತ್ರನ್ನೈಯಂಗ | ೨೯೯ |
| ೪೦೩ | ಕಾಳಿಫಣಿಫಣವನೇರಿ ಕಾಳೀಫಣೆಪಣವನೇರಿ | ೩೦೦ |
| ೪೦೪ | ಗೋಪವಾಹನ ದೇವ ಗೋಭರಿತ ಚಕ್ರಧರ | ೩೦೦ |
| ೪೦೫ | ಗೋಪಾತ್ಮಜಂ ಬಿಟ್ಟ ಗೋಕರ್ಣ ಬಾಣ ಬರೆ | ೩೦೧ |
| ೪೦೬ | ಜೆನ್ನೊಡಲ ಮರಗ್ಹುಳ ಬಾನ್ಮಣಿಗಳಾವನಡಿ | ೩೦೧ |
| ೪೦೭ | ತಿಳಿದು ನೋಡಯ್ಯಾ ತಿಳಿದು ನೋಡಯ್ಯಾ | ೩೦೧ |
| ೪೦೮ | ನಿನ್ನನೇ ಮೊರೆಹೊಕ್ಕಿಹೆನೋ | ೩೦೨ |
| ೪೦೯ | ಪತ್ರ ವರರಥ ಪುತ್ರ ಪುತ್ರ ಪತಿಜಿತ ಪಿತ್ರ | ೩೦೨ |
| ೪೧೦ | ಬಲ್ಗೈಯರಸರಂಜಿ ಸುಮ್ಮನಿರೆ ದಶಕಂಠ | ೩೦೩ |

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೪೧೧ | ಪಾಲಯಾ ಉರಗಾರಿ ಗಮನಾ | ೩೦೩ |
| ೪೧೨ | ಪುಷ್ಕ ರಾದ್ಯಾದಿ ತೀರ್ಥಂಗಳಾವನ ಪಾದ | ೩೦೪ |
| ೪೧೩ | ಯಲರುಣಿಸು ಮೈಮಂಚ ಪಕ್ಕಯಾಣ್ಮನದೇಶ | ೩೦೪ |
| ೪೧೪ | ರಾಮ ಬಾಣಾಕ್ಷಪಿತ ರಾಮ ಶಶಿಭುಜ ಶೋಭ | ೩೦೫ |
| ೪೧೫ | ಶರಣು ಶರಣು ಶರಣರಕ್ಷಕ ಶರಧಿವಾಸನೆ ಕೇಶವಾ | ೩೦೫ |
| ೪೧೬ | ಸಾರಂಗ ಧೃತನಾಗ್ರ ಭವಳ ಮುಖ ವಾರಿರುಹ | ೩೦೬ |
| ೪೧೭ | ಸಾರಂಗ ರಾಜ ನಿಜ ವೈರಿ ಬಲೆಯೊಳಗಾಗಿ | ೩೦೬ |
| ೪೧೮ | ಸೋಮಮಿತ್ರ ಪ್ರಿಯ ಸರಸಿಜೋದ್ಭವನಯ್ಯಾ | ೩೦೬ |
| ೪೧೯ | ಹರಿಯಾನಕ ಚಂದ್ರಕೆ ಚಕೋರಾದವರಾ | ೩೦೭ |
| ೪೨೦ | ಹರಿಪದ ಪದ್ಮ ಪರಾಗ ಮಧುಕರ ರಾಧರ ನೆರೆ | ೩೦೭ |
| ೪೨೧ | ಸಾರಸಾರ ವಿಚಾರ ವಿವೇಕದ ದಾರಿಯನೇ | ೩೦೭ |
| ೪೨೨ | ಭಂಗ ಬಡುವ ಸಂಸಾರದಿ ಕುಜನರ ಸಂಗದಲಿ | ೩೦೮ |
| ೪೨೩ | ಸಲಹಬೇಕಯ್ಯಾ ಎನ್ನ ನೀನು | ೩೦೮ |
| ೪೨೪ | ಶರಣು ಸರ್ವಾತೀತೆ ಶ್ರೀದೇವಿ ವಿಖ್ಯಾತೆ | ೩೦೮ |
| ೪೨೫ | ಕಾವುದೈ ಎನ್ನ ನೀ ಕಂಬುಗಳಾ | ೩೦೯ |

# ಅನುಬಂಧಗಳು

೧. ಕಠಿಣ ಶಬ್ದಗಳ ಅರ್ಥ

೨. ಟಿಪ್ಪಣಿಗಳು

೩. ಕೀರ್ತನೆಗಳ ಅಕಾರಾದಿ

# ಅನುಬಂಧ–೧

## ಕಠಿಣ ಶಬ್ದಗಳ ಅರ್ಥ

ಅಖಿಳ = ಇಡಿಯಾದ

ಅಗಜೆ = ಪಾರ್ವತಿ

ಅಗ್ಗಳ = ಶ್ರೇಷ್ಠ

ಅಘ = ಪಾಪ

ಅಘಶಮನ = ಪಾಪಗಳನ್ನು ಹರಿಸುವವ

ಅಜನಯ್ಯ = ಬ್ರಹ್ಮನತಂದೆ (ವಿಷ್ಣು)

ಅಟ್ಟುಳಿ = ಹಿಂಸೆ

ಅಡಕಲ = ಒಂದರಮೇಲೊಂದು ಪೇರಿಸಿ ಇಡುವುದು

ಅಣುಗ = ಮಗ, ಪ್ರೀತಿಪಾತ್ರ

ಅರ್ತು = ಅರಿತು

ಅರ್ಥಿ = ಬೇಡುವುದು

ಅಧರ = ತುಟಿ

ಅನಲ = ಬೆಂಕಿ

ಅನಾಹತ = ಏಟುಬೀಳದ

ಅನಿಮಿತ್ತ = ಸ್ವಚ್ಛಂದ, ತನ್ನ ಇಚ್ಛೆ

ಅನಿರ್ವಚನೀಯ = ವರ್ಣಿಸಲು ಶಕ್ಯವಿಲ್ಲದ

ಅನುಷ್ಠಾನ = ಆಚರಣೆ

ಅಪ್ಪು = ೧ ನೀರು ೨ ಆಲಿಂಗನ

ಅಭಿನವ ಮುನಿ = ಉತ್ತರಾದಿ ಮಠದ ಸತ್ಯಭಿನವತೀರ್ಥರು

ಅಭೀಷ್ಟ = ಇಚ್ಛೆ

ಅರಿಯದೆ = ತಿಳಿಯದೆ

ಅರುಹು = ಅರಿವು , ಜ್ಞಾನ

ಅವಧರಿಸಿ = ಕೇಳಿ

ಅವಜ್ಞೆ = ಕಡೆಗಣಿಸು, ಅಲಕ್ಷ್ಯ

ಅಶನ = ಆಹಾರ

ಅಹಿ = ಹಾವು

ಅಳಿ = ಭೃಂಗ

ಅಂಗಜ = ಮನ್ಮಥ

ಅಂಗ = ದೇಹ

ಅಂಘ್ರಿ = ಪಾದ

ಅಂಜನ = ಮುಲಾಮು, ಕಾಡಿಗೆ

ಅಂದುಗೆ = ಕಾಲಿನ ಕಡಗ

ಅಂಧ = ಕುರುಡ

ಅಂಬುಜನಾಭ = ವಿಷ್ಣು (ಹೊಕ್ಕಳಲ್ಲಿ ಕಮಲವಿದ್ದವ)

ಆರೆವಾಳ = ಶುರ

೧

ಬರೇ ವಾಚಾಭಿಮಾನವಿದೇಕೆ ।
ಹರಿ ಲೀಲಾಮೃತ ಸೇವಿಸಲಿಕ್ಕೆ ಪ

ಸಂಸ್ಕೃತ ವಂದ್ಯ ಪ್ರಾಕೃತ ನಿಂದ್ಯ ।
ಸುಕೃತಿಗಳಾಡುದೇ ಕುಂದಾ ೧

ಕನ್ನಡ ನುಡಿಯೆಂದ್ಹಳಿಯಬೇಡಿ ।
ಕನ್ನಡಿ ದರ್ಪಣವಲ್ಲವೆ ನೋಡಿ ೨

ಕರಿದು ಬಿಳಿದು ಅವಾದರೇನು ।
ಎರಡಾಗದು ಕ್ಷೀರೆಂದೂ ತಾನು ೩

ಗುರುವರ ಮಹೀಪತಿ ಪ್ರಭುಚರಿತಾ ।
ಭರಿತಾದುದೇ ಪಾವನ ನುಡಿತಾ ೪

೨

ಓಂ ನಮೋ ಸಕಲ ಮಂಗಲದಾಯಕ ।
ಘನ್ನ ಮಹಿಮ ಶ್ರೀ ಗಣನಾಯಕ ।
ನಿನ್ನ ಕೀರ್ತಿ ಪಾಠವ ಭಕ್ತರ ।
ಇನ್ನು ಮಾಡೋ ನಿರ್ವಿಘ್ನದಿ ಮುಕ್ತರ ೧

ಛಂದದಮೃತ ಶಾರದೆ ವಾಣಿ ।
ವಂದಿತಾಖಿಳ ನಿರ್ಜರ ವಾಣಿ ।

ಬಂದು ಸನ್ಮತಿ ನೀಡುತ ಶಾರದಾ ।
ಇಂದು ವದನೆ ರಕ್ಷಿಸು ಶಾರದಾ ೨

ಕಪಿಯ ವೇಷದಿ ಬಂದ ಪ್ರಭಂಜನಾ ।
ವಪು ಮಾಡಿದ ದೈತ್ಯರ ಭಂಜನಾ ।
ವಿಪುಳ ಮಹಿಮ ನಿರ್ಜರ ರಂಜನಾ ।
ಕೃಪೆ ಯಲಿ ರಕ್ಷಿಸು ದೋರಿ ನಿರಂಜನಾ ೩

ಸಚ್ಚಿದಾನಂದಾ ವಿಗ್ರಹ ಮೂರುತಿ ।
ಅಚ್ಯುತಾನಂತ ಮಂಗಲ ಕೀರುತಿ ।
ಎಚ್ಚರಿ ಸೆನಗೆ ಭಕ್ತಿಯ ಸ್ವಾದವಾ ।
ನಿಚ್ಚ ರಕ್ಷಿಸು ತೋರುತ ಪಾದವಾ ೪

ಜ್ಞಾನದಂಜನಾ ಕಣ್ಣಿಗೆ ಸೇರಿಸಿ ।
ಈ ನಿಧಾನದ ಚಿನ್ಮಯ ದೋರಿಸಿ ।
ಸ್ವಾನುಭವದಿ ಕೂಡಿಸು ಸಂಪತಿ ।
ನೀನೇ ರಕ್ಷಿಸು ಸದ್ಗುರು ಮಹಿಪತಿ ೫

## ೩

ಉದಯದಲೆದ್ದು ಶ್ರೀಹರಿಯ ನಾಮಂಗಳನು ।
ವದನದಿಂದುಚ್ಚರಿಸಿ ಪಾಡುವ ನರರು ದುರಿ ।
ತದ ಘಸಣಿಗಳ ನೀಗಿ ಪಡಕೊಂಬರತಿ
ಮುದದಿಸದಮಲಾನಂದ ಸುಖವ ಪ

ಕೃಷ್ಣ ಕಮಲೇಶ ಕಂಜಾಕ್ಷ ಕರುಣಾಬ್ಧಿ ಶ್ರೀ ।
ವಿಷ್ಣು ವಿರಂಚಿಪಿತ ವಿಮಲ ವಿಶ್ವೇಶ ಭ್ರಾ ।
ಜಿಷ್ಣು ಜಗಪಾಲ ಜಗಜೀವನ ಜನಾರ್ಧನ,
ತುಷ್ಣಿಕರ ಕೋಟಿತೇಜಾ ॥
ವೃಷ್ಣಿ ಕುಲತಿಲಕ ವೃಂದಾವನ ವಿಹಾರಿ ಗೃಹ ।

ಜಿಷ್ಣು ಸುರಸೇವೆ ಸಜ್ಜನ ಪ್ರಿಯ ಸರ್ವೇಶನ ।
ಜಿಷ್ಣು ಸುತ ಸೂತ ಸಂಕರುಷಣ ಪ್ರದ್ಯುಮ್ನ ವೈಷ್ಣವ
ಅಭಿಮಾನಿ ಎಂದು                                                    ೧

ಪರಮ ಪುರುಷೋತ್ತಮ ಪರಂಧಾಮ ಪರಬ್ರಹ್ಮ ।
ಪರಮಾತ್ಮ ಪರಂಜ್ಯೋತಿ ಪರತರಾನಂದ ಗುಣ ಪರಿಪೂರ್ಣ ।
ಪರಮೇಷ್ಠಿ ಪದದಾತ ಫಣಿಶಯನ ಪರಶುಧರ ಪದ್ಮನಾಭ ।
ಮುರಮಥನ ಮದನಮೋಹನ ಮುರಲಿಲೋಲ ಮಧು ।
ಹರಹಲಾಯುಧ ಹಯವದನ ಸ್ಮರಹರಾರ್ಚಿತ ।
ಚರಣ ಸಚರಾಚರ ವ್ಯಾಪ್ತ ಚಿದ್ಘನರೂಪ ಚಾರುಚರಿತ
ಚಲರದಹಿತನೆಂದು                                                    ೨

ಕಾಮಜಿತರೂಪ ಕೌಸ್ತುಭಧಾರಿ ತ್ರಿ ।
ಧಾಮ ತ್ರಿವಿಕ್ರಮ ತ್ರಿಕಾಲಜ್ಞ ತ್ರಿಜಗನುತ ।
ಶ್ರೀ ಮಚ್ಛಕೂರ್ಮ ವರಹನರಹರೇ ವಾಮನ ಕ್ಷೇತ್ರ ಹರಣ ॥
ರಾಮರಾಘವ ರಾವಣಾರಿ ರಾಜೇಂದ್ರ ಶುಭ ।
ನಾಮ ನಾರದ ಪ್ರಿಯ ನಾರಾಯಣ ಜನಕ ।
ಜಾಮನೋಹರ ಜಾನ್ಹವೀಜನಕ ಶಬರಿಮನ
ಕಾಮಪೂರಿತನೆಂದ                                                    ೩

ಅಜನಯ್ಯ ಅಚ್ಯುತಾನಂತ ಅನಿರುದ್ಧ ಧೋ
ಕ್ಷಜಾಕ್ಷರತೀತಕ್ಷಯ ಗದಾಂ ।
ಬುಜಪಾಣಿ ಬೌದ್ಧ್ಯ ಕಲ್ಕಿ ಬಲಿವರದ ಪವನಜ
ಪ್ರಿಯ ನರಕಾಂತಕಾ ।
ಗಜಗತಿಪ್ರದ ಗರುಡಗಮನ ಗೋವಿಂದ ಗೊ ।
ವ್ರಜಪಾಲ ವನಮಾಲಿ ವಸುದೇವಸುತ ಶಾರಂಗಿ ।
ಕುಜಹರ ಕಿರೀಟಧರ ಜಂಭಾರಿಧೃತ ಚತುರ್ಭುಜ ಭುವನ
ಭರಿತನೆಂದು                                                    ೪

ಶ್ರೀರಂಗ ಮುನಿಸಂಗ ಸುರತುಂಗ ಗೋಪಾಂಗ ।
ನಾರಿಮಣಿ ನೀಲಾಂಗ ಕಾಳಿಂಗ ಮದಭಂಗ ।
ಧೀರಯದುವೀರ ಗಂಭೀರ ಉದಾರ ಸುಕುಮಾರ
ಸಹಕಾರನೆಂದು ।
ನೂರೆಂಟು ನಾಮಾವಳಿಯ ರತ್ನಮಾಲಿಕೆಯ ।
ನಾರುಧರಿಸುವರವರ ಇಷ್ಟಾರ್ಥಗಳ ಕೊಟ್ಟು ।
ಕಾರುಣ್ಯದಲಿ ಹೊರೆವ ಗುರುಮಹೀಪತಿಗೆ
ಸಹಕಾರ ನಿಜಪದವಿತ್ತು ೫

೪

ಏಳುತಲಿ ಎದ್ದು ಎಚ್ಚರಿಸುತ ನೀ ನೆನೆಯೊ ।
ಪಾಲಿಸುವ ಮೂಲೋಕ ಪರಮಾತ್ಮನಾ ಪ

ಮೂರೊಂದು ಪದರದ ಚೀಲದೊಳು ಥಳಥಳಸಿ
ದೋರುತಿಹ ರತ್ನ ಪರಿಚಿದ್ರೂಪನಾ ।
ಅರಿಗಳ ವಡೆದ ಘನ ತ್ರಿವೇಣಿ ತೀರದಲಿಹ ।
ಧೀರಯೋಗಿಯ ಕಂಗಳಾನಂದನ ೧

ಬೇರು ಮೇಲಾಗಿ ಕೊಂಬುಗಳು ಕೆಳಗಾದ ಸಂ ।
ಸಾರ ವೃಕ್ಷವ ತ್ರಿಗುಣಮಯದಿಂದಲಿ ॥
ವಾರಿಜಭವಾಂಡ ಪಿಂಡಾಂಡಗಳ ಪರಿಪರಿಯ ।
ತೋರಿ ತೋರದಲಿಪ್ಪ ನಿರ್ಲಿಪ್ತನಾ ೨

ನೋಡಿಸುವ ಕೇಳಿಸುವ ವಾಸಿಸುವ ಪರಿಮಳವ ।
ಆಡಿಸುವ ಕರಚರಣ ನುಡಿನುಡಿಸುವ ।
ರೂಢಿಯೊಳು ಸೂತ್ರಧಾರಕನಾಗಿ ಅಷ್ಟದಳದ ।
ಲಾಡುತಿಹ ಮಹೀಪತಿ ಸುತಪ್ರಭು ಭಕುತಿಯಲಿ ೩

೫

ಶ್ರೀ ರಮಣಿಯರಸ ಕಂ ಜೋದ್ಭವಾರ್ಚಿತ ಪುಣ್ಯ ।
ಚಾರುತರ ಯುಗ್ಮಪದ ರಂಜನಾಸುರ ಸಂ ।
ಹಾರ ಸುರ ಜನ ಪಾಲ ಪರಮಾನಂದ ಸಾ ।
ಕಾರನಲಿದುಪ್ಪವಡಿಸಾ ಹರಿಯೇ ಪ

ಹರಿವೇಗ ಮಂಮೀರ್ವ ಹರಿಗಳೇಳಂಗಳದಲಿ ।
ಹರಿಯಾಗ್ರಜನನಿಂದ ಹರಿಪದದೊಳಗ ಜವದಿ
ಹರಿವುತಿಹ ಝಗ ಝಗಿಪ ಹರಿಮಯದ ರಥದೊಳಗ ।
ಹರುಷಾದೊಳಡರ್ದು ಬಳಿಕಾ ॥
ಹರಿದಿಕ್ಕಿ ಲಿಂದೊಗೆದು ಹರಿಜಗಳ ವಿಸ್ತರಿಸಿ ।
ಹರಿಯುಮೊದಲಾದವರ ಹರಿಸಿ ತೇಜವ ಜಗಕ ।
ಹರಿಸ ಕತ್ತಲೆಯ ಪರಿ ಹರಿಸಿ ಉದಿಸಿದಹರಿಯು ನರಹರಿಯೆ
ಉಪ್ಪವಡಿಸಾಹರಿಯೇ ೧

ನಿಜಸು ಪ್ರಲ್ಹಾದ ಪವನಜ ಫಣಿಪ ಖಗರಾಜ ।
ಭಜಿಪಧ್ರುವದ ಶಶಿರಾನುಜ ಭಿಷ್ಮಾ ತನ್ನ ಆ ।
ತ್ಮ ಜರಿತ್ತ ರಿಕ್ಷಪತಿ ರಜನೀಶ ವಾನ್ನರ ।
ಧ್ವಜ ವಿಧುರ ಅಂಬರೀಷಾ ॥
ದ್ವಿಜ ಪುಂಡಲೀಕ ಪದ್ಮಜ ಮುಖ್ಯರಾದ ನಾ ।
ಕಜರು ಶುಕ ಉದ್ಧವ ಬಲಿ ಜಯ ವಿಜಯರ ಕೂಡಿ ।
ಸುಜನರ್ರೈ ತಂದ । ರಂಬುಜ ಪದಕ ನಮಿಸೆ ವಾ ।
ರಿಜನಾಭ ಉಪ್ಪವಡಿಸಾ ಹರಿಯೇ ೨

ಪಾಕ ಶಾಸನ ಅಗ್ನಿ ಆಕಾಳ ನೈಋತಿರ ।
ತ್ನಾಕರ ಪ್ರಭಂಜನಪಿ ನಾಕಿವರ ಕೌಬೇರ ।
ನಾಕೆರಡು ದಿಕ್ಕಿನವರೇಕೋ ಭಾವದಲಿಂದ
ಅಕೇ ವಾಳದ ಸಂಗದಿ ।

ನಾಕ ಪುರಗಜ ಅಜಮಹಾ ಕೋಣ ಮನುಜ ಮಕ ।
ಹಾಕುರಂಗಂದಣವು ಗೋಕುಲೇಂದ್ರನು ಇಂತು ।
ಬೇಕಾದ ವಾಹನ ವಿವೇಕದೇರಿ ಬಂದಿದೆ ।
ಲೋಕೇಶ ಉಪ್ಪವಡಿಸಾ ಹರಿಯೇ ೩

ಶ್ರೇಷ್ಠ ಕಶ್ಯಪ ಋಷಿ ವಶಿಷ್ಠ ಗಾರ್ಗೇಯ ತಪೋ ।
ನಿಷ್ಠ ವಿಶ್ವಾಮಿತ್ರ ಸೃಷ್ಠಿಯೊಳ ಜಲದ ಸಂ ।
ದಷ್ಟ ವರುಣನ ಗರ್ವ ಭಷ್ಟ ಮಾಡಿದಗಸ್ತಿ ।
ಶಿಷ್ಟ ಭಾರದ್ವಾಜನು ॥
ಅಷ್ಟಾದಶ ಧ್ವಯ ಬಾರಿ ಸೃಷ್ಟಿರ ಚನೆಯ ಕಂಡ ।
ತುಷ್ಟ ಬಕದಾಲ್ಭ್ಯ ಉತ್ಕೃಷ್ಟ ಸನಕಾದಿಗಳು ।
ದೃಷಮಾನಿಸರಾಗಿ ಮುಟ್ಟಿಸ್ತುತಿ ಸುತಲಿದೇ ।
ಕೃಷ್ಣ ನೊಲಿ ದುಪ್ಪವಡಿಸಾ ಹರಿಯೇ ೪

ವರ ವಾಮ ದೇವಾತ್ರಿ ಪರಮಗಾಲ ವನುಸೌ ।
ಭರಿಯ ಕೌಡಿಣ್ಯಾ ಸುಖ ಭರಿತ ಕೌಸಿರ ಮತಿ ।
ಪರಿಪೂರ್ಣ ಜಯಾಮುನೀರ್ವರು ಭರತರುಸುಗುಣ
ಶರಧಿ ವೈಶಂ ಪಾಯನಾ॥
ಸುರಪುರೋಹಿತ ಮಹಾ ಸುರರ ವಂಶಾವಳಿಯು ।
ಗುರುಭದ್ರ ಪೆಸರಿನಾ ತರಣಿಜ ಬುಧಾದಿಗಳ ।
ಕರದೊಳು ಸುಫಲವಿರಿಸಿ ಹರುಷಾದಲಿ ನಿಂದಿದೆ ॥
ಪರಬೊಮ್ಮ ಉಪ್ಪ ವಡಿಸಾ ಹರಿಯೇ ೫

ಡಮರುಧರ ಜಡೆಯೊಳಗ ಸಮುಲ್ಲಾಸದಲಿ ಮೆರೆವ
ಅಮರ ನದಿ ಪಾಪಹರ ಸಮಕೃಷ್ಣ ವೇಣಿ ಸು ।
ವಿಮಲ ಗೋದಾವರಿ ಕುಮುದ್ವತಿ ಕಾವೇರಿ ।
ಶ್ರಮಹಾರಿ ತುಂಗ ಭದ್ರಿ ॥
ಯಮುನಿ ಫಲ್ಗುಣಿ ಮಹೋತ್ತಮ ಸರಸ್ವತಿ–ಕಪಿಲ ।
ನರ್ಮದಿ ಮೊಲಾಗಿ ಅಮಲಗ್ರೋದ ಕವ ।

ಕ್ರಮದಿಂ ಕೊಂಡು ನದಿ ಚಮು ಬಂದಿದೇ ಪೊರಗ ।
ಕಮಲಾಕ್ಷ ಉಪ್ಪವಡಿಸಾ ಹರಿಯೇ ೬

ದಾರುಣೀ ಚರರಾದಾ ಚಾರುಗೋ ಬ್ರಾಹ್ಮಣರು ।
ಸಂರಕ್ಷಣೆಯ ಮಾಳ್ಪ ಧೀರಯ ಯಾತಿ ।
ಮೇರು ಸಮ ಹರಿಶ್ಚಂದ್ರ ವೈರಾಟ ಪತಿಜನಕ ।
ಆರಾಯ ನಳ ನಹುಷನು ॥
ಶೂರ ಹಂಸಧ್ವಜನು ಸಾರಿ ವಿಷ್ವಕ್ಸೇನ ।
ವೀರ ಪಾಂಚಾಲನ – ಕ್ರೂರ ಚಂದ್ರಹಾಸ ಮ ।
ಯೂರ ಧ್ವಜ ಪ್ರಮುಖರಾರತದಿ ಬಂದರಿದೆ ।
ಕಾರುಣನೆ ಉಪ್ಪಾವಡಿಸಾ ಹರಿಯೇ ೭

ವಾರಿಯೋಳ್ ನಡೆವಹತೇರಗಜ ಶೃಂಗರಿಸಿ ।
ಏರಿಬಂದಿಳಿದು ಮಹಾ ವೀರ ಭಟರೋಗ್ಗೀನೊಳು ।
ಬಾರಿ ಬಾರಿಗೆ ನಿಮ್ಮ ಚೀರುತ ಬಿರುದಂಗಳನು
ಭೂರಿಜನ ಸಚಿದಣಿಸುತಾ ॥
ಪಾರವಿಲ್ಲದ ಪಟಹ ಭೇರಿ ನಿಸ್ಸಾಳತಹ ।
ಳಾರವರಿದು ಊದುತಲಿ ಈ ರೀತಿ ನೃಪರದಳ ।
ಚಾರುವಾಲಗವ ಮನವಾರಗುಡುತಿದೆ ಪರಮ
ಶೌರಿ ವಲಿದು ಪ್ಪವಡಿಸಾಹರಿಯೇ ೮

ಕೇಣವನು ಗೊಳ್ಳದಿಹ ಜಾಣ ಕಲೆಯಿಂದ ಗೀ ।
ರ್ವಾಣ ಸ್ತ್ರೀಯರು ನೃತ್ಯ ಮಾಣುತಲಿ ಬರೆಕರದಿ ।
ವೀಣೆಯನು ತಾಂ ಪಿಡಿದು ವಾಣಿ ತುಂಬರ ಸುಪ್ರ
ವೀಣನಾರದ ಗಣಪನು ॥
ಶ್ರೇಣಿಯಿಂ ತೊಡಗೂಡಿ ತ್ರಾಣದಿಂದಲಿ ನಾಮ ।
ವಾಣಿಯಲಿ ವಚಿಸುತಿದೆ ಕಾಣಲ್ಕೆ ನಿಂದಿದೆ ।
ಏಣಾಂಕನುಜೆ ಮುಗಿದು ಪಾಣಿಯನು ಗುರು ಮಹಿಪತಿ
ಪ್ರಾಣನೊಲಿದುಪ್ಪವಡಿ ಸಾ ಹರಿಯೇ ೯

೬

ಗೋಪಾಲ ಬಾಲಾ ಏಳು ಏಳೈಯ್ಯಾ ।
ಶ್ರೀಪತಿ ಪರಮಾನಂದ ಸಜ್ಜನರಿಗೆ ಕೊಡುವೆಸ್ವಹಿತಾಶ್ರಯಾ ಪ

ಕಮಲಜ ಮುಖ್ಯ ಸಕಲ ಸುರ ಮುನಿಗಳು ।
ನಾಮವೇದೋಕ್ತದಲಿ ।
ವಿಮಲತರದಿ ಸ್ತುತಿಗೈಯ್ಯುತಲಿದೇ । ಕರಮುಗಿದು ಆನಂದದಲಿ ೧

ವೀಣೆಯ ಪಿಡಿದತಿ ಝೇಂಝೇಂಕರಿಸುತ ।
ಸಂಗದಿ ತುಂಬುರ ನಾ ।
ಜಾಣತನಗಳಿಂದ ಪಾಡುತಲಿದಕೋ । ಅಣುಗನು ಪದ್ಮಜನಾ ೨

ನಿನ್ನ ಪದವ ನೋಡುವೆನೆಂದು ಬರದಲಿ ।
ರವಿಯನುದಯಿಸಿದಾ ॥
ಸನ್ನುತ ಮಹಿಪತಿ ನಂದನ ಜೀವನ । ನೋಡು
ನೋಟದಿದಯದಾ ೩

೭

ಏಳಯ್ಯಾ ಏಳು ಕಂದಾ । ಏಳು ಪರಮಾನಂದಾ ।
ಏಳು ಈರೇಳು ಜಗದೊಡೆಯ ಶ್ರೀಮುಕುಂದಾ ಪ

ಮೊರೆವದೊಂದೇಗಾಲಿ । ಪರಿವಹರಿವೇಗಮಂ ।
ಜರಿದು ಯೇಳು ಕುದುರೆಂಗಳದರಾ ।
ಪೋರವರುಣನಿಂದ ಭೋರ್ಗರೆವ ಸ್ಯಂದನದೊಳಗ ।
ಮೆರೆವ ದಿನಕರ ಉದಯವಾದ ಪೂರ್ವಾದ್ರಿಯಲಿ ೧

ಬಿರಿಯೆ ಕಮಲದ ಮೋಗ್ಗೆ ಕರಿಯೆ ಗೋವತ್ಸಗಳು ।
ಪರಿಯೆ ನಕ್ಷತ್ರಗಳು ಗಗನದೊಳಗ ॥
ಸರಿಯೆ ಚೋರ್ವಿರಹಿಗಳು ವರಿಯದಂತಾಲಯಕೆ ।
ದೆರಿಯ ಕಣ್ಣೆವಿಯಗಳು ನಿದ್ರೆಗೈದಿದ ಜನರು        ೨

ಓಡುತಿದೆ ಕತ್ತಲೆಯು ಬಾಡುತಿದೆ ಕುಮುದ ಮುಖ ।
ಕೂಡುತಿವೆ ಚಕ್ರವಾಕಂಗಳೀಗ ।
ಆಡುತೆಳೆದುಂಬಿ ಚಲ್ಯಾಡುತಿದೆ ಮಧುರನವ ।
ಪಾಡುತಿದೆ ಮಹೀಪತಿ ಸುತನಾಮ ಕೀರ್ತಿಯನು        ೩

## ೮

ಏಳೈಯ್ಯಾ ಆತ್ಮರಾಮಾ । ಯತಿ ಮುನಿಜನ ಪ್ರೇಮಾ ।
ಏಳೆಯ್ಯ ಘನಶಾಮಾ । ಎನ್ನಪಾಲಿಸೈ ಗುಣಧಾಮಾ        ಪ

ಗುರು ಕರುಣೋದಯದಲ್ಲಿ ಬೋಧ ಸುರ್ಯನು ಬರಲಿ ।
ಮರವಿನ ಕತ್ತಲೆ ತೆರಳಿ । ಬೆಳಗಾಯಿತು ಮನದಲ್ಲಿ        ೧

ವಾದತಾರೆಗಳಡಗಿ । ವಿಕಸಿತ ಹೃತ್ಕಮಲಾಗಿ ।
ಸಾಧನ ಪಕ್ಷಿಗಳೊದಗಿ । ಕಲಕಲಿಸುತಿವೇ ಬಹುವಾಗಿ        ೨

ವಿವೇಕಾದ ಭರತಾ ॥ ವೈರಾಗ್ಯ ಶತೃಘ್ನ ತಾ ।
ಸಾವಧ ಲಕ್ಷ್ಮಣ ನಿರುತಾ ಪದಸೇವೆಗೆ ನಿಂತರು ತ್ವರಿತಾ        ೩

ಶಮದಮವೇ ನಿಸ್ಸೀಮಾ । ವಿಭೀಷಣ ಸುಗ್ರೀವ ನೇಮಾ ।
ಸುಮತಿ ಶೃದ್ಧಾಪರಮಾ । ಇದೋ ಬಂದರು
ಜಾಂಬವ ಹನುಮಾ        ೪

ಶಾಂತಿ ಸೀತೆಯು ವಲಿದು ನಿಂತಿಹಳ್ಳೆ ಕೈಮುಗಿದು ।
ಚಿಂತಿತಾರ್ಥವನೇ ಕೊಡು । ಮಹಿಪತಿ ಸುತಗೊಲಿದು        ೫

೬

ಏನೆಂದು ಬಣ್ಣಿಸುವೆನೊ ನಾನು ।
ಶ್ರೀನಾಥ ಪ್ರಿಯಳಾದ ಶ್ರೀ ತುಳಸಿ ಮಹಿಮೆಯನು ಪ

ಜಲದಿ ಮಥನದಿ ಅಮೃತ ಕಲಶ ಬರೆಕಂಡು ಅತಿ ।
ಜಲಜಾಂಬಕನ ಪ್ರೇಮಾಂಜಲ ಉದರಲು ।
ಇಳಯೊಳದಿರಿಂದುದಿಸಿ ಬೆಳೆದು ನಿಂದಿರೆ ನೋಡಿ ।
ಒಲಿದು ಕೋಮಲ ಮುಗುಳು ತಳೆದ ಶ್ರೀಹರಿ ತಾನು ೧

ಹರಿಯು ಧರಿಸಿದ ಕಂಡು ಸುರರೆಲ್ಲ ವಂದಿಸುತ ।
ಶಿರದಲಾಂತರು ಪರಮ ಹರುಷದಿಂದ ।
ಸಿರಿಸರಸ್ವತಿ ಗಿರಜೆ ನಿರುತ ನಿನ್ನಯ ವ್ರತದಿ ।
ಧರೆಯೊಳಗೆ ತಮ್ಮ ತಮ್ಮ ಅರಸರೊಲಿಸಿದರೆಂದು ೨

ನೋಡಿದರೆ ದುರಿತ ಕುಲ ಓಡುವವು ತನುವ ನೀ
ಡಾಡಿ ಜಲನೀಡಿ ಕೊಂಡಾಡಿ ನಿಂದು ।
ಕೂಡೆ ಮೃತ್ತಿಕೆ ಫಣೆಗೆ ತೀಡಿದರೆ ಭಕುತಿಯಲಿ ।
ಬೇಡಿದಿಷ್ಟಾರ್ಥ ಕೈಗೂಡಬಹುದಿಳೆಯೊಳಗೆ ೩

ತುಲಸಿ ಭಕುತಿಲ್ಲದವ ಕಲಿವಂಶದನುಜನವ ।
ತುಲಸಿ ಧರಿಸಿದ ತನುವು ಸಲೆಮುಕ್ತಿ ಮಂಟಪವು ।
ತುಲಸಿ ಬೆಳೆಹದಿ ಮನೆಯು ಬಲಿದ ಪುಣ್ಯದ ಖಣಿಯು ।
ತುಲಸಿ ಇಲ್ಲದ ಗೇಹ ಕಲುಷಾಲಯ ೪

ಮೂಲದಲಿ ಬ್ರಹ್ಮ ತಾ ನೀಲಕಂಠನು ನಡುವೆ ।
ಮೇಲುತುದಿಯಲಿ ವಿಷ್ಣು ಲೋಲಾಡುವಾ ।
ಸಾಲಕೊಂಬೆಗಳಲಿ ವಿಶಾಲದೇವತೆಗಳಿಹರು ।
ತಾಳಿ ಪ್ರೇಮವನು ಮಹೀಪತಿ ನಂದನಾಜ್ಞೆಯಲಿ ೫

## ೧೦

ಜಯಕೃಷ್ಣವೇಣಿ । ಜಗಪಾವನೀ ।
ಜಯಕರುಣಿ ಭಯಹರಿಣಿ ಭವತಾರಿಣಿ ಪ

ಮಾಬಳೇಶ್ವರನ ಸುಜಟಾ ಭಾಗದಲಿ ಪದ್ಮ ।
ನಾಭನಂಶದಿ ಬಂದು ಶೋಭಿಸುತಲಿ ।
ಈ ಭುವನಜನರ ಮನದಾಭೀಷ್ಟಮಂ ಕೊಡಲು ।
ತಾ ಭರದಿ ನದಿರೂಪನಾಗಿ ಪ್ರವಹಿಸಿದೆ ೧

ನಿನ್ನೆಡೆಗೆ ನಡೆತಂದು ನಿನ್ನ ಜಲ ವೀಕ್ಷಿಸುತ ।
ನಿನ್ನ ಘೋಷವ ಕೇಳಿ ತನ್ನ ಕರದಿ ।
ನಿನ್ನ ಸ್ಪರ್ಶನ ಅಚಮನ ಮಾರ್ಜನದಿಂದ ।
ತನುಮನೇಂದ್ರಿಯಗಳು ಪಾವನವಾದವು ೨

ಪೊಡವಿಯೊಳಧಿಕ ತೀರ್ಥ ತಡಿಯಗ್ರಾಮವೇ ಕ್ಷೇತ್ರ ।
ಬಿಡದೇ ಭಜಿಸುವ ನರರು ದೃಢದ ಸುರರು ।
ಒಡಲೊಳಿಹ ಜಲಚರಗಳೊಡನೆ ಗತಿಸಾಧಕರು ।
ನುಡಿವ ಪಕ್ಷಿಗಳು ಸಲೆ ಗಿಡಮರಗಳು ೩

ಸಾಗಿಸುವ ಕರ್ಮೇ೯ದ್ರಿ ತ್ಯಾಸದ್ಧರ್ಮದಿಂ ।
ಯೋಗ ಅಷ್ಟಾಂಗದಿಂ ಯಾಗದಿಂದ ।
ಭೋಗಿಸುವ ಪುಣ್ಯವನು ರಾಗದಿಂ ತೀರದಿಹ ।
ಯೋಗಿಜನಕೀವೆ ತಾನೀಗ ದಯದಿ ೪

ಬಿಂದುಮಾತ್ರವೇ ಬೀಳಲೊಂದು ಕಾಯದಿ ಅಘದ ।
ವೃಂದ ನಾಶನವಹುದು ಮಿಂದಡವನ ।
ಛಂದಮಂ ಬಣ್ಣಿಸುವದಿಂದು ತಿಳಿಯದು ಎನುತ ।
ತಂದೆ ಮಹೀಪತಿ ಜ ಕರದ್ವಂದ್ವ ಮುಗಿಯೇ ೫

## ೧೧

ಶರಣು ಕೃಷ್ಣವೇಣಿ ಶರಣು ಮಣ್ಯಾಭರಣಿ
ಶರಣು ಇಹಪರದಾಯಿನೀ ಪ

ಸರ್ವವ್ಯಾಪಕನಿರಂಜನನೆನಿಪ ಶ್ರೀವಿಷ್ಣು
ಉರ್ವಿಯೊಳು ದ್ರವರೂಪದೀ
ಹರ್ವಿತಿಹಸಂದೇಹವಿಲ್ಲದಕೆ ಭಕುತಿಯಲಿ
ಅರ್ವವನೆ ಗತಿಯ ಪಡದಾ ಮುದದಿ ೧

ಅಚ್ಯುತನು ಕೃಷ್ಣನದಿ ಹರಿವುತಿಹನೆಂದು
ಮೆಚ್ಚಿವೇಣಿಯ ನಾಮದಿ
ನಿಚ್ಚ ಸತ್ಸಂಗವೆಂದರಿತು ಕೂಡಿದ ಶಿವನು
ಸಚ್ಚರಿತನಾಮಮಹಿಮಾನೇಮಾ ೨

ನಿನ್ನ ಪೂರೆಲುದಿತ ಪವನದಿ ದುರಿತವೋಡಿದವು
ಇನ್ನು ಮಿಂದವನ ಗತಿಯಾ
ಬಣ್ಣಿಸುವ ನಾವನೆಲೆ ಜನನೀತಾರಿಸುಯನ್ನ
ಮನ್ನಿಸು ಗುರುವಿನಾಸುತನಾ ೩

## ೧೨

ಜಯ ಭಾಗೀರಥಿದೇವಿ ಜಯ ಜಾನ್ಹವಿ ।
ಭವ ಭಯನಿವಾರಿಣಿ ಸುಖಕಾರಣಿ ಪ

ಪಟು ತ್ರಿವಿಕ್ರಮನ ಉಂಗುಟ ಸೋಂಕಲಾರ್ಭಟದಿ ।
ಸ್ಫುಟಿತ ಬ್ರಹ್ಮಾಂಡ ನಿಜಕಟಹದಲ್ಲುದಿಸಿ ।
ನೆಟನೆ ಪದುಮಜಪಾತ್ರ ತಟಕೈದು ತೀರ್ಥನಿಸಿ ।
ನಿಟಲಲೋಚನ ನಘನಜಟೆಗೆ ಬಂದು ೧

ಕೆಲವು ಕಾಲಕೆ ಹಿಮಾಚಲದಿಂದ ಭಗೀರಥಗೆ ।
ಒಲಿದು ಕಾಶೀ ಪ್ರಯಾಗದಲಿ ಬಂದು ।
ಸಲೆಜಗವ ತಾರಿಸುತಲಿ ಮುಖ ಸಹಸ್ರದಿಂ ।
ಜಲಧಿಯನೆ ಕೂಡಿ ಫಣಿ ನಿಲಯಕಿಳಿದೇ ೨

ಸ್ಮರಣೆಯಿಂದಘಹರಿಪೆ ದರುಶನದಿ ಗತಿಯೀವೆ ।
ನೆರೆ ಸ್ನಾನದಾ ಫಲವನರಿವರಾರು ।
ಗುರುಮಹೀಪತಿಜನುದ್ಧರಿಸು ಕರುಣದಲಿ ।
ಸಾಗರಪ್ರೀತೆ ಖ್ಯಾತೆ ಲೋಕಮಾತೆ ೩

## ೧೩

ಜಯದೇವಿ ಜಯದೇವಿ ಜಯ ಪಾವನಗಂಗೇ ।
ಜಯಜಯ ತ್ರಿಪಥಗಾಮಿನಿ ಜಯ ತುಂಗತರಂಗೇ ಪ

ಆದಿಲಿ ಶ್ರೀಹರಿ ಕೋಮಲ ಪದನಖದಿಂದೊಗದು ।
ಸಾಧಿನಿ ವಾರಿಜಭವನಾ ಕರಪಾತ್ರಕೆ ಬಂದು ।
ಸಾದರದಿಂದಾಶಿವನ ಕೆಂಜೆಡೆಯೊಳು ನಿಂದು ।
ಮೇದಿನಿಗಿಳಿದು ನೀಬಂದೆ ಭಗೀರಥನೃಪಗೊಲಿದು ೧

ಕಾಶಿಪ್ರಯಾಗದಿ ನಿಂದು ಉದ್ಧರಿಸುತ ಕೆಲರಾ ।
ಆಶೆಯ ಪೂರಿಸಲಾಗಿ ದಕ್ಷಿಣ ದಿಶೆದವರಾ ।
ರಾಶಿಯ ಕನ್ಯಾ ಮೆಟ್ಟಲು ಸುರಗುರು ಗಂಭೀರಾ ।
ಭಾಶಿಶಿ ತೋರಿದೆ ಬಂದು ಕೃಷ್ಣವೇಣಿಲಿ ಸದರಾ ೨

ಹರಿಹರ ದೇವರು ದ್ರವರೂಪದಿ ಹರಿವುತಲೀ ।
ನೆರೆನೀಕೂಡಿದ ಸಂಭ್ರಮ ಏನೆಂದುಸುರಲಿ ।
ದರುಶನ ಮಾತ್ರದಲಾದೆನು ಮುಕ್ತನು ಭವದಲಿ ।
ಗುರು ಮಹೀಪತಿಸುತ ಎನ್ನನು ರಕ್ಷಿಸು ಕರುಣದಲಿ । ೩

## ೧೪

ಬೆಳಗಾಯಿ ತೇಳಿರಯ್ಯಾ ಪ

ಬೆಳಗಾಯಿತೇಳೀ ರೈ ಇಳೆಯೊಳಭಿನವಮುನಿ ।
ತಿಲಕ ಕರ ಪುಷ್ಕರದ ನೆಲೆಯ ಲೊಗದು ।
ಬಲಿದ ವೈರಾಗ್ಯ ವೈರಾಗ್ಯ ಮುಂಬೆಳಗ ಸುಖ ತಂಗಾಳಿ ।
ತಳಿಯೆ ಸತ್ಪ ಪೂರ್ಣರೆಂಬ ಹೊಳೆವ
ರವಿ ಉದಯಿಸಿದ ೧

ಮೊತ್ತವಾದ – ಜ್ಞಾನ ಕತ್ತಲೆಯನೊತ್ತಲು ।
ನ್ಮತ್ತದುರ್ವಾದಿ ನಕ್ಷತ್ರದೆಡೆಗೆ ।
ಮತ್ತ ಭವ ಚಂದ್ರ ಸರಿದತ್ತ ವೈಷ್ಣವರೆಂಬೊ । ಉತ್ತಮದ
ದ್ವಿಜ ರಿಂದ ಸುತ್ತುಗಟ್ಟಿ ಭಜಿಸುತಿದೆ ೨

ನೆರೆಭಾವ ಭಕುತಿ ರಥ ಚಕ್ರನೆರೆಯೆ ।
ದುರಿತೌಘ ಮಂಜು ಮುಸುಕು ದೆರಿಯೇ ।
ನೆರೆಯ ಭೂಸುರರರ್ಘ್ಯ ವೆರಿಯೆ ಸಂಚಿತ ಮೊದಲ ।
ದುರುಳರ ಕುಮುದಸೊಕ್ಕುಮುರಿಯೆ
ಹಂಸನು ಮೆರಿಯೆ ೩

ಸಾಲ ಸ–ಚ್ಛಾಸ್ತ್ರಾ ದೇಳಿಗೆಗೆವಿದ್ವಜ್ಜ ।
ನಾಳಿ ಝೇಂಕರಿಸುತಲಿ ಮ್ಯಾಲನಲಿಯಿ ।
ಮೂಲ ರಘು ಪತಿಯ ದೇವಾಲಯದ ವಾದ್ಯಗಳು ।
ಘೇಳೆನಿಪ ನಿಜ ವೇದ ಘೋಷ ಕೇಳ ಬರುತಿದೆ ಜನಕೆ ೪

ಘನ ಪುಣ್ಯ ಪೂರ್ವಾದ್ರಿ ಕೊನಿಗೆ ಅರುಣಾಂಬರದಿ ।
ವಿನುತ ಜ್ಞಾನದ ಕಿರಣವನೆ ಪಸರಿಸಿ ।
ಜನದ ವಿದ್ಯದ ನಿದ್ರೆಯನೇ – ಜಾರಿಸಿ ಹೋದ ।
ಮಹಿಪತಿ ನಂದನ ನುಭಿವದಿ ಕೀರ್ತಿ ಪಾಡಿದನು ೫

## ೧೫

ಚರಣವನೆನೆಮನವೆ । ನಂಬಿ ಚರಣವ ನೆನೆಮನವೆ ।
ಶ್ರೀರಾಮವೇದವ್ಯಾಸರ ಪಾದಕಮಲವ ।
ನಿರುತದಿ ಪೂಜಿಪಗುರು ಸತ್ಯಪೂರ್ಣರ ಪ

ಶ್ರೀ ಮಧ್ವಶಾಸ್ತ್ರದಾ । ಸರೋವರ । ಪ್ರೇಮದಿಹಂಸರಾ ।
ವ್ಯೋಮ ಕೇಶನಪ್ರಿಯನಾಮ ಮುಕ್ತಾಫಲ ।
ಪ್ರೇಮದಿಸೇವಿಪ ಕೋಮಲ ಕಾಯರ ೧

ಪೋಕದುರ್ವಾದಿಗಳಾ । ವದನಕೆ । ಹಾಕಿದ ಕೀಲಿಗಳಾ ।
ಬೇಕಾದ ಸಂಪದನೇಕವನುಣಿಸುವ ।
ಲೋಕಕೆ ಮಾನ್ಯಾಗಿ ಸಾಕುವರೊಡೆಯರ ೨

ಮುನಿ ಅಭಿನವತೀರ್ಥರ । ಶುಭಕರ । ವನಜದಿಜನಿಸಿದರಾ ।
ಘನಸತ್ಯ ವಿಜಯರ ಜನಕನು ತಾನಾಗಿ । ಅ
ವನಿಯೊಳು ಮಹೀಪತಿಜನ ಸಲಹುವರಾ ೩

## ೧೬

ಧನ್ಯನಾದೆನು ಗುರು ನಿಮ್ಮಯ ದಯದೀ ಪ

ಹಿಂಗಿತು ಮುನ್ನಿನಂಗವದೋಷವು
ಸಂಗಡಿಸಿತು ಪುಣ್ಯಗಳು ಜೀವಕ
ಮಂಗಲವಾಗಲು ಇಂಗಿತ ಸುಖದಾ ೧

ಸಾರಾಸಾರ ವಿಚಾರದ ತತ್ವದ
ದಾರಿಯ ಸುಜನಕ ದೋರುತ ಕರುಣದಿ
ಪ್ರೇರಿಸಿ ಸುಮತಿಯ ಶ್ರೀ ರಘುಪತಿ ಸಾ
ಕಾರವ ತೋರಿಸಿ ತಾರಿಸಲಾಗಿ ೨

ಕರುಣಿ ಅಭಿನವ ತೀರ್ಥ ಮುನಿಕರ
ವಾರಿಧಿ ಶ್ರೀ ಸತ್ಯ ಪೂರಣ ಚಂದ್ರರ
ಸಾರಲು ಹೋಯಿತು ಮೂರು ತಾಪಗಳು
ದೋರಲು ಕಂದಗ ಪಾರದ ಸುಖವು ೩

## ೧೭

ಗಜಾನನಾ ಗಜಾನನಾ ಸ್ವಾಮಿ ನಿನ್ನವನಾ
ಪಾರ್ವತಿ ನಂದನಪೂರ್ವ ಚರಿತ ಘನ
ನಿರ್ವಿಘ್ನ ದಾಯಕ ಗಜಾನನಾ

ಮೂಷಕವಾಹನ ದೋಷಕರಿಮುಕುಲ
ನಾಶಿಕ ವಿಗ್ರಹಗಜಾನನಾ

ಮದನಾರಿ ಮನೋಭವ ರದಸಾಮಲೇಕದಂತದಯ
ಸದನಾ ಲಂಬೊದರ ಗಜಾನನಾ

ಕರುಣಾಪೂರಿತ ಸರ್ವಾ ಭರಣಾ ಭೂಷಿತ ಭಯ
ಹರಣಾ ತ್ರಿ ಜಗನುತ ಗಜಾನನಾ

ಹೊಂದಿದ ಶರಣರಿಗೆಂದೆಂದು ವಿದ್ಯಗಳ
ತಂದಿದಿರಿಡುತಿಹ ಗಜಾನನಾ

ತಂದೆ ಮಹಿಪತಿ ನಂದನ ಸಾರಥಿ
ಇಂದೆನ್ನನುದ್ಧರಿಸು ಗಜಾನನಾ.

## ೧೮

ನಮೋ ನಮೋ ಗಣೇಶಾ ।
ನಮೋ ಸಂಕಟನಾಶಾ ।
ನಮೋ ದುರಿತವಿನಾಶಾ ಪ

ಸಿಂಧುರ ಚರ್ಚಿತ ಸಿಂಧುರ ವದನಾ ।
ಸುಂದರ ಗುಣಸದನಾ ಗಣೇಶಾ ೧

ತ್ರೀಶೂಲ ಅಂಕುಶ ಧೃತಕರ ಕರುಣಾ ।
ಕಿಸಲಯೋಪಮ ಚರಣಾ ಗಣೇಶಾ ೨

ಮಹಿಪತಿ ಸುತ ಪ್ರಭು ವಿಮಲೇಕದಂತಾ
ಇಹಪರ ಸುಖದಾತಾ ಗಣೇಶಾ । ೩

## ೧೯

ಶರಣು ಶ್ರೀ ಗಣನಾಥ ಮೂಷಿಕೇಂದ್ರ ವರೂಢ
ಶರಣು ವಿದ್ಯದ ಸತ್ರ ಲಂಬೋದರ ಶುಭಗಾತ್ರ
ಶರಣು ವರದೋರ್ದಂಡ ಶುಂಡ ಮಂಡಿತ ಗಂಡ
ಕುಂಡಲ ವಕ್ರತುಂಡಾ

ಶರಣೂ ಸುರನರಧೇಯ ಸಿದ್ಧೀಂದಿರಾ – ಪ್ರೀಯ
ಶರಣು ವಿಘ್ನವಿನಾಶ ಏಕದಂತ ಪ್ರಕಾಶ
ಶರಣು ಮಹಿಪತಿ ನಂದನಗ ನೀಡುವಾನಂದ
ಶರಣು ಪಾರ್ವತಿಯ ಕಂದಾ

## ೨೦

ಶರಣೆಂಭೆ ತನುಮನದಿಂದ ಗಣರಾಯಾ
ಕರುಣಿಸೆನಗ ನರಮೃಗ ಕಾಯಾ

ಸುರಾಸುರರ ಕೈಯ್ಯ ಸೇವೆ ಕೊಳುವ ಚರಣವನು
ಮೊರೆಯ ಹೊಕ್ಕೆನು ಕೇಳಿ ಕೀರುತಿಯಾ

ಕೊಂಡಾಡುವಂತೆ ಪದ ಪದ್ಯದಿ ನಿನ್ನ ಚರಿಯಾ
ಶುಂಡಾಲ ಶುಭ ಮುಖ ಕೊಡುಮತಿಯನಾ

ಎಂದೆಂದು ನೊಡಲು ಅಪರಾಧಿನಾ ಮೊದಲು
ಕುಂದನಾರಿ – ಸದೇ ನೋಡೆನ್ನ ಮ್ಯಾಲಿನ್ನಾ

ಅಗಜ ನಂದನ ಗುರು ಮಹೀಪತಿ ಸುತ ಸ್ವಾಮಿ
ಭಕುತ ರಕ್ಷಕ ಮುನಿಜನ ಪ್ರೇಮೀ

## ೨೧

ಮಂಗಳಾರತಿಯ ತಂದೆತ್ತಿರೇ ಜಯ –
ಮಂಗಳ ಮೂರ್ತಿ ಶ್ರೀಗಣರಾಯಗೆ ಪ

ಶರ್ವಾಣಿಸುತ ಚತುರ್ದಶ ವಿದ್ಯದಾಗರ ।
ಸರ್ವಗುಣಾಂಬುಧಿ ಗಜಮುಖಿಗೆ ।
ಊರ್ವಿಯೊಳಗೆ ತನ್ನ ಚರಣವ ನೆನೆವರ ।
ನಿರ್ವಿಘ್ನದಲಿ ಕಾವ ದಯಾನಿಧಿಗೆ ೧

ರನ್ನ ಮುಕುಟ ದಿವ್ಯ ಕುಂಡಲಧಾರಿಗೆ ।
ಪನ್ನಗ ಭೂಷಣ ಚತುರ್ಭುಜಗೆ ।
ಸನ್ನುತ ಪರಶಾಂಕುಶವನು ಪಿಡಿದಗೆ ।
ಉನ್ನತ ಮೂಷಕ ವಾಹನಗೆ ೨

ಸಮಚರಣಾಂಬುಜ ಸುರವರವಂದ್ಯಗೆ ।
ಕಮಲಸಕನ ತೇಜ ಗೆದ್ದವಗೆ ।
ವಿಮಲ ಮತಿಯ ನೀವ ಸಿದ್ಧಿಧೀರೇಶಗೆ ।
ನಮೋಎಂಬೆ ಮಹೀಪತಿ ಸುತಪ್ರಿಯಗೆ ೩

## ೨೨

ಕಾಳಿ ಭವಾನಿ ಶಿವೆ ಪಾಲಿಸೇ । ಪ

ಗೋತ್ರೋದ್ಭವೆಸಿತ ಗೋತ್ರ ಕೃತಾಲಯೆ ।
ಗೋತ್ರಸುರಾರ್ಚಿತೆ ಗೋತ್ರಾರಿಯನುತೆ ೧

ಭುವನೇಶ್ವರಿತ್ರೈ ಭುವನಾರ್ಚಿತಪದ ।
ಭುವನಜಯುಗ್ಮಳೆ ಭುವನಜ ಲೋಚನಳೇ ೨

ನಾಗಾಂಬರ ಪ್ರಿಯೆ ನಾಗ ಸುವೇಣಿಯೇ ।
ನಾಗತಿ ಬೇಡುವೆ ನಾ ಗಿರಿಜೇಶಳೆ ೩

## ೨೩

ಅಕ್ಕ ಕೇಳೆ ನಿನ್ನ ತಪಸಿಯರೊಳಗೊಬ್ಬ
ಮುಕ್ಕಣ್ಣಗೀವರಂತೆ ।
ಮೂರ್ಖನೋ ಗಿರಿರಾಜ ವಿಗಡ ಮುನಿಯ ಮಾತಾ
ಲೆಕ್ಕಿಸಿ ಮದುವೆಯ ಮಾಡಿಕೊಡುವನಂತೆ ೧

ತಲೆಯೆಲ್ಲಾಜಡೆಯಂತೆ । ಅದರೋಳಗ ಜಲವಂತೆ ।
ತಿಲಕ ಪಣೆಗೆ ಬಾಲಚಂದ್ರನಂತೆ ।
ಹೊಳೆವ ಕಿಡಿಗಣ್ಣಂತೆ । ನಂಜುಗೊರಳನಂತೆ ।
ಸಲೆರುಂಡ ಮಾಲೆಯಾ । ಸರವ ಹಾಕಿಹನಂತೆ । ೨

ಉರಗಾಭೂಷಣನಂತೆ । ಭಸ್ಮಲೇಪನನಂತೆ ।
ಕರಿಯ ಚರ್ಮಾರಂಬರದುಡಿಗೆಯಂತೆ ।
ತಿರಿದು ತಿಂಬುವನಂತೆ । ಬಿಳಿಯ ಮೈಯವನಂತೆ
ನಿರುತ ಡಮರು ಬಾರಿಸುವ ಜೋಗಿಯಂತೆ ೩

ಹಡೆದವಳಿಲ್ಲವಂತೆ । ಎತ್ತನೇರುವನಂತೆ
ಅಡವಿ ಗಿರಿಗಳಲಿ ಇಪ್ಪನಂತೆ ।
ಒಡನೆ ಪುಲಿದೊಗಲದ ಹಾಸಿಗೆ ಇಹುದಂತೆ ।
ನುಡಿಗೊಮ್ಮೆ ರಾಮ ರಾಮಾಯಂಬ ಸ್ಮರಣೆಯಂತೆ ೪

ಮಾರನಾ ರಿಪುವಂತೆ । ಐದು ಮೋರೆಗಳಂತೆ
ಆರೂ ಇಲ್ಲದ ಪರದೇಶಿಯಂತೆ ।
ಧಾರುಣಿಯೋಳು ಮಹಿಪತಿಸುತ ಪ್ರಭು ಭವ ।
ತಾರಕ ಶಿವನೆಂದು ಮೊರೆಯ ಹೊಗಬೇಕಂತೆ ೫

## ೨೪

ಜೋಗಿಯ ನೋಡಿರೇ ತಾಪಸ ಯೋಗಿಯ ನೋಡಿರೇ
ಆಗಮನುತ ಗುಣಸಾರಸ್ವಾನಂದಶರವಾ ಭುವನದಿಮೆರವಾ ಪ

ಸುರಮುನಿಪೂಜಿತ ಅಂಘ್ರಿಸರೋಜಯುಗಳವೋ
ಚಿತ್ಸುಕ ಸ್ಥಳವೋ
ಪುರಹರನುಟ್ಟಿಹ ಕರಿಚರ್ಮಾಂಬರ ನಿಲವೋ
ಯಮುನಾ ಜಲ ; ವೋ
ಗಿರಿಜೇಶನು ಧರಿಸಿಹ ರುಂಡಮಾಲಾಕೃತಿಯೋ ;
ವಿದ್ಯುಲ್ಲತಿಯೋ
ಹರಿನಂಗದಿ ಮಂಡಿತ ಫಣಿರತ್ನ ಭೂಷಣವೊ
ಭೂಷಣವೋ ; ತಾರಾಗಣವೋ ೧

ಶ್ರೀ ಮಹಾದೇವನ ನಂಜು ಗೊರಳತವತವಿಯೋ :
ಮೇಘ ಚ್ಛವಿಯೋ
ಹೈಮವತೀ ನಯನಾಂಬುಜ ತೋಷಿಪವದನೋ
ತರಣಿಯ ಸದನೋ
ಕಾಮಶಲಭನುಹಿದ ಭಾಲಾಕ್ಷದ ಇರವೋ; ದೀಪಾಂಕುರವೋ;
ವ್ಯೋಮನದಿಯ ಆವರಿಸಿಹ ಭವನ ಕಂಜೆಡಿಯೋ:
ಹವಳದ ಕುಡಿಯೋ ೨

ವಿರೂಪಾಕ್ಷನ ಕರ ಡಮರದ ನಾದಸ್ವರಣೋ :
ಘನವ್ಯಾಕರಣೋ:
ತರುಣೀಂದುಧರನ ಕಾಯವ ಕ್ರಾಂತಿ ಲಹರಿಯೋ;
ಕರ್ಪುರ ಗಿರಿಯೋ;
ಚರಣದ ಭಕ್ತರ ಭಾವನೆ ಪೂರಿಪ ಧೋರಿಯೋ;
ಸುರಕುಜ ಪರಿಯೋ:
ಗುರವರ ಮಹಿಪತಿ ನಂದನ ತಾರಕ ಶಿವನೋ:
ನಿಜ ಬಾಂಧವನೋ ೩

## ೨೫

ಇದೋ ಶಿವ ಬಂದಾ ವೇದಾಂತ ವೇದದಯೋದದಿ ಬಂದಾ ಪ

ಇಂದುಧರನು ಬಂದಾಕಂದುಗೋರಳ ಬಂದಾ
ನಂದಿವಾಹನ ಚಿದಾನಂದನು ಬಂದಾ ೧

ಶಂಭುಶಂಕರ ಬಂದಾ ಜಂಭಾರಿಸುತ ಬಂದಾ
ಅಂಬಿಕಾರಮಣ ತ್ರಯಂಬಕ ಬಂದಾ ೨

ಕಂತುಹರನು ಬಂದಾ ಅಂತರಾತ್ಮನು ಬಂದಾ
ಚಿಂತಿತಾರ್ಥೀವ ತ್ರಿಪುರಾಂತಕ ಬಂದಾ ೩

ಗಂಗಾಧರನು ಬಂದಾ ಮಂಗಳಾಂಗನು ಬಂದಾ
ಸಂಗ ರಹಿತ ಮಹಾಲಿಂಗನು ಬಂದಾ ೪

ಉರಗ ಭೂಷಣ ಬಂದಾ ಸುರರ ಪೋಷಣ ಬಂದಾ
ಗುರು ಮಹಿಪತಿ ಪ್ರಭು ಕರುಣದಿ ಬಂದಾ ೫

## ೨೬

ಇಂದು ಕಂಡೆನಾನು । ಶಂಕರನಾ ।
ನಿಂದಿಹ ಕೋಟೇಶ್ವರನಾ ಪ

ಅವದುಂಬರ ಮುನಿಯಾ । ತಾಪಕೊಲಿದು
ತಾವದಗಿದೇ ನಡೆತಂದು ೧

ಕೃಷ್ಣ ವೇಣಿಯಾ ಮಧ್ಯಾ ಜಲದೊಳಗ ।
ವಿಷ್ಣು ಸಹಿತ ಸಲುವನೀಗ ೨

ವರ ಶೂರ್ಪಾಲಯದೀ । ತಾಮೆರೆವಾ ।
ಗುರುಮಹಿಪತಿ ಸುತ ಜೀವಾ ೩

## ೨೭

ಇಷ್ಟಲಿಂಗಾರ್ಚನವಾ । ಮಾಡುವರಾ ।
ಎಷ್ಟೆಂದ್ಹೇಳಲಿ ಭಾಗ್ಯವಾ ।
ಕಟ್ಟಿ ಉಡಲಾಗದೇನಟ್ಟುತ್ತ ಮಾಂಗದಿ ।
ಕಟ್ಟಲಿಲ್ಲದ ತೇಂಜಾಂಗುಷ್ಟದ ಲಿಪ್ತಾ ಪ

ಹೃದಯವೇ ಮಂದಿರವು । ಅಷ್ಟದಳ ।
ಪದುಮವೇ ಮಂಟಪವು ।

ವದಗಿ ಮರುಹು ಎಂಬುವದೇ ನಿರ್ಮಾಲ್ಯವ ಬಿಟ್ಟು ।
ಸದಮಲ ಅರುಹಿನಾ ಉದಕದ ಮಜ್ಜನದೀ ೧

ವಿವೇಕ ವಸ್ತ್ರ ಕೊಟ್ಟು । ಶುದ್ಧಸತ್ವ
ಶ್ರೀ ವಿಭೂತಿಯ ನಿಟ್ಟು ।
ಭಾವಗಂಧ ಭಕ್ತೀವ ತಿಲಾಕ್ಷತೆ ।
ಸಾವಧಾನದಿ ತ್ರಿಗುಣವೇ ತ್ರಿದಳ ಬಿಲ್ವದಿ ೨

ಪುಣ್ಯಗಂಧವೇ ಧೂಪವು ಸುಜ್ಞಾನದ ।
ರನ್ನ ಜೋತಿಯ ದೀಪವು ।
ತನ್ನನುಭವ ಸಂಪನ್ನ ನೈವೇದ್ಯವು ।
ಮುನ್ನೆ ತಾಂಬೋಲವಾನನ್ಯ ಚಿಂತನೆಯಂಬಾದಿ ೩

ಕರಣ ದಾರತಿಗಳನ್ನು । ಬೆಳಗುವಾ ।
ಪರಿಚಾರ ಪ್ರಾಣಗಳು ।
ಸ್ಫುರಿತ ನಾಹತದ ವರವಾದ್ಯ ಘೋಷವು ।
ಪರಿಪರಿಯಾದ ಝಂಕರಿಸುವ – ರವದಿಂದಾ ೪

ವೃಂದದಿ ಷಡ್ಡಸ್ಥಳದೀ ನುಡಿವ ಮಂತ್ರ ।
ವೆಂದು ಅಜಪ ಸೂತ್ರದೀ ।
ತಂದೆ ಮಹಿಪತಿ ನಂದನ ಪ್ರಭು ನಮೋ ।
ಯಂದು ನಿಷ್ಕಾವ್ಯದಾದ ಸಂದಿ ಸುಖಸುತ ೫

## ೨೮

ಏನು ಕೊಟ್ಟನೆ ಮಗಳಾ ಉದಾ ।
ಸೀನದಿ ಭಿಕ್ಷುಕ ಶಿವಗೀಂದು ಗಿರಿಜಾ ಪ

ಹೆತ್ತವಳಿಲ್ಲಾ ಸೀ ಹುಟ್ಟತ ಪರದೇಶೀ ।
ನೆತ್ತಿಗೆ ಎಣ್ಣಿಲ್ಲಾ ನೆರೆಬಿಸಿ ನೀರಿಲ್ಲಾ ।
ದೊತ್ತಿದ ಕೂದಲು ದುರ್ಜಟಿ ಯಾಗಲು ।

ಹೊತ್ತಿದ ತಲೆಯಿಂದ ಹಣೆ ಉರಿಗಣ್ಣಾದ ।
ಇತ್ತಿ ಹೊದಿಯಲಿಲ್ಲಾದೀ ಭಸ್ಮ ಲೇಪನಾ ।
ಮೆತ್ತಿದ ಗುಣದಿಂದ ಮೈ ಯಲ್ಲ ಬೆಳ್ಳಾದಾ ।
ಎತ್ತ ನೇವುವನು ಭೂತ ಗಣಾ ।
ಸುತ್ತ ಲಿಟ್ಟುಕೊಂಡನು ಯೋಗಿ – ಕು ।
ಲೋತ್ತ ಮನೆನಿಸಿದನು ಇಂಥ ।
ಹತ್ತು ಭುಜವ ತಾಳಿ ದೈದು ಮೊರೆಯುಗವ ೧

ಶರಧಿ ಮಥನದಲ್ಲಿ ಸಲೆ ವಿಷ ಹೊರಡಲಿ ।
ಸುರರ ಮಾತು ಕೇಳಿ ಶೀಘ್ರದಿ ಸುರಿಯಲಿ ।
ಉರಿಹೆಚ್ಚಿ– ಮೈಯ್ಯಲಿ ಉಬ್ಬಸ ಗೊಳುತಲಿ ।
ಸುರಗಂಗಿಯ ಹೊತ್ತ ಸೀತಾಂಶು ಕಳೆವತ್ತ ।
ಮರುಳವೆ ತಿರುಗುವ ಮತ್ತೆ ಭೋಳಾದೇವ ।
ತ್ವರಿತವ ಕೋಪದಯ ಮನಿಯೊಳು ಹಿಡಿದಿಹ ।
ಸುರರಿಗೆ ವಲಿದಿಹನು ಬೇಡಿದ ।
ವರಗಳನ್ನು ಕೊಡತಿಹನು ಬೆನ್ನಟ್ಟಿ ।
ಬರೆ ದುಷ್ಟ ಓಡಿದನು ಶ್ರೀ ವಿಷ್ಣು ।
ಕರುಣದಿ ಶರೆಯ ಬಿಡಿಸೆ ಕೊಂಡವನಿಗೆ ೨

ಕರಿಚರ್ಮ ತಾಳಿದಾ ಕಾಡೊಳು ಸೇರಿದಾ ।
ಉರಗ ಭೂಷಣನಿವ ಊರ್ಧ್ವರೇತಾದವ ।
ಹೊರೆ ಹುಲಿದೊಗಲಾ ಹಾಸಿಗೆ ಮಾಡಿದಾ ।
ಕೊರಳಳು ರುಂಡಮಾಲಾ ಕರದೊಳು ಕಪಾಲಾ ।
ಧರಿಸಿದ ನೀತನು ದೊರೆಯಲ್ಲದಾತನು ।
ನೆರೆದುಣ – ಲುಡಿಲಿಲ್ಲಾ ನರಸುರ ರೊಳಗಲ್ಲಾ ।
ಪರಕ ಪರೆನಿಸುವರು ಸ್ಮರಿಸಿದಾ ಆ
ವರಬದಿಯಲ್ಲಿ ಹನು । ಭವಸಾ । ಗರದಿಂದಾಟಿಸುವನು
ಗುರುವರ ಮಹಿಪತಿ ಪ್ರಭು ಸಾಂಬನೆಂಬವನಿಗೆ ೩

## ೨೯

ನಕ್ಷತ್ರ ರಮಣ ನಯ್ಯನಿಗೊಲಿದು ಶರವನಿತ್ತೆ ।
ನಕ್ಷತ್ರ ದೊಲ್ಲಭನ ತಮ್ಮನ ಸುತನ ಸುಟ್ಟೆ ।
ನಕ್ಷತ್ರ ಇಲ್ಲದವನ ವೈರಿಗಮನನ ತಾತ ।
ನಕ್ಷತ್ರ ಕಾಂತಧರನೇ ॥
ನಕ್ಷತ್ರ ಜಾತ – ನಗ್ರಜನ ಮಸ್ತಕವ ತರಿದೇ ।
ನಕ್ಷತ್ರ ಸಹಸ್ರ ಉಳ್ಳವನ ದ್ವಾರವನು ಕಾಯ್ದೆ ।
ನಕ್ಷತ್ರ ನೀನೇ ಇಂದ್ರಾದಿ ದೇವತೆಗಳಿಗೆ ಗುರುಮಹಿಪತಿಸ್ವಾಮಿ ।
ನಕ್ಷತ್ರ ಭೂಷಸಲಹೋ ೧

## ೩೦

ನಿನ್ನ ನಾನೇನೆಂದೆ ನಿರ್ಮಲ ರೂಪನೆ ।
ಪನ್ನಗ ಭೂಷಣ ಪರಮ ಸದಾಶಿವ ಪ

ಸುರರು ಮೊರೆಯಿಡೆ ವಿಷವ ಧರಿಸಿ ಜಗ ।
ಉರಿಯಹದೆನುತ ಕಂಠದಿರಿಸಿದನು ॥
ದುರಳ ದೈತ್ಯನ ಕೊಲ್ಲಲಾಗಿ ಅರ್ಧಾಂಗವ ।
ಹರಿಗೆ ನೀಡಿದ ದೇವ ಶರಣೆಂದೆನಲ್ಲದೇ ॥
ಉರಗಣ್ಣಿನವನೆಂದೇನೇ । ಪರಹೆಣ್ಣವ ।
ಶಿರದೊಳಿಟ್ಟವನೆಂದೆನೇ । ಜಗದೊಳು ॥
ಅರೆ ಮೈಯ್ಯವನೆಂದೆನೇ । ನಿಜಪದ ।
ಶರಣರಿಷ್ಟಾರ್ಥವ ನೀವನೇ ಬಾಯಂದೆ ೧

ಸದ್ಗತಿ ನೀಡಿದ ಬ್ಯಾಡಗ ಮರ ದೊಪ್ಪ ।
ಉದುರಿಸವಗ ನಿಜವ ದೋರಿದ ॥
ಮುದದಿಂದ ಪಾಶುಪತವಾನಿತ್ತ ।
ಸದಮಲಾ ನಂದನೇ ಶರಣೆಂದೇ ಕಾಲಿಲಿಂ ॥
ದ್ವೋದಿಸಿ ಕೋಂಡವನೆಂದೆನೇ । ಬಾಯಿಂದುಗು ।

ಳಿದರೆ ತಾಳ್ದದವನೆಂದೆನೇ । ನರಕಾಳ ॥
ಗದಿ ಸೋತವನೆಂದೆನೇ । ವರಮುನಿ ।
ತ್ರದಶಾಧಿಪತಿ ಮುಖ್ಯ ಸೇವಿತ ಬಾಯಂದೆ ೨

ಸರಸಿಜ ಭವನ ತಲೆಯ ನೊಂದು ಶಳದುಸಾ ।
ವಿರಭುಜ ನೀಡಿದ ಬಲಿಸುತಗ ॥
ಸಿರಿಯೊಳನ ಕುಟುಂಬಕ್ಕೆ ಕೈವಲ್ಯವ ।
ಕರುಣಿಸಿದರಸನೆ ಬಾಯಂದೆ ಕಪಾಲ ॥
ಕರದಿ ಪ್ಪಡಿದವನೆಂದೆನೇ । ನರಮಾಂಸಕ ।
ಹರಿದು ಪೋದವನೆಂದೆನೇ । ಬಾಗಿಲಕಾವಾ ॥
ಸುರನ ಬಂಟನೆಂದೆನೇ । ಸಲಹುವಾ ।
ಗುರು ಮಹಿಪತಿ ಪ್ರಭು ನಮೋ ನಮೋ ನಿನಗೆಂದೇ ೩

## ೩೧

ನೋಡುವ ಬನ್ನಿ ಪೂಜೆ ಮಾಡುವ ಬನ್ನಿ ।
ಪಾಡಿ ನಲಿದಾಡುತಲಿ ಎನ್ನೊಡೆಯಾ ಲಿಂಗಗ ಪ

ದೇಹ ದೇವಾಲಯದಲ್ಲಿ ಹೃದಯ ಜಲ ಹರಿಯಲಿ ।
ಊಹಿಸಿ ನೆಲೆಯಾಗಿ ಹೊಳೆವ ಆತ್ಮಲಿಂಗಗ ೧

ಜ್ಞಾನದಭಿಷೇಕ ಸಮ್ಯಕ್ ಜ್ಞಾನದಾ ವಸ್ತ್ರ ನೀಡಿ ।
ಧ್ಯಾನದೀಪಾ ಸಂಚಿತದ ಧೂಪಾರತಿಯಾ ಲಿಂಗಗ ೨

ಭಾವಭಕ್ತಿ ಗಂಧಾಕ್ಷತೆ ಸುಮನ ಪುಷ್ಪದಲಿಂದು
ಅವಗು ಸುವಾಸನೆಯು ಪರಿಮಳ ಲಿಂಗಗ ೩

ಅನುಭವ ನೈವೇದ್ಯವು ಅನುದಿನಾನಂದ ಸೇವೆ
ಘನ ಗುರು ಮಹಿಪತಿ ಸುತ ಪ್ರಭುಲಿಂಗಗ ೪

## ೩೨

ಪಾದಕ ನಮಿಸುವೆನಾ ಶಿವನಾ । ಪಾದಕ ನಮಿಸುವೆನಾ ಪ

ಗಿರಿಜಾನನ ಪದ್ಮ ಭ್ರಮರನಾ ಸ್ಮರನಾ ಕಣ್ದೆರ ದುರಹಿದನಾ
ಹರನಾ ಮುರ ಹರನಾ ಶಂಕರನಾ ೧

ಅಮಿತ ಗುಣಾಂಬುಧಿ ಅಘಶಮನಾ ।
ಸುಮನಾವಳಿ ಸುತ – ಗೋಗಮನಾ ।
ಕುಮನಾ ಸುರ ದಮನಾ ಸುಮಹಿಮನಾ ೨

ಗುರು ಮಹಿಪತಿ – ಸುತ ಭಯಹರನಾ ।
ಕರುಣಾ ನಂದ ದಯಾಗರನಾ ।
ಸುರ ನದಿ ವಿದು ಅಜ ಶಿರ ಧರನಾ ೩

## ೩೩

ಪಾಹಿಮಾಂ ಪಾಹಿ । ಶಿವಹರ ಮೃಡ ಶಂಭೋ । ಪ

ಅದ್ರಿಧರ ಪ್ರಿಯ ಅದ್ರಿ ಕೃತಾಲಯ ।
ಅದ್ರಿಜಾಮಾತಾದ್ರಿ ರಿಪುನುತ ।
ಅದ್ರಿಜೆ ಪತಿ ಪಾಪಾದ್ರಿ ಕುಲಿಶಕನ ।
ಕಾದ್ರಿಶರಾಸನ ಮುದ್ರಿತ ಪಾಣೇ ೧

ಉನ್ನತದಿಂದಲಿ ಮನ್ಮಥ ಬರಲುದ ।
ಹನ್ಮಾಡಿದ ಷಣ್ಮುಖ ಜನಕನೆ ।
ಉನ್ಮನಯೊಗಿ ಸನ್ನುತ ಲೀಲಾ ।
ಜನ್ಮರಹಿತ ಘನ ಚಿನ್ಮಯ ರೂಪಾ ॥ ೨

ಬರಿಸಿದೆ ಗಂಗೆಯ ನಿರಿಸಿದೆ ಜಡೆಯೊಳು ।
ಧರಿಸಿದೆ ಚಂದ್ರನ ಮೆರೆಸಿದೆ ಭಕ್ತರ ।
ಗುರುಮಹೀಪತಿ ಯಂಕುರಿಸಿದ ಬಾಲನ ।
ಸಿರಸದಲಿಡು ನಿಜ ಪರಸದ ಕೈಯಾ । ೩

೩೪

ವಾರಿವದನ ಗೇಹ ವಾಸಮಾಡಿಹನ ಕು
ಮಾರಿ ಗಂಡನ ತಲೆ ಕಡಿದಾ ನತ್ತಿಗೆವ್ಯಯ
ತೋರಿಕೀ ನಾಮದಿಂ ಕರೆಸಿಗೊಂಬ
ಸೊಸೆಮಾನ ಕಾಯ್ವನ ತಂದಿಗೆ

ಸಾರೂಪದೆಶವಾನೊರದ ನಪ್ಪನ ಪೆತ್ತ
ನಾರೀ ಸಖನ ಸೂತನಣ್ಣನ ಪಿತಸಹ
ಮೂರು ಮೂವತ್ತುಕೋಟಿ ವಿಭುಧರಿಂಸ್ತುತಿಗೊಂಬ
ಶಂಭುರಕ್ಷಿಸುದೆಮ್ಮನು ೧

ಶರಣು ಹೈಮಪತೀಶ ಶಿವಶಂಭು ಅವಿನಾಶ
ಶರಣು ಧನಪತಿಮಿತ್ರ ಪಾವನತರಚರಿತ್ರ
ಶರಣು ಶ್ರೀ ಕಮಲಾಕ್ಷ ಪ್ರೀಯನೇ ವಿರೂಪಾಕ್ಷ
ಶರಣು ದಾನವ ವಿಪಕ್ಷಾ
ಶರಣು ಕರ್ಪುರಗೌರ ವಂಗಗುಣ ಮಂದಾರ
ಶರಣು ಶೃತಿ ಪ್ರತಿಪಾದ್ಯ ಯೋಗಿ ಮನಕಾ ಭೇದ್ಯ
ಶರಣು ಮಹಿಪತಿನಂದ ಮುನಿಜನ ವಂದ್ಯಶರಣು
ಆನಂದ ಕಂದ ೨

೩೫

ಶರಣು ಶ್ರೀ ಗುರುಲಿಂಗ ಶರಣು ಮುನಿಜನಸಂಗ
ಶರಣುಭವ ಭಯ ವಿಭಂಗಾ ಪ

ಪರಮ ಪಾವನಿ ಜಾನ್ಹವಿಯ ತೀರದಲಿ ಕಾಶೀ ।
ಪುರ ವಿಶ್ವನಾಥನೆನಿಸೀ ।
ಹರುಷದಲಿ ನಿಂದು ಮತ್ತೊಂದು ರೂಪದಲಿ ತೆರಳಿ ।
ಧರೆಯ ದೇಶವ ನೋಡುತಾ ಬರುತಾ ೧

ಮೊದಲೆ ತಾ ಕೃಷ್ಣ – ವೇಣಿ ಮ್ಯಾಲುತ್ತರವಾಹಿನಿ ।
ಸದಮಲ ಸುಖ ಕಾರಿಣೀ ।
ಇದ ನರಿತು ನಡಿ ಮಧ್ಯೆ – ಉತ್ತರೇಶ್ವರ ನೆನಸಿ ।
ಮುದದಿಂದ ಬಂದು ನಿಂದು ॥ ೨

ಸಖಿನ ದರುಶನ ನೆವದಿ ಬರುತಿರಲು ನಾ ನಿಮ್ಮ
ಪ್ರಕಟದಲಿ ಕಂಡೆ ನಿಂದು ।
ಭಕುತಿಯಚ್ಚರ ನೀಡು ಗುರು ಮಹೀಪತಿ ಸ್ವಾಮಿ ।
ಸಕಲ ಸುರರಾಜ ಮಾದ್ಯ ಧನ್ಯಾ ॥ ೩

೩೬

ಶರಣು ಶರಣು ಹರ ಸುಂದರ ಶಂಕರ ।
ಹೊರೆಯೋ ನಾ ನಿಮ್ಮ ಬಾಲನು ಪ

ಶರ್ವ ಸದಾಶಿವ ಶಾರ್ವರಿ ಪತಿ – ಧರ ।
ಸರ್ವ ಜನರ ಸಹಕಾರೀ ॥
ಪರ್ವತಾಲಯ ಅಘ ಪರ್ವತ ಕುಲಿಶ ನೆ ।
ಪರ್ವತ ಸುತೆ ಮನೋಹಾರಿ ೧

ಪಂಚಶರಾಲಿ ಪ್ರಪಂಚದ ಭವ ಭ್ರಮ್ಯ ।
ಪಂಚಾಕ್ಷರ ಸುಖದಾತಾ ॥
ವಂಚನಿಲ್ಲವದರ ವಾಂಛಿತ ಪೂರಿತ ।
ಅಂಚೆ ಗಮನೆ ಸನ್ನುತಾ ೨

ಮಹಿತಳ ವ್ಯಾಪಕ ಮಹಿಮನು – ಪಮ್ಯನೆ ।
ಮಹಿಪತಿ ನಂದನ ಪ್ರಭೋ ।
ಅಹಿಯಾ ಭರಣನೆ ಅಹವರಾನಳವಿದು ।
ವಿಹಿತಾಂಬಕ ತ್ರಯ ಶಂಭೋ ॥ ೩

## ೩೭

ಶರಣು ಹೈಮವತೀಶ ಶಿವಶಂಭು ಅವಿನಾಶ ।
ಶರಣು ಧನಪತಿ ಮಿತ್ರ ಪಾವನತರಚರಿತ್ರ ।
ಶರಣು ಶ್ರೀ ಕಮಲಾಕ್ಷ ಪ್ರೀಯನೆ ವಿರೂಪಾಕ್ಷ
ಶರಣು ದಾನವವಿಪಕ್ಷಾ ॥
ಶರಣು ಕರ್ಪೂರ ಗೌರಾಂಗ ಗುಣಮಂದಾರ ।
ಶರಣು ಶೃತಿಪ್ರತಿಪಾದ್ಯಯೋಗಿಮನಕಾಭೇದ್ಯ ।
ಶರಣು ಮಹೀಪತಿ ನಂದ ಮುನಿಜನವಂದ್ಯ
ಶರಣು ಆನಂದ ಕಂದಾ ॥

## ೩೮

ಶಿವಾ ಶಿವಾ ಮಹಾದೇವಾ । ಶಂಕರಾ । ಹರಹರ
ಮಹಾದೇವಾ ಪ

ಗಿರಿಜೆ ರಮಣ ವೃಷಬೇಂದ್ರ ವಾಹನಾ ।
ಸರಸಿ ಜಾರಿ ಮಿತ್ರಾನಲ ನಯನಾ ೧

ಕರ್ಪುರ ಗೌರವ ಪಂಚಾನನಾ ।
ಸರ್ಪ ಭೂಷಣಂಗಜ ಮದಹರಣಾ ೨

ಕರಿಚ – ರ್ಮಾಂಬರ ಸುರ ನದಿ ಧರಾ ।
ಗುರು ಮಹಿಪತಿ ಸುತ ಭಯ ಹರಣಾ ೩

೩೯

ಶ್ರೀ ಗಿರೀಶಾ ನಮೋ ಮಹಾದೇವಾ
ನಾಗ ಚರ್ಮಾಂಬರ ಸದಾಶಿವ ನಾಗ ಭೂಷಣ ದೇವನೆ ಪ

ನೀಲ ಲೋಹಿತ ನಿರುಪಮಚರಿತಾ ।
ಬಾಲಚಂದ್ರನ ವೆತಾಳಿಲಿಟ್ಟಿ ಹಿಮಾಲಯತ್ಮಜಾ ಲಾಲನಾ
ಭಾಲಲೋಚನ ಭಕ್ತರ ಪ್ರೀಯಾ ।
ಕಾಲಜಲಧರ ನೀಲ ಗ್ರೀವಕ । ಪಾಲಿಮೂಲೋಕ ಪಾಲನಾ ೧

ಗಂಗಾಧರ ಗೋವರ ಗಮನ ।
ಅಂಗಜನಾ ಮದ ಭಂಗ ಮಾಡಿದಾ ।
ತುಂಗಮುನಿ ಮನೋ ಸಂಗನೇ ।
ಮಂಗಳಾತ್ಮಕ ಮಹಿಮ ಅಪಾರಾ ।
ಹಿಂಗ ದಂತರಂಗಲ್ಯಾಡುತಾ ಸಂಗರಹಿತ ಸಿತಾಂಗನೇ ೨

ಕರುಣಾಸಿಂಧು ಕೈಲಾಸ ವಾಸೀ ।
ಶರಣ ಜನರಿಗೆ ತರಣೋಪಾಯವ
ಧರಣೀಯೊಳಗ ಬೀರುವೇ ॥
ಗುರು ಮಹಿಪತಿ – ಸುತ ಸಹಕಾರೀ ।
ಹರಹರಾಯನೇ ಹಾರಿಸಿ ಕಲುಷವ।
ಪರಗತಿಯನೀ ತೋರುವೇ ॥ ೩

## ೪೦

ಶಿವನಾ ಭವನಾ ಮನವೇ ನೀನೆನೆ ಗಿರಿಜಾಧವನಾ ಪ

ಸರ್ಪ ಭೂಷಣ ಶರ್ವ ಸಂಕರನಾ । ಇರು
ತಿರ್ಪ ಕೈಲಾಸ ಮಂದಿರನಾ । ಕಂ
ದರ್ಪನ ಗರ್ವದ ದರ್ಪವ ಮುರಿದಿಹ ।
ಕರ್ಪುರ ಗೌರವನಾ । ೧

ಕೆಂಜೆಡೆಯೊಳು ನಂದಿಷನಿಯಳಿಟ್ಟಿ ಹನಾ । ಸಲೆ।
ಕುಂಜರ ಚರ್ಮವ ನುಟ್ಟಿಹನಾ । ತೇಜ ।
ಪುಂಜರ – ಸಂಜಯ ಕಂಜ ಬಾಂಧವ ಶಶಿ
ರಂಜಿತ ಮೌಳೀಯನಾ ॥ ೨

ಇಹಪರ ದಾಯಕ ಚಿನುಮಯನಾ । ಗುರು
ಮಹಿಪತಿ ನಂದನ ಪ್ರೀಯನಾ । ಭವ ।
ರಹಿ – ತನಮಾಡಿ ಸ್ವಹಿತ ವದೋರಿ
ಮಹಿಮೆಯ ಪೊಗುಳುವನಾ ॥ ೩

## ೪೧

ಶಿವ ಶಿವಯನ್ನಿ ಮನದೊಳೂ ಹರಹರಯನ್ನಿ ಪ

ಸಾಂಬಸದಾಶಿವ ಶಂಭುವೆಯನ್ನಿ ಅಂಬಿಕಾರಮಣ
ತ್ರಯಂಬಕ ನೆನ್ನಿ ೧

ಗಂಗಾಧರ ಜಿತ – ನುಂಗನುಯನ್ನಿ ಮಂಗಳಮಹಿಮ
ಸಿತಾಂಗನುಯನ್ನಿ ೨

ಅದ್ರಿನಿವಾಸ ಕಪರ್ದಿಯೆಯನ್ನಿ ರುದ್ರಗುಣದ ಸಮುದ್ರನೆಯನ್ನಿ ೩

ಆಗಮ ವೇದ್ಯ ವಿರಾಗಿಯೆಯನ್ನಿ ಭೋಗ ಭೂಷಣ
ಮಹಾಯೋಗಿಯೆಯನ್ನಿ ೪

ಸುರಮುನಿಧೇಯ ಸುಚರಣನುಯನ್ನಿ
ಗುರುಮಹಿಪತಿಪ್ರಭು ಕರುಣನುಯನ್ನಿ ೫

## ೪೨

ಸ್ಮರಿಸೋ ಎಲೆ ಮನವೇ । ಜಗದಯ್ಯನಾ ।
ಸ್ಮರಿಸೋ ಶಿವಸುಖ ಬೆರಿಸೊ ಭವದಿಂದ ।
ತರಿಸೊ ಗಿರಿಜಾ ರಮಣನ ಪ

ಫಣಿಯಾಗಣ್ಣಿ ನೋರಣಿಯಾ । ಸದಮಲ ।
ಫಣಿಯಾ ಭರಣ ಭೂಷಣಿಯಾ । ಮುಕುತಿಯಾ ।
ಹೋಣೆಯಾ ಕೊಡಲಿಕ್ಕೆ ದಣಿಯಾನೆಂದು ಬೇಡುವರಾ ೧

ಒಡಿಯನೆನ್ನದೆ ನಡಿಯಾ । ಅಂಗಜನಾ ।
ಹುಡಿಯಾ ಮಾಡಿದ ನಡಿಯಾ ಶರಣೆಂದು ।
ಪಿಡಿಯಾಲವರಿಗೆ ಪಡಿಯಾ । ನಿತ್ತು ಹೊರೆವನಾ ೨

ಯತಿಯಾ ಆನಂದ ಸ್ಥಿತಿಯಾ । ಪುಣ್ಯ ।
ಮೂರುತಿಯಾ ವಿಮಲ ಕೀರುತಿಯಾ । ಗುರುಮಹೀ ।
ಪತಿಯಾ ನಂದನ ಸಾರಥಿಯಾನಾದಿ ಮಹಿಮನಾ ೩

## ೪೩

ಸಾಂಬಶಿವಾ ಜಯ ಸಾಂಬಶಿವಾ ಪ

ಸುರರ ತೋರಿಕೆಗೆ ಬಂದು ಕೈಲಾಸ ಮಂದಿರ ಮಾಡೀ ।
ಧರೆಯೊಳು ಸರ್ವರ ಮನದಿರುವಾ ೧

ತನ್ನವರನ್ನಯರು ಎಂಬಾ ಭಾವ ಭೇದವಿಲ್ಲದಲೆ
ಉನ್ನಂತ ಸಂಪದ ಸಲಿಸುವಾ ೨

ತಂದೆ ಮಹಿಪತಿ – ಪ್ರಭು ಶರಣೂ ಹೊಕ್ಕವರ ಚಿದಾ ।
ನಂದ ಸುಖಾಲಯ ಸೇರಿಸುವಾ ೩

೪೪

ಹೊಂದಿ ಸುಖಿಸಿನೆರ್ರೈಯ್ಯ ನಮ್ಮ ದೇವ ದೇವನಂ ।
ತಂದೆ ಮಹಿಪತಿ – ಜಪಾಲ ಭಕ್ತ ಜೀವ ಜೀವನಂ ಪ

ತೋರ್ಪಕರ್ಪೂರಗಂಗಭವಿಯ । ಸರ್ಪ ಅರ್ಪಿತಾಂಕ ಕಂಠ ।
ದಿರ್ಪ ಸರ್ಪ ಭೂಷಕಂ – ದರ್ಪ ದರ್ಪ ನಾಶನು ೧

ಸ್ಥೈರ್ಯಧೈರ್ಯ ವೀರ್ಯೋದಾರ್ಯ ।
ವರ್ಯ ಚರ್ಯದೋರಿ ಜನಕ ।
ಕಾರ್ಯ ಕಾರ್ಯನರ ಹಿಸುವಾ ।
ಆರ್ಯ ರಾರ್ಯ ಸಾಂಬನಂ । ೨

ಕಾಲಕಾಲ ಶಂಭುರಜತ । ಶೈಲವಾಲಯನಿಸಿ ಗಿರಿಜೆ ।
ಲೋಲ ನೀಲ ಲೋಹಿತಂಕ । ಪಾಲಿಶೂಲಿ ಶರ್ವನಂ ೩

೪೫

ಹೊಂದಿ ಬದುಕಿರ್ರೈಯ್ಯಾ ದೇವನಾ । ತರು ।
ಣೇಂದು ಶೇಖರ ಉಮಾ ಧವನಾ ॥
ವಂದಿಸಿದವರಘವೃಂದ ನಿವಾರಿಸಿ ।
ಛಂದದಿ ಕೈವಲ್ಯ ತಂದು ಕೊಡುವನಾ ಪ

ಸ್ಮರಿಸಿದವರ ಬದಿಯಲಿರುವಾ । ತನ್ನ ।
ಶರಣರಿಷ್ಟಾರ್ಥವಗರವಾ ॥
ಕರುಣದಿ ಪತಿತರುದ್ಧರಿಸಲು । ತಾರಕ ।
ಗುರುರೂಪ ತಾನಾಗಿ ಧರೆಲಿ ಮೆರೆವನಾ ೧

ಗಗನಧುನಿ ಧರಿಸಿದನಾ । ಬೆಟ್ಟ ।
ಮಗಳಿಗೆ ಅರ್ಧಾಂಗಿ ನೀಡಿಹನಾ ॥
ನಿಗಮಾಗ ಮಂಗಳಯುಗತಿಗೆ । ನಿಲುಕದು ।
ನಿಲುಕದುರಗ ಭೂಷಣ ಭಸ್ಮಾಂಗ ವಿಗಢ ನಾಟಕನಾ ೨

ಘನಸಾರ ಗೌರಾಂಗ ಹರನಾ । ತಪ್ತ ।
ಕನಕ ವರ್ಣ ಜಟಾಧರನಾ ॥
ಮುನಿಜನ ಶುಭತದವನ ಚೌರ್ಚಿತ । ಪದ ॥
ಅನುದಿನ ಮಹಿಪತಿ ಜನ ಸಲಹುವನಾ ೩

## ೪೬

ನವ ಸುವರ್ಣದಾ ಪರಿಯ ಹೊಳೆವ ಕೆಂಜೆಡೆಯಲೀ
ದಿವಿಜ ನದಿಯ ನಿರುತ ಧರಿಸೀ ಮುಂದಲಿಯ ಲೀ
ತವ ಶೀತಾಂಶೂನಾ ಕಳೆಯ ತಿಲಕಾ ಮಾಡಿ ಮೆರೆವಾ
ಶಿವ ಧ್ಯಾನಮಾಡೀ ಭವ ಭಯ ನಿವಾರಿಸಿ ಹೊರೆವಾ ೧

ಕುವಿದ್ಯವಿಬಂದಾ ಮದನ ನಳಿದಾ ಭಾಲನಯನಾ
ಸುವಿಧ್ಯದಿ ಮೊರೆಹುಗಲು ವಲುವಾನಂದನಯನಾ
ಅವಯವದಲ್ಲಿ ಫಣಿ ಭೂಷಣ ಮಾರಿ ಮೆರೆ ವಾ
ಶಿವಧ್ಯಾನಾ ಮಾರಿ ಭವ ಭಯ ನಿವಾರಿಸಿ ಹೊರೆ ವಾ ೨

ತವ ತವಿಸುವ ಮುನಿಯ ಮನೋಹರ ಪಂಚ ವದನಾ
ರವಿ ಕೋಟಿ ತೇಜದಿರುವಾಘನ ಕಾರುಣ್ಯ ಸದನಾ
ಭವಾನೀ ಯಡದ ತೋಡಿಯಲಿರಿಸೀ ಕೊಂಡು ಮೆರೆವಾ
ಶಿವ ದ್ಯಾನಾ ಮಾಡೀ ಭವ ಭಯ ನಿವಾರಿಸಿ ಹೊರೆವಾ ೩

ಧವಲೀಸುತಿಹ ತನು ರೂಚಯ ಕರ್ಪೂರ ಪರಿಯಾ
ತವಕದಿಂದುಟ್ಟಾ ಉಡುಗಿ ಹರನಾ ಚರ್ಮ ಕರಿಯಾ
ಸವಿಭೂತಿಯ ಸುಧರಿಸಿ ತಪವೇಷದಿ ಮೆರೆ ವಾ
ಶಿವಧ್ಯಾನಾ ಮಾಡೀ ಭವ ಭಯ ನಿವಾರಿಸಿ ಹೊರೆವಾ ೪

ಭುವನತ್ರಯದಾ ಸುರನರೋರಗ ಪೂಜಿಸುತಿಹಾ
ಅವನೀಲ್ಬಾವನಾ ಪರಮ ಪಾವನ ಪಾದ ದ್ವಿತೀಯಾ
ಅವಿನಾವಾ ದೇವರ ಜನಗಿರಿ ವಾಸವಿ ಮೆರೆ ವಾ
ಶಿವಧ್ಯಾನಾ ಮಾಡೀ ಭವ ಭಯ ನಿವಾರಿಸಿ ಹೊರೆ ವಾ ೫

ತ್ರಿವಿಧ ತಾಪವಾಹರಿಸುವದು ಹರಯಂದ ಭರವಿದೀ
ಭವಯನ್ನ ಲಾಗಾ ಸುಖಗರೆವ ಸಾನಂದ ವರದೀ
ಶಿವಾಯೋಂ ನಮಾಯಂದೆನಲು ಸುಗತಿ ನೀಡಿ ಮೆರೆ ವಾ
ಶಿವಧ್ಯಾನಾ ಮಾಡೀ ಭವ ಭಯ ನಿವಾರಿಸಿ ಹೊರೆ ವಾ ೬

ಸವಾರೀಧರನಾವರಣದಿರುವಾ ಕಪ್ಪುಗೋರಳಾ
ತ್ರಿವಿಷ್ಟಾಪರಿಯಾ ಪದವ ಮುನಿವಾ ತ್ರಿಶೂಲ ಸರಳಾ
ಕವಿಬೋಧಿಸುವಾ ಡುವರ ಸೂತ್ರದ ಕೈಯ್ಯಾ ಮೆರೆ ವಾ
ಶಿವಧ್ಯಾನಾ ಮಾಡೀ ಭವ ಭಯ ನಿವಾರಿಸಿ ಹೊರೆ ವಾ ೭

ಶಿವಷ್ಟಕವನು ಹೃದಯ ಪತ್ರ ಮ್ಯಾಲ ಬರವಾ
ಅವನಿಷ್ಟಾರ್ಥವಾ ಕುಡುತ ದುಷ್ಕೃತ ಮೂಲಹರಿವಾ
ಅವಿದ್ಯೋಡಿ ಸುವಾ ಗುರು ಮಹಿಪತಿಯಾಗಿ ಮೆರೆ ವಾ
ಶಿವಧ್ಯಾನಾ ಮಾಡೀ ಭವ ಭಯ ನಿವಾರಿಸಿ ಹೊರೆ ವಾ ೮

## ೪೭

ಜಯ ಮಂಗಳಂ ನಿತ್ಯ ಶುಭ ಮಂಗಳಂ
ಮಂಗಳಂ ಗಿರಿಜಾನನ ಕಮಲ ಭೃಂಗಗ
ಮಂಗಳ ಮುನಿ ಮಾನಸಸಂಗಗ
ಮಂಗಳಂ ಶಿವಶಂಭುಸರ್ವಾಂತರಂಗಗ
ಶ್ರೀ ಶಂಕರಲಿಂಗಗ ಪ

ಕರ್ಪೂರಗೌರಗ ಕಲುಷಾಪ ಹಾರಗೆ
ಸರ್ವಭೂಷಣದಿವ್ಯ ಸಹಕಾರಿಗೆ
ದರ್ಪಕ ವಿದಾರಿಗೆ ಧನುಜಸಂಹಾರಿಗೆ
ಅರ್ಪಣವೆ ವಿಷವ ಮಾಡಿದಧೀರಗೆ ೧

ದೇವ ವಿರೂಪಾಕ್ಷಗ ದಕ್ಷ ಮುಖಶಿಕ್ಷಗ
ಪವನದ ರೂಪ ಗುಣತ್ರಯ ಸಾಕ್ಷಿಗೆ
ಅವಿಭುಧಪಕ್ಷಿಗೆ ಅಖಿಳ ಅಧ್ಯಕ್ಷೆಗೆ
ಭಾವಿಕರಪ್ರಿಯನಾದ ಜಗ ಕುಕ್ಷಿಗೆ ೨

ಧೃತ ಭಾಲಸಂದ್ರಗ ದಯಗುಣಸಾಂದ್ರಗ
ಶೃತಜಾಲವಾದ ನೆಲಿಯಲಿ ನಿಂದಗೆ
ನುತ ನಿರ್ಜರೇಂದ್ರಗ ನಿರ್ಮಣಾನಂದಗ
ಅತುಳ ಗುರುಮಹಿಪತಿ ಸುತವರದಗ ಸುತ ವರದಗ ೩

## ೪೮

ಜಯ ಜಯ ಜಯದೇವ । ಶಂಕರ ।
ಜಯ ಪಾರ್ವತಿ ಮನೋಹರ ಪ

ರವಿಕೋಟಿ ತೇಜಂಗ ಸ್ಮಿತವದನ ।
ಭವಗಜ ಪಂಚಾನನಾ ೧

ಸ್ಮರಹರ ಫಾಲಾಕ್ಷತ್ರಿಪುರಾರೀ ।
ಸುರಮುನಿಜನ ಸಹಕಾರಿ ೨

ಇಹಪರ ಸುಖದಾತಾ ಪಾವನಾ ।
ಮಹೀಪತಿ ಸುತ ಜೀವನಾ ೩

೪೯

ಜಯದೇವ ಜಯದೇವ ಜಯ ಶಂಕರ ಮೂರ್ತಿ
ಜಯ ಜಯವೆಂದು ಬೆಳಗುವೆ ಮನದಲಿ ಭಾವಾರ್ತಿ ಪ

ಸಾಧನ ಕೆಂಜೆಡೆಯೊಳಗೆ ಜ್ಞಾನಗಂಗೆಯ ನಿಲಿಸಿ
ಸಾದರದಲಿ ಚಿಜ್ಯೋತಿಯ ಚಂದ್ರನ ಕಳೆಧರಿಸಿ
ನಾದಬಿಂದು ಕಳಾನಯನ ತ್ರಯವೆರಿಸಿ
ಮೋದಿಪೆ ಅಪರೋಕ್ಷನುಭವ ಮುಖದೆಳೆ ನಗೆಬಳಿಸಿ ೧

ಧವಲಾಂಗದಿ ಸಲೆ ಶುದ್ಧ ಸತ್ವದ ಶೋಧಿಸಲಿ
ತವಕದಿ ಶಮದಮವೆಂಬಾ ಬಾಹುದ್ವಯದಲಿ
ಅವಯವದಲಿ ನಿಜಭಕ್ತಿ ಶೇಷಾಭರಣದಲಿ
ಶಿವತಾನೆಂದು ಬೆಳಗುವೆ ಸಹಜಾನಂದದಲಿ ೨

ವಿವೇಕ ವೈರಾಗ್ಯದಾ ಕರಚರ್ಮಾಂಬರಣಾ
ಅವನಿಲಿಸುರನರಪೂಜಿತ ಪಾವನಶ್ರೀ ಚರಣಾ
ಕುವಲಯ ಲೋಚನ ಶಾಂತಿಯ ಪಾರ್ವತಿ ಸಹಕರುಣಾ
ಭವತಾರಕ ಗುರುಮಹಿಪತಿ ಪ್ರಭುದೀನೋದ್ಧಾರಣಾ ೩

## ೫೦

ಜಯದೇವ ಜಯದೇವ ಜಯಗುರು ಮಹೇಶಾ
ಭಯವನಿವಾರಿಸಿ ಶ್ರಯಕುಡು ನೋಡದೆ ಗುಣದೋಷಾ ಪ

ಶಿವಶಿವಶಿವಶಿವಯೆಂದು ನೆನಿಯಲು ದೃಢವಾಗಿ
ಅವನಿಲಿಹಿಂಗುದು ಪೂರ್ವದ ದುಷ್ಕೃತಗತವಾಗಿ
ಭವಭವ ಭವಭವಯನಲಾಮ್ಯಾಲನಿಶ್ಚಲನಾಗಿ
ಜವದಲಿ ಹರಿವುದುದುರ್ಧರ ಭವಭಯಭಯಾಗಿ ೧

ಅನನ್ಯ ಭಾವದಿಹೊಕ್ಕು ಶರಣವ ನಿಮ್ಮಡಿಗೆ
ತನುಮನಧನವನು ಅರ್ಪಿಸಿ ವಂಚನೆ ನಿಲದ್ಹಾಗೆ
ಅನುದಿನ ಮಾಡಿಲು ಧ್ಯಾನಾಸ್ವರೂಪಹೃದಯದೊಳಗೆ
ಘನ ತರದಿಹನಿಜಸ್ಥಾನವು ಸುಲಬಾಗುವದೀಗೆ ೨

ನಿನ್ನಾ ಮಹಿಮೆಯುತಿಳಿಯದು ನಿಗಮಕ ಶ್ರೀಗುರವೇ
ಇನ್ನು ಅಂತಿಂತೆಂಬುದು ನರಗುರಿಗಳಿಗಳವೇ
ಎನ್ನಾನಯನದಿನೋಡಿ ಸುಮ್ಮನು ಸುರದಿರುವೇ
ಭಿನ್ನವಿಲ್ಲದೆ ಸಲಹು ಮಹಿಪತಿ ಸುತಪ್ರಭುವೇ ೩

## ೫೧

ಜಯದೇವ ಜಯದೇವ ಜಯರಾಮಲಿಂಗಾ
ಜಯಜಯವೆಂದು ಬೆಳಗುವೆ ಆರತಿ ಸುರತುಂಗಾ ಪ

ಸ್ವಾನಂದದ ನಿಜಕಾಶೀಪುರದಿಂದ ಅತ್ಯರಳಿ
ನಾನಾಸ್ಥಳಗಳ ನೋಡುತ ಬಂದು ನೀತೀರ್ಥದಲಿ
ದೀನೋದ್ಧಾರ ಕಾಪಾಪನಾಶನಿ ಹರಿಸುತಲಿ
ಖೂನವ ತೋರಿದೆ ಓಂಕಾರೇಶ್ವರನೆನಿಸುತಲಿ ೧

ಕೆಲವು ಕಾಲ ಕೆರಾಘವಸುಖದರುಕ್ಷಣಲೆಂದು
ತಳಿಯೊಳುಖ್ಯಾತಿಗೆ ಬಂದು ರಾಮೇಶ್ವರನೆಂದು
ನಲಿದರುಗಿರಿಜಾನಂದಿಸರ್ವದೇವರು ಬಂದು
ಸಲುಹುವೆ ಭಕ್ತರಿಗಿಷ್ಟಾರ್ಥವ ನೀಡುತಲಿಂದು ೨

ನಿನ್ನಯ ಮಹಿಮೆಯ ಹೊಗಳಲು ಮನುಜರಿಗಳವಲ್ಲಾ
ಮುನ್ನಾಭರಣವ ಆಗಿಹಶಶಿನೇತಾಬಲ್ಲಾ
ಎನ್ನೊಳು ಬೀರುತರಕ್ಷಿಸುಘನ ತಾರಕನೊಲ್ಲಾ
ಸನ್ನುತ ಮಹಿಪತಿ ನರದನ ಪ್ರಭು ಪಾರ್ವತಿನಲ್ಲಾ ೩

## ೫೨

ಜಯ ಜಯಾ ದೇವ ದೇವಾ
ಮಾರ್ತಾಂಡ ಭೈರವಾ
ದಯದಿಂದ ಪಾಲಸೆನ್ನಾ
ಭಕ್ತರನುದಿನಕಾವಾ ಪ

ಶರಣರ ಮೊರೆಯ ಕೇಳಿ । ಶಿವ ಅವತಾರವ ತಾಳಿ
ಭವರೂಪಮಣಿಮಲ್ಲನಾ । ಮರ್ಧಿಸಿದೆ ತನುಶೀಳಿ ೧

ವಿವೇಕಹಯವನೇರಿ । ಭೋಧನಾಸ್ತ್ರವನು ದೋರಿ
ಅವಗುಣ ಬಲಮುರಿದೇ । ಜಗಕಭಯವ ಬೀರಿ ೨

ಏಳು ಕೋಟಿ ರೂಪವಾಗಿ । ದೇವರೆಲ್ಲರು ಸಾಗಿ
ಮ್ಯಾಲಕರದಿಂದ ಉಘೇ । ಯನ್ನಲು ಕೂಗಿ ೩

ಘನಗುರು ಮಹಿಮಪತಿ । ಸುತ ಪ್ರಭು ಮಾಪತಿ
ಮನದೊಳು ಜ್ಞಾನ ದೀಪಾ । ದಿಂದಬೆಳಗುವೆ ಆರತಿ ೪

## ೫೩

ಪಾರ್ವತಿಪತಿ ಆರ್ವರಾಭಿಷ್ಟಿಯ
ಸರ್ವಪೂರಿಸಿ ತನ್ನಿಜಪದ ಸೇವಕನಿಗೆ
ಕರುಣವ ಬೀರ್ವನಿಗೆ
ಚರಿತ ಆ ಪೂರ್ವನಿಗಾರತಿಯಾ ಬೆಳಗಿರೇ ಸೋ ೧

ತಾರ್ಕು ಪದೇಶಿತಾ ಸರ್ಕನೆ
ಕರ್ಕಶ ಮಾರ್ಗವ ಬಿಡಿಸುವ ಅತರ್ಕ್ಯನಿಗೆ
ಅಘತಮರ್ಕನಿಗೆ ಸುರಸ
ಪರ್ಕನಿಗಾರತಿಯಾ ಬೆಳಗೀರೇ ಸೋ ೨

ಅಂಬುಶಶಿಬಿಂಬಾಂಕಿತ ಜಟೆ
ಅಂಬಕತ್ರಯ ಶಾಂಭವ ವಾಸೆ ಚಿದಂಬರಗೆ
ಗಜಚರ್ಮಾಂಬರಗೆ ಹರಸಿ
ಶ್ವಂಭರಗಾರತಿಯ ಬೆಳಗಿರೇ ಸೋ ೩

ಕರ್ಪುರ ಗೌರವತನು
ತೋರ್ಪುವ ಸರ್ಪಾಭರಣಗಳಲಿ ಶೋಭಿಸುತಿರ್ಪನಿಗೆ
ಹತ ಕಂದರ್ಪನಿಗೆ
ಸುಜ್ಞಾನ ದರ್ಪಣೆಗಾರತಿಯಾ ಬೆಳಗೀರೆ ಸೋ ೪

ಕುಂದದಿ ಆನಂದದಿ ಮಹೀಪತಿ
ನಂದನ ಸಲಹುವ ಘನ ಅಶಿತ
ಕಂದರಿಗೆ ಪೂಜಿತ ಇಂದರಗೆ
ಸದ್ಗುಣ ಸಾಂದರ ಗಾರತಿಯಾಬೆಳಗೀರೆ ಸೋ ೫

## ೫೪

ಈತನೆನೇ ಹನುಮನು ಈತನೆನೇ ನಮ್ಮಗುರು
ಲಂಕೆಯ ಸಖಿಗ ನಿಶ್ಯಂಕೆಯಲುಣಿಸಿದಾ
ಕೌರವ ಬಲದ ಕುಠಾರಿಯಂದೆನಿಸಿದಾ
ಮೂರೇಳು ದುರ್ಭಾಷ್ಯ ಹಾರಿಸಿದಾ ಮುನಿ
ಹರಿ ಮತ ಸ್ಥಾಪನ ಬಿರುದಾಂಕ ದೇವನು
ಗುರುಮಹಿಪತಿ ಜನುದ್ಧರಿಸದ ದೇವನು ॥

## ೫೫

ದ್ಯುಮಣಿ ಮಂಡಲವ ತುಡುಕಲು ಹವಣಿಸಿದ ಹಸ್ತ
ವಿಮಲ ಮುದ್ರಿಕೆ ಜನನಿಗಿತ್ತ ಹಸ್ತ
ಕ್ರಮದಿ ಚೂಡಾಮಣಿಯ ಹರಿಗೆ ತೋರಿದ ಹಸ್ತ
ಸುಮನ ಸಾರ್ಚಿತ ಹನುಮಾ ನಿಮ್ಮಹಸ್ತವನು ದೋರ್‍ಯೆ ೧

ಹಿಡಿಗಲ್ಲಿನಂತೆ ಪರ್ವತಗಳ ನೆರೆದ ಹಸ್ತ
ಪಿಡಿದ ರಘುಪತಿ – ಪಾದ ಪುಣ್ಯಹಸ್ತ
ವಡನೆ ಭೂಭಾರವ ನೀ ಳಹಿದ ಶ್ರೀ ಗದೆ ಹಸ್ತ
ಕಡುಗರುಣಿ ಭೀಮಶೇನಾ ನಿಮ್ಮ ಹಸ್ತವನು ದೊರ್‍ಯೆ ೨

ಹರಿ ಪರಂದೈವೆಂದು ತತ್ವ ಭೋಧಿಪ ಹಸ್ತ
ಧರೆಯಲಿ ಕುಶಾಸ್ತ್ರಂಗಿ ವಜ್ರ ಹಸ್ತ
ಸಿರಿ ವೇದ ವ್ಯಾಸರು ತಂದು ತೋರಿದ ಹಸ್ತ
ಗುರು ಪೂರ್ಣ ಪ್ರಜ್ಞ ನಿಮ್ಮ ಅಭಯ ಹಸ್ತವನು ದೋರ್‍ಯೆ ೩

## ೫೬

ಜಯಜಯವೆಂದು ಶರಣೆನ್ನಿ ಹನುಮಯ್ಯಗ ।
ಜಯ ಭೀಮಶೇನಾನಂದ ತೀರ್ಥರೇಯಗ ಪ

ಆದಿಲಿ ಅಂಜನಿ ಉದರದಲಿ ಬಂದಾ ।
ಸಾದರ ರಘುಪತಿ ಸೇವೆಯಲಿ ನಿಂದಾ ।
ಶ್ರೀದೇವಿ ಸುದ್ದಿ ಶರಧಿಯ ದಾಟಿ ತಂದಾ ।
ಭೇದಿಸಿ ರಾವಣನಾ ದಳವೆಲ್ಲಾ ಕೊಂದಾ ೧

ಎರಡನೇ ರೂಪದಿ ಕುಂತಿ ಉದರದಲಿ ಬಂದಾ
ಸಿರಿಯಾದವರಾಯನ ಭಕುತಿಗೆ ನಿಂದಾ
ತರಿ ತರಿದೊಟ್ಟದಾ ಕುರುಕುಲಾನ್ವಯ ವೃಂದಾ
ಅರಸ ಯುಧೀಷ್ಠಿರನಾ ವಾಸಿಯ ತಂದಾ ೨

ಮೂರನೇ ರೂಪದಿ ಮಧ್ಯಗೇಹದಿ ಬಂದಾ
ನೆರೆ ಬಾದರಾಯಣನಾಜ್ಞೆಲಿ ನಿಂದಾ
ವರವರದ್ವೇಳಿದ ತತ್ವಾರ್ಥ ಛಂದಾ
ಗುರುವರ ಮಹಿಪತಿ ನಂದನ ಮನಕಾನಂದಾ ೩

## ೫೭

ನಮೋ ನಮೋ ಮುಖ್ಯ ಪ್ರಾಣ ನಾಥನೇ
ನಮೋ ಜಗದೊಳು ಪ್ರಖ್ಯಾತನೇ ಪ

ಧರಣಿ ಸುತೆಯ ಮುಖ ಚಂದ್ರಚಕೋರನಾ
ಸಿರಿ ಚರಣಾಂಬುಜ ಭೃಂಗಾ
ಸುರವರರಿಯ ತಂದೆಯ ಮಾವನ ಸಂ
ಹರಿಸದೆ ವಾನರ ತುಂಗಾ ೧

ದುರ್ಯೋಧನಾದಿ ನೂರೊಂದು ಮಂದಿಯ ತನು
ಪರ್ವತ ವಜ್ರದಂಡಾ
ಕರಿ ಏರಿ ಬಹ ಭಗದತ್ತನ ಗದೆಯಿಂದ
ಹರಿಸದೆ ಭೀಮ ಪ್ರಚಂಡಾ ೨

ಧರಿಯೊಳುತಾನವ ಗುಣ ಕರಿಯಾವಳ
ನರಸಿಂಹನು ಮಧ್ವರೇಯ
ಪರಮರೂಪವ ಮೂರಾಗಿ ದೊರಿದೆ
ಗುರು ಮಹಿಪತಿ ಪ್ರಭು ಪ್ರೀಯಾ ॥ ೩

## ೫೮

ಪ್ರಾಣನ್ನೋಡೀರೇ ಮುಖ್ಯ ಪ್ರಾಣನ್ನೋಡಿರೇ ಪ

ಕ್ಷೋಣಿಯೊಳಗ ಸುಖ ಬೀರುವ ಪಾದನ
ಚರಿತಾ ಸದ್ಗುಣ ಭರಿತಾ ಅ.ಪ.

ನರಲೀಲೆಯಲವ – ತರಿಸದ
ಅಂಜನಿ ಸುತ–ನೊ ಮಹಾದ್ಭುತನೋ
ತರಣಿಯ ಮುಟ್ಟಲು ಹಾರಿದ ಬಾಲಕ
ಮಲೆಯೊ ವಿಕ್ರಮ ಸ್ಥಿತಿಯೋ ೧

ಸುರರಾಯುಧವನೆ ಲೆಕ್ಕಿಸ ಕಪಿ
ಯಾಗ್ರಣಿಯೊ ವಜ್ರದ ಖಣಿಯೋ
ಶರಣರ ವಾಂಛಿತ ಪೂರಿಪ ಮೂಲೋಕ
ಗುರುವೋ ಕಲ್ಪ ತರುವೋ ೨

ರಾಮ ಪದಾಂಬುಜ ಕೊಂಬ ಪರಾಗ
ಮಧುಪನೋ ದೇವಾಧಿ ಪನೋ
ಪ್ರೇಮದಿ ರಣದಲಿ ಹರಿರಥವಾದ
ಮೂರುತಿಯೋ ಪುಣ್ಯ ಮೂರುತಿಯೋ ೩

ತಾಮಸ ರಾವಣ ನೆದಿಗೊತ್ತದ
ಕರಮೋ ಸಿಡಿಲದ ಧರಮೋ
ವ್ಯೋಮಕ ಮೀರುವ ಹನುಮನ ಬಾಲದ
ಸರುಳೋ ದೈತ್ಯರ ಉರುಳೋ ೪

ಕ್ಷಣದಲಿ ಸಂಜೀವನ ಗಿರಿ ತಂದಿಹ
ಪದವೋ ಸಾಧುರ ಮುದವೋ
ವನಜ ಭವನ ಪದವಿಯ ಪಡಕೊಂಡಾ
ತಪಮೋ ತಾ ಅಪರೂಪಮೋ ೫

ನೆನಿಯಲು ದುರಿತ ನಿವಾರಿಪ ಕರುಣಾ
ನಿಧಿಯೋ ಭಕ್ತರ ಸುಧೆಯೋ
ಅನುದಿನ ಮಹಿಪತಿ ನಂದನ ಸಲಹುವ
ದಯಮೋ ಗತಿ ಆಶ್ರಯಮೋ ॥ ೬

## ೫೯

ಬಣ್ಣಿಸಲಳವಲ್ಲ ನಿಮ್ಮ ಪ್ರ
ಸನ್ನ ಮೂರುತಿ ಯಲಗೂರ ವಾಸ ಹನುಮಾ ಪ

ಅಂಜನಿಯುದರದಲಿ ಜನಿಸೀ ತೇಜ
ಪುಂಜ ರಾಮನ ಸೇವೆಯಲಿ ಮನನಿಲಿಸಿ
ಕಂಜ ಭವನ ಪಟ್ಟ ಧರಿಸಿ ಬಲು
ರಂಜನೆ ಮೆರೆದ ಭಕ್ತಾಗ್ರಣಿಯೆನಿಸಿ ೧

ಜ್ಞಾನ ಭಕುತ ವೈರಾಗ್ಯದಲಿ ಸರಿ
ಗಾಣೆನೋ ಸುರನರ ಉರಗ ಲೋಕದಲಿ
ಮಾನನಿಧಿಯೇ ವಿಕ್ರಮದಲಿ ಚರ
ಣಾಗತೆ ರಕ್ಷಕ ನೇಮ ಬರದಿರಲಿ ೨

ಮೂರವ ತಾರದಿ ಬಂದು ದೀನೋ
ದ್ಧಾರಣ ಮಾಡಿದೆ ಸದ್ಬೋಧ ಗರದು
ಕಾರುಣಿ ಗುರುವಾಗೆಂದೆಂದು ಸಹ
ಕಾರದಿ ಮಹಿಪತಿ ಸುತಗೊಲಿದಿಂದು ೩

## ೬೦

ಶರಣೆಂಬೆ ಗುರುರಾಯಾ ಶರಣ ಜನರಾಶ್ರಯಾ
ಶರಣು ಸಮೀರ ಕುಮಾರ ಉದಾರನೆ
ಶರಣು ಪಾವನ ಕಾಯಾ ಪ

ಹರಿ ಪೂರ್ಣಾಂಶದಿ ಜನಿಸಿ ಹರಿ ಕುಲೋದ್ಭವ ನೆನಿಸಿ
ಹರಿಯತುಡಕಿ ಬಂದು ಹರಿತೇಜದಿ ನಿಂದು
ಹರಿಸೆ ಧನುಜ ಮೃಗವಾ
ಹರಿರೂಪದಲಿ ನಿಂದೆಹರಿಮಂದಿರದಲಿನಲಿದೆ
ಹರಿಬರಲು ನಮಿಸಿ ಹರಿದಶ್ವಜ ಗೊಲಿಸಿ
ಹರಿಹಯಜಗ ಮುನಿದೇ ೧

ಗೋಪೆಂದ್ರ ನಾಜ್ಞೆಯಲಿ ಗೋಪದಾಂಬುಧಿ ಪರಿಲಿ
ಗೋಪನಲಂಘಿಸಿ ಗೋಪುತ್ರಿಯ ಕಂಡು
ಗೋಪೀಡಕರ ಮುರಿದೇ
ಗೋಪಾಲಗಿದಿರಾಗಿ ಗೋಪಾಸ್ತ್ರವಶವಾಗಿ
ಗೋಪುರವ ನುರುಹಿ ಗೋಪಾನ್ವಯ ಗುರುಹಿ
ಗೋಪದವಿಯ ಪಡೆದೆ ೨

ಮಹಿದರಾನೇಕವತಂದು ಮಹೋದಧಿಯನೆ ಜಿಗಿದು
ಮಹಿಭಾರಕೆ ಅಹಿ ಮಹಿರಾವಣಾನ್ವಯ
ಮಹಿರುಹದಲಿ ತರಿದೇ
ಮಹಿಯೋಳು ಮೂರವತಾರಿ ಮಹಿಮಾನೆಕವಬೀರಿ
ಮಹಿಪತಿ ಸುತಪ್ರಭು ಮಹಿಜಳ ಕೂಡಿಸಿ
ಮಹದಾ ಗ್ರಣಿಯಾದೆ ॥

## ೬೧

ಸಾರಿರ್ಯೆಯ್ಯಾ ಜನರು ಗಂಭೀರ ಗುಣನಿಧಿ ಮುಖ್ಯ ಪ್ರಾಣನ ಪ

ರೋಷದಿಲಂಕೆಯವಳಿಸಿ ವಿಭೀಷಣ ನಾಮವೇ ಉಳಿಸಿ ॥
ಔಷಧಗಿರಿ ತಂದಿಳಿಸಿ ಕಾಯದಾ ಸೌಮಿತ್ರಿಯ ಪ್ರಾಣವೆನುಳಿಸಿ ೧

ಅರಗಿನ ಮನೆಯಿಂದಾ ಐವರನು ಹೊರಡಿಸಿ ತಂದಾ ।
ಪುರ ಬೋಧನಕ ಬಂದಾ ।
ಸುರರಾ ಕಾಯದಾ ಕರುಣ ದಿಂದಾ ೨

ಹರಿಪರಂ ದೈವೆಂದರಸೀ । ದುರುಳರ ಮತವನು ಪರಿಹರಿಸಿ ।
ಹೊರೆದನು ಜಗ ಉದ್ಧರಿಸೀ ಎಂ ।
ದೆರಗಿದ ಮಹಿಪತಿ ನಂದನುದ್ಧರಿಸೀ ೩

## ೬೨

ಹನುಮಾ ಹನುಮಾಯನ್ನೆ ಉದ್ಧರಿಸುವೆ ನೀ ಜನುಮಾ ಪ

ಅಂಜನಿದೇವಿ ದಿವ್ಯಕುಮಾರಾ । ಪ್ರ । ಭಂಜನ
ಪೂರ್ಣಾವತಾರಾ ॥ ಜನ ।
ರಂಜನ ದೇವ ನಿರಂಜನ ತೋರಿಪ । ಕಂಜನಯನ
ಎನ್ನ ಗುರುವೇ ೧

ಸಿರಿರಾಮ ಪದಾಂಭುಜ ಭೃಂಗಾ । ಕರುಣಾಲಯ
ಸರ್ವಾಂತರಂಗಾ ।
ಸುರವರನರ ಕಿನ್ನರ ಫಣವರ ಯಕ್ಷ ವಿಧ್ಯಾಧರ ವಂದಿತನೇ ೨

ಬಂದು ತೋರಿದಾ ಮೂರವತಾರಿ । ದೈತ್ಯ ।
ವೃಂದವನಾಳಿ ಕುಠಾರಿ ।
ಛಂದದಿಂದಲಿ ಮಹಿಪತಿ ನಂದನ ಸಲಹುವಾನಂದದ
ಮಾರುತಿ ಮೂರುತಿಯೇ ೩

## ೬೩

ಹೊಂದಿ ಸುಖಿಸಿ ಹೊಂದಿ ಸುಖಿಸಿ
ಒಂದು ಮನದ ಭಾವದಿಂದಾ
ನಂದನೀವ ಜನಕ ನಮ್ಮಗುರುರಾಯನಾ ಪ

ದಿಟ್ಟತನದಿ ಸಾಗರಧಿಂ
ಕಿಟ್ಟು ಸೀತೆಗೆ ಕೊಟ್ಟ ರಾಮನ
ಮುಟ್ಟಿ ಮುದ್ರೆಯ ಕೊಟ್ಟ ಬಳಿಕ ವನವ ಛೇದಿಸಿ
ದುಷ್ಟ ರಾವಣ ತನುಜನಬೆ
ನ್ನಟ್ಟಿ ಕುಟ್ಟಿ ಲಂಕೆಯನು
ಸುಟ್ಟ ಬಿಟ್ಟ ಬಂದು ಪೊಡ ಮಟ್ಟ ಹನುಮಾ ೧

ಆಪ ನೋಡದೆ ಭೂಪರಾಸಭೆ ।
ಲೋಪಗಡಿ ಮಂಡಿಸಿ ಗೆಲವು ।
ಲೋಪವಾಗೆ ದ್ರೌಪದಿಯನು ಛಲನೆ ಮಾಡಿದ ॥
ಪಾಪಿಕೌರವ ಧೀಪ ನೆಜ್ಞ ಸ ।
ಮೀಪಪಶುವಿನೋ ಪಾದಿಯಲಿ
ಕೊಪದಿಂದಲಿ ಘಾತಿಸಿದ ಭೂಪಭೀಮನಾ ೨

ಮರ್ತ್ಯ ದೊಳಗ ಬೆರ್ತು ವಿಷಯ
ಕುರ್ತು ಬಳಲಿ ನೊಂದ ಜನರು
ಅರ್ತುಚರಣ ನಿರ್ತದ್ಭುಗಲು ತೀರ್ಥಚರಣನು
ಅರ್ಥಿಲೊಲುವ ಸ್ಫೂರ್ತಿ ನಿತ್ತು
ಸಾರ್ಥಕವನು ಮಾಳ್ಪಾನಂದ
ತೀರ್ಥ ಮಹೀಪತಿಜ ವಂದ್ಯ ಮೂರ್ತಿ ಮರುತನಾ ೩

## ೭೪

ಜಯದೇವ ಜಯದೇವ ಜಯಜಯ ಹನುಮಂತಾ ।
ದಯದೊಲವಿಂದಲಿ ಸಲಹು ಜಯ ಕೀರುತಿವಂತ ಪ

ಅಂಜನೆ ಉದರದಿ ಬಂದು ಮೌಂಜೀಬಂಧನದಿ ।
ಕಂಜ ಸಖನ ಮಂಡಲ ತುಡಕಲು ಹವಣಿಸಿದಿ ।
ಭಂಜನೆ ಇಲ್ಲದೆ ರಾಮರ ಸೇವೆಗೆ ತತ್ಪರದಿ ।
ರಂಜಿಸುವಂದದಿ ಮಾಡಿದೆ ಇಳೆಯೊಳು ತನುಮನದಿ ೧

ರಘುಪತಿ ಮುದ್ರೆಯ ಕೊಂಡು ಸಾಗರ ಲಂಘಿಸಿದೆ।
ಭುಕುತಿಲಿ ಜಾನಕಿದೇವಿಗೆ ಅರ್ಪಿಸಿ ಕೈಮುಗಿದೆ ।
ಯುಕುತಿಲಿ ವನವನೆ ಕಿತ್ತಿ ಲಂಕೆಯ ಸದೆಬಡಿದೆ।
ಮಗುಳೆ ಪ್ರತಾಪದಿ ಬಂದು ಅಜಪದವಿಯ ಪಡೆದೆ ೨

ಮೂರವತಾರ ನೀ ಆಗಿ ಪರಿಪರಿ ಚರಿತೆಯನು ।
ದೋರಿದೆ ಜಗದೊಳು ಅನುಪಮ ಹರಿಪ್ರಿಯನಾದವನು ।
ಚಾರು ಭಕ್ತೀಭಾವ ಪ್ರೇಮವ ಕಂಡವನು ।
ಹೊರೆವದು ಅನುದಿನ ಮಹೀಪತಿನಂದನು ನಿಮ್ಮವನು ೩

## ೬೫

ಬಲವಂತರೊಳಗೆ ಬಲವಂತ ಹನುಮಾ ।
ನಳಿನಸಂಭವ ಕರ್ತನಾದ ಮಹಿಮಾ ಪ

ಗಾವುದೈದತ್ತು ಸಾವಿರದಲಿಹ ಪರ್ವತವ ।
ಝಾವ ಮೂರಕೆ ತಂದ ನೋಡಿನೇಮಾ ೧

ಪೋಗಲಾಗಮ್ಯವಾಗಿದ್ದ ಸ್ಥಳವನೇ ಪೊಕ್ಕು ।
ಸೌಗಂಧಿಕಾ ಪುಷ್ಪ ತಂದ ಭೀಮಾ ೨

ವೇದಾಂತ ಸಾಗರದಿ ಖಳನಬಳಿಪ ಹಲವು । ದು–
ರ್ವಾದಿ ಜಲಚರರ ಬಾಯಿಬಿಗಿದ ಮಹಿಮಾ ೩

ಗುರು ಮಹೀಪತಿ ಸ್ವಾಮಿ ರಾಮಚಂದ್ರ ಪ್ರೀಯ ।
ದುರಿತೌಘದ್ಯುಮಣಿ ಎನಿಪ ನಾಮಾ ೪

## ೬೬

ಶರಣು ಶಾರದೆ ವಾಣಿ
ಪಡರಮಾನಂದದ ಕೇಣಿ
ಸುರಸಕಲ ಕೀರ್ವಾಣಿ ಕಲ್ಯಾಣಿ ೧

ವಿದಿತ ಸುವಿದ್ಯದಾನಿ
ಸದಮಲ ಸುಪ್ರವೀಣಿ
ಮದಮತ್ತಗಜಗಾಮಿನಿ ಕಲ್ಯಾಣಿ ೨

ಸ್ವಹಿತ ಸುಖಕಾರಿಣೀ
ಸಹಕಾರಿ ನಿರಂಜನ
ಮಹಿಪತಿಸುತ ಸ್ವಾಮಿನೀ ಕಲ್ಯಾಣಿ ೩

## ೬೭

ಶರಣು ಶಾರದೆ ವಾಣೀ ಸರಸಿ ಜಾಸನ ರಾಣಿ
ಶರಣು ವಿದ್ಯಾಂಬುಧಿಯೆ ಸರ್ವಗುಣಗಣನಿಧಿಯೇ
ಶರಣು ಧೀನೋದ್ಧರಣಿ ಶುಭ್ರಾಂಬರಾವರಣಿ
ಶರಣ ಜನ ಭವ ತಾರಣೀ
ಶರಣಿ ಶೃತಿ ವಿಖ್ಯಾತೆ ಸಲೆ ಜಗತ್ರಯ ಮಾತೆ
ಶರಣು ಶ್ರೀ ಧವಳಾಂಗೆ ಸುರವರಾರ್ಜಿತ ತುಂಗೆ
ಶರಣು ಮಹಿಪತಿ ಕಂದ ನಾಸ್ಯದಿ ನೆಲಿಸಿಛಂದ
ಸಲಹಮ್ಮ ಕರುಣದಿಂದ ೧

## ೬೮

ಎದ್ದಳೀಗಿದಕೋ ಶ್ರೀರಮಣಿ ॥ ಎದ್ದಳೀಗಿದಕೋ ಪ

ಮುದ್ದು ಶ್ರೀ ಹರಿಯಾ ತೋಳ ತೆಕ್ಕೆಯಾನುಸಳಿ
ಶುದ್ಧ ರಾತ್ರಿಲಿ ಹರಿ ರತಿಯೊಳು ಮಲಗಿ ಅ.ಪ.

ಸರಸಿಜ ಸಖನ ಮುಂಬೆಳಗವ ಹರಿಯಲು ।
ಭರದಲಿ ಹಕ್ಕಿಯು ಕಲಕಲವೆನಲು ೧

ನಾರದ ತುಂಬುರ ಮಾಡುವ ಪ್ರಾತ: ।
ಸ್ಮರಣೆಯ ಗಾಯನ ಧ್ವನಿಯನು ಕೇಳಿ ೨

ಕರತಳದಲಿಯವಿಗಳನು – ವರೆಸುತಲಿ ।
ತೆರೆವುತ ಮುಚ್ಚುತ ಅರೆಗಣ್ಣ ನೋಟದಿ ೩

ಬಾಯೊಳಗಿನ ತಂಬುಲವ ನುಗುಳುತ ।
ಬಾಹ್ಯ ಅಧರ ವಕೆಂಪವ ನಡಗಿಸುತ ೪

ಕಿರಿಬೆಮರವ ಕೊನೆ ಯುಗುರದಿ ಹಾರಿಸಿ ।
ಕುರುಳು ಗೂದಲು ಬೈತಲು ನೀಟಾಮಾಡುವ ೫

ಸಡಲಿದ ಅಲರ ಮುಡಿಯಾತಿದ್ದಿ ಬಿಗಿವುತಾ ।
ಒಡನೆ ಕೊರಳಾ ಭರಣವ ತಿರುಹುತಲಿ ೬

ಎಡಬಲ ಕೊಲದ ವಡ್ಯಾಣ ಸರಿಸಿ ಉಟ್ಟಾ ।
ಉಡಿಗಿಯಾ ನಿರಯಾ ಮುಂದಕ ಸಾಂವರಿಸುತ ೭

ಪ್ರಕಟದಿದೋರ್ವ ಕುಚದ ನಖಕ್ಷತಗಳ ।
ಯುಕುತಿಲಿ ಅಡಗಿಸಿ ಪುಟವನು ಬಿಗಿವುತ ೮

ತನ್ನನಂಬಿದ ಬಾಲರ ಹೊರಿಯಲುದಯ ।
ವನ್ನು ಬೀರುತಾ ಕಮಠ ನ್ಯಾಯದಲಿ ೯

ಈರೇಳು ಜಗದ ಜೀವನ ಪಡೆದ ಜನನಿ ।
ಗುರುಮಹಿ ಪತಿಸುತ ಪ್ರಭುವಿನ ಅರಸಿ ೧೦

## ೬೯

ಉಪಕಾರವೇನಾ ಹೇಳಲಿ । ಮಾಯಾದೇವಿಯಾ ॥
ಅಪರ ಮಾತನ ರೂಪಕೆ ಮರೆಯಾಗಿ ।
ವ್ಯಾಪಿಸಿಕೊಂಡಳು ಅನುದಿನ ಜನರಿಗೆ ।
ಅಪರಾಧ ದಾರಿಗೆ ದೂರವಿಟ್ಟಳು ಪ

ಸೂರಿಯ ನಾರಾಯಣೆಂಬರು ।
ಶರಣೆಂದು ಬಾಗರು ತಲೆಯನು ಒಬ್ಬರು ॥
ಹರಿಯು ಪ್ರತ್ಯಕ್ಷವಾಗಿದ್ದರದೇ ಪರಿ ।
ಧರೆಯೊಳುದಾಸೀನ ಮಾಡುವರ್ಕೈಯಾ ೧

ಅಗ್ನಿದೇವರ ಮುಖವೆಂದು ।
ಸುಜ್ಞಾನಿಗಳಿದು ಹೇಳುತಲಿಹಲು ॥
ಅಜ್ಞಾನಿಗಳು ಅಲ್ಲೆ ಕಾಲವ ಕಾಸುತ ।
ವಜ್ಜೆಯ ಮಾಡುವ ಉಗುಳುತಿಹರು ೨

ಎಂದೆಂದು ನಿಲುಕದ ಚಿದ್ರೂಪ ಘನವಾದ ।
ತಂದೆ ಮಹೀಪತಿ ನಂದನ ಪ್ರಾಣನ ॥
ಛಂದದಿ ಭಕ್ತಿಯ ಮಾರ್ಗದಿ ನಡೆಸುತ ।
ಇಂದೆನ್ನ ಹರಿಮೆಚ್ಚು ಮಾಡಿದಳ್ಳೆಯ್ಯಾ ೩

## ೭೦

ನಮೊ ಶ್ರೀ ರಮಣಿ ಜಯ ತ್ರಿಭುವನ ಜನನೀ ಪ

ಅಂಬುಜ ನಾಭ ಪ್ರೀಯೇ ಗುಣ ಸದನೀ ।
ಜಾಂಬೂನದಾಂಬರ ವರಣೀ । ೧

ಸುರಮನಿ ವಂದ್ಯ ಪದದ್ವಯ ಪಾವನೀ
ನರಸೀರುಹದಳ ನಯನೀ ೨

ಗುರುವರ ಮಹಿಪತಿ ನಂದನೋದ್ಧರಣೀ
ಶರಣ ರಕ್ಷಕ ಘನ ಕರುಣೀ ೩

## ೭೧

ಬಾರವ್ವ ಜಗದಂಬೆ ಶರಣೆಂದು ಬಲಗೊಂಬೆ ।
ದೋರಿ ನಿನ್ನ ಪಾದ ಪದ್ಮ ಪೂಜೆಗೊಳೆ ಸುಖದಿಂಬೆ ಪ

ಕೈವಲ್ಯ – ಗತಿ – ದಾಯಿ ಮೂರು ಲೋಕದಾ ತಾಯೀ
ಆವಾಗ ನೆನೆವೆ ನಿಮ್ಮ ಅರ್ಥಿಯಿಂದಾತುಕೊ ಬಾಯೀ ೧

ಅಷ್ಟದಳ ಗದ್ದುಗೆಯಲಿ ಭಕ್ತಿರಂಗ ಹಾಕಿರಲೀ
ಇಷ್ಟೇನು ಜ್ಞಾನದೀಪಾ ಕಟ್ಟಿ ನಿಜದ್ಯಾಸ ಮಾಲೀ ೨

ವೇದಶಾಸ್ತ್ರಗಳಿಗೆ ಮುನ್ನೆ ಮಹಿಮೆ ತಿಳಿಯದು ಪ್ರಸನ್ನೆ
ಆದಿ ಶಕ್ತಿ ಅಪ್ರಮೇಯೇ ಎಂದು ಸುರರು ನಮೋ ಎನ್ನೆ ೩

ಅನಾಹತ ಗರ್ಜನದಾ ತಾಳ ಮದ್ದಲೆಗಳಿಂದಾ
ಅನುವಾಗಿ ನಾಮ ಪಾಡಿ ಗೊಂದಲ್ಹಾ ಕುವೆನುಭಂಧಾ ೪

ಕೊಂಡಾಡುತಿಹೆ ನಿನ್ನ ಗುರು ಮಹಿಪತಿಜನಾ
ಮಂಡಿಮ್ಯಾಲ ಕೈಯನಿಟ್ಟು ಪಾಲಿಸೇ ಅನುದಿನಾ ೫

## ೭೨

ವನರುಹಾಕ್ಷೀ ವನಮಾಲಿಂಗೇ ಏನು ಮರುಳಾದೆ ನೀ ।
ಅನುದಿನ ತನ್ನ ತನುಮನ ವಚನದಿ ನೆನೆವನ ಪುನರಪಿ
ಜನುಮಕ ತಾರ್ದವನಾ ಪ

ಬಿಡದೇ ವಿಷದಾ ಭರಿತಾದಾಕಾ । ಲೊಡಲಂಗಾ ಮ್ಯಾಲಿಪ್ಪನಾ
ವಡಗೋಡಲುಗೊಗ್ಗ ಮೈಯ್ಯವೆ ಗೂಡದು । ಒಡನೋಡ
ನುಡುಗಿಪಾ ಒಡಲೋಳು ಚರಣಾ । ವಡಮೂಡಿ ಬಂದ ।
ಕೋಡಗಲ್ಲೋಲ್ಪಲ್ಲವು । ಘುಡು ಘುಟಿಸುವ ಮಹಾ
ಘೋರರೂಪನವ ೧

ಸೃಷ್ಟಿಲಿ ಮಾವನುದರೋಳು । ತ್ಕುಂಠವಗ್ನಿಯ ನಿಟ್ಟನು ।
ಲುಟುಲುಟು ನಡೆದಾಡುತಲಿಹ ಗುಜ್ಜನು । ಥಟನೆಟ ನಿಳಹಿದ
ಜನನಿಯ ಶಿರವಾಬಿಟ್ಟು । ಪಟ ಪಾಟವಿಯ
ಕಪಿ ಸಂಗತಿರುಗಿದಾ
ಮಟಮಟ ಬೆಣ್ಣೆಯ ಕದ್ದುಮೆಲ್ಲುವನಾ ೨

ದೆಶೆಗಳ್ಗೆ ಪಾರ್ವಕ್ಕಿಯ ಹರುಷಲೇರಿ ಮೆರೆವನಾ ।
ಹಸುಶಿಶುವಾಗಿ ಸುದತಿ ವ್ರತವಳಿದನು ಹಿಸದಸುಯವನರ ।
ತರಿದಿ ನಿರ್ದಯದೀ । ಪಸರಿಸುತಿಹ ಕಾರ್ಮುಗಿಲ ಬಣ್ಣದ।
ಲೆಶೆವನು ಮಹೀಪತಿ ನಂದ – ನೊಡಯನು ೩

## ೭೩

ಶರಣು ಶರಣು ಪರ್ವಾತೀತೆ ಸುರ ಬ್ರಹ್ಮಾದಿವಂದಿತೆ
ಕರುಣಿಸೋಜ್ವಲ ಭರಿತೇ
ಶೃತಿ ಸ್ಮೃತಿ ವಿಖ್ಯಾತೆ ಅತಿಶಯ ಸುಖ ಚರಿತೆ
ನುತ ಗುಣ ಗಣ ಮಂಡಿತೆ
ಮಹಾಪಯೋನಿಧಿಸುತೆ ಶ್ರೀ ಹರಿ ಮನೋವ್ರತೆ
ಮಹಿಪತಿಸುತ ದೈವತೆ ॥

## ೭೪

ರಘುಪತಿಯಾ ತೋರಮ್ಮಾ ।
ರಾಜೀವಾಂಬರೆ ಬಾರಮ್ಮಾ ಪ

ಭಕುತರಾ – ಭೀಷ್ಟೇಯನು । ಪೂರಿಸುವನಾ
ಅನುದಿನ ಕಾವನಾ । ನಿನ್ನಯ ಜೀವನಾ ಅ.ಪ

ಸರಸಾ ಕೋಕಿಲಾಲಾಪೆ । ಸಕಲಾ ಮಂಗಳ ರೂಪೆ ॥
ದುರಿತ ಭಂಜನಗೈವಾ । ಪುಣ್ಯನಾಮನಾ
ಸದ್ಗುಣ ಧಾಮನಾ । ದಶರಥ ರಾಮನಾ ೧

ವಸುಧಾಕಾಯ ಸಂಭೂತೆ । ವರದೇವೇದ ವಿಖ್ಯಾತೆ ॥
ಅಸಮಧನು ವನೆತ್ತ್ಯಭಯವಿತ್ತನಾ ।
ನಿನಗೊಲಿದಾತನಾ । ರಘುಕುಲಜಾತನಾ ೨

ಶರಣೆಂಬೆ ಮಹಾಮಾಯೆ ಸಲಹಬೇಕೆನ್ನತಾಯೆ
ಗುರು ಮಹಿಪತಿಸ್ವಾಮಿ । ಜಗದಯ್ಯನಾ
ಪವನಜ ಪ್ರಿಯನಾ ಸುರಮುನಿಧೇಯನಾ ೩

## ೭೫

ಜಯಜಯ ಜಗಜ್ಜನನಿ ಜಗದಂಬಿಕೆ ।
ಜಯ ರಮಾದೇವಿ ಸಾಗರ ಕನ್ನಿಕೆ ಪ

ಪದ್ಮ ಪದ್ಮಾಲಯೇ ಪದ್ಮದಳಲೋಚನೆ ।
ಪದ್ಮಪ್ರಿಯೆ ದಿವ್ಯ ಪದ್ಮವದನೆ ।
ಪದ್ಮವಕ್ಷೋಜಾತಿ ಪದ್ಮಕಲ ಶೋಭಿತೆ ।
ಪದ್ಮಾಸನಾದೆನುತ ಪದ್ಮಚರಣೆ ೧

ಮಂಗಲಾತ್ಮಕ ನೀಲಭ್ರಂಗ ಕುಂತಲಶಶಿ ಪ–
ತಂಗ ಸನ್ನಿಭ ಕೋಮಲಾಂಗಿ ವರದೆ ॥
ಗಾಂಗೆಯ ವಸನ ಸರ್ವಾಂಗ ರತ್ನಾಭರಣೆ ।
ಅಂಗಜಾಜನನಿ ಶ್ರೀರಂಗಪ್ರಿಯೆ ೨

ಸತತ ಜಗದುತ್ಪತೆ ಸ್ಥಿತಿಯಂತೆ ಕಾರಿಣೆ ।
ನುತಗುಣ ಮಹಿಮಾಯ ಶ್ರುತಿ ಪೂಜಿತೆ ॥
ಪತಿತಪಾವನ ಮಹೀಪತಿನಂದನಿಷ್ಟ । ದೇ
ವತಿ ಭಕ್ತ ಜನಸುಖದಿ ಮತಿದಾಯಿತೆ ೩

## ೭೬

ಜಯದೇವಿ ಜಯದೇವಿ ಜಯ ಆದಿಶಕ್ತಿ।
ಜಯಜಯಚಂದ್ರಲೆಮಾತೆ ರವಿಶತ ನಿಜದೀಪ್ತಿ ಪ

ಸುರಮುನಿ ಸೇವಿತವಾದಾ ಚಾರುವಿಲಾಸದಲೀ ।
ಇರುತಿರೆ ನಾರಾಯಣಮುನಿ ಭಕುತಿಗೆ ಪ್ರೇಮದಲೀ ।
ಕರುಣದಿಭೀಮರಥಿಯಾ ಬಂದು ನೀ ತೀರದಲಿ ।
ದಾರಿ ತಪ್ಪಿದ ದುರುಳನ ಮರ್ದಿಸಿ ಭ್ರಮರದಲಿ ೧

ಅಂದಿಗಿಂದಿಗೆ ನಿಂತು ಪ್ರಸನ್ನತಿ ಗ್ರಾಮದಲಿ ।
ದ್ವಂದ್ವಚರಣವ ದೋರಿ ಮುಕುತಿಗೆ ಖೂನದಲಿ ।
ಬಂದವ ದರ್ಶನ ಸ್ಪರ್ಶನ ಪೂಜನ ಮಾಡುತಲಿ ।
ಚಂದದಿ ಇಹಪರ ಸುಖವಾ ಪಡೆದರು ಸುಲಭದಲಿ ೨

ವಿವೇಕ ಹರಿವಾಣದಿ ಭಾವದಾರತಿ ನಿಲಿಸಿ ।
ತೀವಿದ ಸಮ್ಯಜ್ಞಾನದ ಜ್ಯೋತಿಯ ಪ್ರಜ್ವಲಿಸಿ ।
ಆವಗುಬೆಳಗುವ ಮಹೀಪತಿ ನಂದನತಾನಮಿಸಿ ।
ಕಾವುದು ಶರಣರ ಅನುದಿನ ಅಪರಾಧವ ಕ್ಷಮಿಸಿ ೩

## ೭೭

ಆರತಿ ಬೆಳಗುವೆನಾ । ಅಸುರವಂದ್ಯಗೆ
ಕಾರುಣ್ಯ ವೇದವ್ಯಾಸ ಮುಕುಂದಗೆ ಪ

ಸತ್ಯವತೀ ಸುತನಾಗ್ಯವತರಿಸಿದ ।
ಸತ್ಯ ಸನಾತನ ಮೂರುತಿಗೆ ೧

ಅಖಿಲದೊಳಗೆ ಭಾರತ ಭಾಗವತವ
ಸಕಲ ಪುರಾಣವ ರಚಿಸಿದವಗೆ ೨

ಜ್ಞಾನ ಭಕುತಿ ವೈರಾಗ್ಯವ ತೋರುತ
ತಾನಿಜಗತಿ ಪದ ದೋರಿದಗೆ ೩

ಶರಣಜನರಿಷ್ಟಾರ್ಥವ ನೀಡುತ
ಗುರುಮಹೀಪತಿಸುತ ಸಾರಥಿಗೆ ೪

## ೭೮

ಜಯದೇವಿ ಜಯದೇವಿ ಜಯಭಗವದ್ಗೀತೆ ।
ಶ್ರಯ ಸುಖದಾಯಕಮಾತೇ ಶೃತಿ ಸ್ಮೃತಿ ವಿಖ್ಯಾತೇ ಪ

ಮೋಹ ಕಡಲೋಳಗರ್ಜುನ ಮುಳುಗುತ ತೇಲುತಲಿ ।
ಸೋಹ್ಯವ ಕಾಣದೆತನ್ನೊಳು ತಾನೇ ಮರೆದಿರಲೀ।
ಶ್ರೀಹರಿ ಮುಖದಿಂದುದಿಸಿ ಬೋಧ ಪ್ರತಾಪದಲೀ।
ಮಹಾ ಸುಜ್ಞಾನದ ತೆಪ್ಪದಿ ದಾಟಿಸಿದವನಿಯಲಿ ೧

ಅಂದಿಗಿಂದಿಗೆ ಋಷಿ ಮುನಿ ಸಜ್ಜನ ಮೊದಲಾಗಿ ।
ಕುಂದದಿ ಪಂಡಿತರೆಲ್ಲರು ಮತಿ ಯುಕ್ತಿಯಲೊದಗಿ ।
ಸುಂದರ ಟೀಕೆಯ ಮಾಡುತ ಪಾಡುತ ಅನುವಾಗಿ ।
ಚಂದದಿ ನಿಂತರು ಅನುಭವದಲಿ ವಿಸ್ಮಿತರಾಗಿ ೨

ಆವನು ಭಾವದಿ ಪೂಜಿಸಿ ಓದಿಸಿ ಕೇಳುವನು।
ಸಾವಿರ ಸಾಧನವೇತಕೆ ಜೀವನ್ಮುಕ್ತವನು ।
ದೇವಮನುಜರಿಗೆ ತಿಳಿಯದು ಪದಪದ ಮಹಿಮೆಯನು ।
ಆವಗು ಸ್ಮರಿಸುವ ಮಹೀಪತಿ ನಂದನು ನಿಮ್ಮವನು ೩

೭೯

ತಂದು ತೋರೆ ಮಂದ ಹಾಸನಾ । ತಂದು ತೋರೇ
ಮಂದಹಾಸನಾ ನಂದ ಕಂದ ಶ್ರೀ ಮುಕುಂದ ।
ವಂದಿತಾ ಮುರೆಂದ್ರ ವೃಂದಾನ ಕಾಮಿನಿ ಪ

ಹರನ ಹೊದಿಯ ಅರಿಯ ಶಾಪದಿ । ಹರಿಯರಾದ
ರೊಡೆಯನಿಂದ ಭರದಿಯಜ್ಞ ಕಾಯ್ದಿ
ಕೊಂಡನಾ ॥ಕೋಪಕ ॥
ವರವನಿತ್ತು ಗುರು ಮೊಮ್ಮನು ।
ದರಲಿ ಬಂದ ಮಾತೆ ಮಗನಿ
ಶರದ ಭರಕ ಪಣಿ ಲಿ ತಾಳ್ದನಾ ೧

ಸರಳ ಮಂಚದವನ ತಲಿಗೆ । ಸರಳದಿಂಬು ಕೊಟ್ಟನವನ।
ಸರಳದಿಂದ ಪ್ರಾಣ ತೊರೆದನಾ ॥ ಪ್ರೀತಿಯಾ ॥
ಸರಳಕಾತು ಆಳಿದ ನೈಯ್ಯನ । ಸರಳಗದೆಯ
ಕೈಯ್ಯಲಿಂದ । ಸರಳ ತೃಯನ ಕೊಲಿಸಿ ದಾತನಾ ೨

ಶರತ್ ಮೃಗನ ಭೋಜ್ಯ ವಾಹನ । ಸಖನ ಉರಬಕಾಗಿ
ನಿಲದೇ । ಅಖಿಲ ದೊಳಗನು ಸಳಿತೀಹನಾ ॥ರಾಶಿಯಾ ॥
ಸುಖವ ನಲಿದ ನರಿಯ ಸುತರ । ಕ್ಷೇತ್ರ
ಮಹಿಪತಿನಂದನ । ಮುಖದಿ ತನ್ನ ಚರಿತ ನುಡಿಪನಾ ೩

೮೦

ಇದಿರುಗೊಂಡಳು ಇಂದಿರಾದೇವಿ ।
ಮದನ ಮೋಹನ ದಿವ್ಯ ಮೂರುತಿಯಾ ॥
ಸದಮಲಾನಂದ ಕೀರುತಿಯಾ ಪ

ನವ ಸ್ವರ್ಣ ಹರಿವಾಣದಿ ಕಂಚ ಕಲಶನಿಕ್ಕಿ ।
ಹವಳದಾರತಿ ರನ್ನ ಜ್ಯೋತಿಯಲಿ ॥

ತವಕದಿಂದಲಿ ಎತ್ತಿ ಮುತ್ತಿನಾಕ್ಷತೆ ಇಟ್ಟು ।
ನವರತ್ನ ನಿವಾಳೆಯ ಕೊಡುತಾ ೧

ಜಯ ಮತ್ಸ್ಯ ಕೂರ್ಮನೆ ಜಯ ಕ್ರೋಢ ನರಸಿಂಹ ।
ಜಯ ಮುನಿವಟು ಭಾರ್ಗವ ರೂಪನೆ ॥
ಜಯ ರಾಮ ಶ್ರೀ ಕೃಷ್ಣ ಜಯ ಬೌದ್ಧ್ಯ ಕಲ್ಕಿಯೆ ।
ಜಯವೆಂದು ಬೆಳಗಿ ಪಾದಕೆ ನಮಿಸಿ ॥ ೨

ಕರೆದೊಯ್ದು ತೂಗು ಮಂಚದಿ ಕುಳ್ಳರಿಸಿ ।
ಕರ್ಪೂರದ ವೀಳ್ಯ ಕೊಟ್ಟು ಹರುಷದಲಿ ॥
ಗುರು ಮಹೀಪತಿ ಸುತ ಪ್ರಭುವಿನ ಸವಿ ಸವಿ ।
ಕರುಣ ಮಾತುಗಳಾಡಿಸುತಾ ಹರಿಯಾ ॥ ೩

## ೮೧

ನೀರೇ ದೋರೆ ದೋರೆ ರಂಗನಾ।
ಕರೆ ತಾರೇ ಮುನಿಜನ ಸಂಗನಾ ಪ

ಶರಣ ರಕ್ಷಕ ನೆಂಬೋ ಬಿರುದವ ಸಾರಲು ।
ಮೊರೆಯಾ ಹೊಕ್ಕೆನು ಕೇಳಿ ಬಂದುನಾ ೧

ಜ್ಞಾನ ಭಕುತಿಗಳ ಏನೇನರಿಯದ ।
ಮಾನಿನಿ ನೋಡುವರೇ ಅವಗುಣಾ ೨

ಗುರುಮಹಿಪತಿ ಸುತ ಪ್ರಭು ಕರುಣಾಕರ ।
ನೆನದನು ಮೊರೆಕೇಳಿ ಇಂದಿನಾ ೩

## ೮೨

ಹೇಳೆಲೆ ಸಖಿ ಘಮ್ಮನೆ ಸುಳಿದವನಾರೇ । ಕೇಳಮ್ಮ ಒಮ್ಮಿಂ
ದೊಮ್ಮೆಲೆ ಕಂಡೆ ನಾನೀರೆ । ಒಲಿದು ಕರೆ ತಂದೆನಗಿನ್ನೊಮ್ಮೆ
ದೋರೇ । ಚಲುವಿಕೆಯವನ ಉಸುರಲಾರೆ ಪ

ಪದುಮ ಶಂಖ ಚಕ್ರಾಂಕಿ ತರುಣ ತಳದಾ । ಬಿದಿಗೆ ಚಂದ್ರನ
ಮಾ ದಂಗುಲಿ ನಖದಾ । ಮುದಿವಾ
ನೀಲಮಣಿಯಂತೆ ಹರಡಿನ
ಪಾದಾ । ಚದುರ ನೂಪುರ ಗೆಜ್ಜೆ ರವದಾ ೧

ಅನಿಯ ಹಲ್ಲಿನಂದದಿ ಜಂಘೆಯಾ ಮಾಟಾ ।
ಜಾನೂರು ಪೋಂಬಾಳೆ
ಯೊಳೆಶೆವುತಿಹ ನೀಟಾ । ತಾನುಟ್ಟ ಪೀತಾಂಬರ
ವಡ್ಯಾಣ ಕಟಿ ತಟಾ ।
ಸುನಾಭಿ ತ್ರಿವಳಿಯ ಕೂಟಾ ೨

ಕಿರಿಡೊಳ್ಳು ಮಧ್ಯ ಯಳೆ ವಾಸೆ ಹೃದಯಲಿ ಪದಕಾ । ಸಿರಿವತ್ಸ
ಕಂಬು ಗ್ರೀವ ಕೌಸ್ತುಭಾ ಮೌಲಿಕಾ । ಕರ ಕಡಗ ತೋಳ ಬಂದಿ
ಕೇಯೂರಾ ವಿವೇಕಾ । ಮೆರೆವಾ ಕುಂಡಲ ರನ್ನನೇಕಾ ೩

ಕುರು ಮರಿಯಂದದಿ ಕದಪಿನಮುಖಾ । ಕಿರುನಗೆ ದಂತಾರ
ಚಲುವ ನಾಶಿಕಾ ॥ ಸರಸಿಜ ಜಳೋಪಮ
ನಯನ ಭ್ರೂತಿಲಕಾ ।
ಪೆರೆ ನೊಸಲು ಕಸ್ತೂರಿ ತಿಲಕಾ ೪

ಕಿರಿಗೂದಲು ಮುತ್ತಿನ ಮಂಡಿತಾಟ ಮುದಿತಾ ।
ತೆರಳಿದ ಬೆರಳುಂಗುರ

ಸನ್ನೆ ಮಾಡುತಾ । ಗುರು ಮಹಿಪತಿ ನಂದನ ಪ್ರಭುನಿವಸತ್ಯ ।
ಧರಿಯೋಳಳಿವನ ಗಾಣಿ ಪರತಾ ೫

## ೮೩

ಎಂದು ಕಾಂಭುವೆ ರಂಗಯ್ಯ ನಾ ಪ

ಇಂದ್ರಾನುಜಗುಣ ಸಾಂದ್ರನ್ನಾ । ಉಪೇಂದ್ರನ್ನಾ ।
ಸುರ್ಯನ್ನಾ ಚಂದ್ರನನಾ ೧

ಮಂದರಧರ ನಂದನ್ನಾ । ಸಂದನ್ನಾ ಮುಕುಂದನ್ನಾ ೨

ವಾತಜಕೇತುಳ್ಳಾತನ ಸ್ಯಂದನಾ । ಸೂತ ತ್ರೈಜಗ ತಾತನ್ನಾ ೩

ಭೂತಳ ಸಂತತ ಪೊತ್ತಿಹ । ಯಾದವ ।ಸಾಧಾನಾಧಾನಾಡನ್ನಾ ೪

ಮಿತಾನಂತಿ ಭಗಾತ್ರ ವಿರಾಜಿತ । ಪತ್ರಿ ಮುಕುಟಧ್ವಜ ಸೂತ್ರನ್ನಾ ೫

ಸತ್ರಿ ನೇತ್ರ ಮಿತ್ರ ವಿಧಾತೃ । ಪಿತೃ ವಿಚಿತ್ರ ಚರಿತನ್ನು ೬

ಗುರುವರ ಮಹಿಪತಿ – ದೊರೆಯಾ ।
ಮುರ ಅರಿಯಾ ಸುಖವರ್ಯಾ ನರಹರಿಯಾ ೭

## ೮೪

ಓಎನ್ನಬಾರದೆ ಹರಿಯೆ ನಾ ಕರೆದರೆ ।
ಓ ಎನ್ನಬಾರದೇ ಹರಿಯೆ ।
ಶ್ರೀಯರಸನೇ ನೀನೇ ಗತಿಯೆಂದು ಅನ್ಯ ಉ।
ಪಾಯವನರಿಯದ ಬಾಲಕ ಕರೆದರೆ ಪ

ಹಾಲವ ಬೇಡುವ ಮೊರೆಯಿಡಲುಪಮನ್ಯು ಆ ।
ಬಾಲಗ ಧ್ವನಿ ದೋರಿದಂತೆ ।
ಚಾಲವರಿದು ಸರೋವರದಲಿ ಕರೆದ ಶುಂ।
ಡಾಲಗೆ ಧ್ವನಿ ದೋರದಂತೆ ।
ವ್ಯಾಳ್ಯೆಕ್ಕ ಒದಗೆಂದು ರಾತ್ರಿಲಿ ಕರೆದ ಪಾಂ।
ಚಾಲಿಗೆ ಧ್ವನಿ ದೋರಿದಂತೆ ।
ಕಾಲಕಾಲಕ ಬಂದು ಮೊರೆಯಿಡೆ ಸುರಮುನಿ ।
ಜಾಲಕ ಮೈದೋರಿ ಧ್ವನಿ ದೋರಿದಂತೀಗ ೧

ಜಾವಜಾವಕ ನಿನ್ನ ಕರೆದ ಯಶೋದೆಗೆ ।
ಆವಾಗ ಧ್ವನಿದೋರಿದಂತೆ ।
ಗೋವ ಮೇಯಿಸಿ ತೆರಳಲು ಗೊಲ್ಲರೊದರುವ
ಭಾವಕ ಧ್ವನಿದೋರಿದಂತೆ ।
ದೇವ ನೀಮರಿಯಾಗೆ ಹುಂಕರಿಸ್ಯೊದರಲು ।
ಆವಿಗೆ ಧನಿ ದೋರಿದಂತೆ ।
ಕಾವನ್ಯೆಯ್ಯನೆ ನಿನ್ನ ನೆನೆದ ಗೊಲ್ಲತೆರಾ ।
ಜೀವನ ಹಿತವಾಗಿ ಧನಿದೋರಿದಂತೀಗ ೨

ಬಂದೂಳಗಕ ನಿನ್ನ ಪಾಂಡವರೊದಲು ।
ನಿಂದು ನೀ ಧನಿದೋರಿದಂತೆ ।
ಇಂದಾದಾ ಕಲಿಯುಗದ ದಾಸರ ಮಾತಿಗೆ ।
ಬಂದು ನೀ ಧನಿ ದೋರಿದಂತೆ ।
ಕಂದನಳುವ ಧ್ವನಿ ಕೇಳುತ ಜನನಿ ಅ ।
ನಂದದಿ ಧನಿದೋರುವಂತೆ ।
ತಂದೆ ಮಹಿಪತಿ – ನಂದನ ಪ್ರಭು ಗೋ ।
ವಿಂದ ಮುಕುಂದೆನ್ನ ಸಲಹೆಂಬ ಮೂಢನಾ ೩

## ೮೫

ನಿನ್ನ ಮೂರುತಿಯ ತೋರಸೋ । ರಂಗಯ್ಯಾ ಪ

ನಿನ್ನ ಮೂರುತಿಯ ತೋರಿಸೆನ್ನ ಕಂಗಳಿಗೆ ದಯ ।
ವನ್ನು ಬೀರಿ ಭವಭಯ ಬನ್ನವನು ಬಿಡಸೋ ರಂಗಯ್ಯಾ ಅ.ಪ.

ಅರುಣನಖಾಂಗುಲಿ ಹೊಳೆವಾ । ಕೋಮಲ ಪಾದಾ।
ಎರಡು ಜಂಘೆ ಜಾನುರವಾ ।ಕಟಿ ಜಗದು ।
ದರನಾಭಿ ಸಿರಿವತ್ಸವಾ । ಕಂಬುಗ್ರೀವದ ।
ಕರಚತುಷ್ಟಯ ಮೆರೆವಾ । ಕರುನಗೆದಂತಾ ।
ಧರಮಿರುಪಕದಮಶೃತಿ । ಅರಗಂಗಳನಾಸಾ ।
ಪೆರೆ ನೊಸಳಲಳಕದಾ ರಂಗಯ್ಯಾ ೧

ರನ್ನಮುಕುಟ ಕುಂಡಲದಾ । ಕೌಸ್ತುಭ ಕೇಯೂ ।
ರನ್ನು ತೋಳಬಂದಿ ಸ್ಫುರದಾ । ಕಡಗ ಮುದ್ರಾಂ ।
ಬರ ವಡ್ಯಾಣವು ಹೇಮದ । ಅಂದುಗೆ ಗೆಜ್ಜೆ ।
ಬಣ್ಣ ತನು ನೀಲ ಮೇಘದಾ । ಮುನ್ನಗಜದವ ।
ಸರ ಮನ್ನಿಸ್ಸೊದಗಿದ । ಪರಿ ಧನ್ಯ ಗೈಸೋ ।
ಮಂದ ಮತಿಯೆನ್ನದೆ ಕರುಣಿಸಿ ರಂಗಯ್ಯಾ ೨

ಕಣ್ಣಿನೊಳು ರೂಪ ನಿಲಿಸಿ । ಬಾಹ್ಯಾಂತರದಿ ।
ನಿನ್ನ ಕಳೆಗಳ ತೋರಿಸಿ । ಹಮ್ಮಮತೆಯಾ ।
ಮನ್ನೀನವಗುಣ ಬಿಡಸೆ । ಸಂತರ ಕೈಯಾ ।
ಲೆನ್ನ ಅನುದಿನ ಒಪ್ಪಿಸಿ ।
ಸನ್ನುತ ಮಹಿಪತಿ । ಚಿನ್ನನೊಡೆಯನೇ ಬಹ ।
ಜನ್ಮ ಜನ್ಮಾಂತರದಲಿ ತನ್ನವನೆಂದೆನಿಸಿ ೩

## ೮೬

ಬಾರೋ ಬಾರೋ ರಂಗಾ ಪ

ಬಾರ್ರೈಯ್ಯಾ ಯದುವೀರಾ । ಈರೇಳು ಭುವನಾಧಾರಾ ।
ಶ್ರೀ ರಮಣಿಯ ಮನೋಹರಾ । ವಾರಣ ಭಯ ನಿವಾರಾ ।
ಕರುಣಾಕರಾ । ದೀನೋದ್ಧಾರಾ । ಸರ್ವಾಧಾರಾ ।
ಪರಮ ಉದಾರಾ । ಸುರಸಹತಾರಾ । ದಯಾಸಾಗರ ೧

ಯದುವಂಶಾಂಬುಧೀ ಸೋಮಾ । ಸದಮಾಲಾನಂದಾತ್ಮ
ಒದಗುವೆ ಸ್ಮರಣೆಗೆ ನೇಮಾ । ಮದನಜನಕ ಮಹಮಹಿಮಾ ।
ಜೀಮೂತ ಶಾಮಾ ।
ಸದ್ಗುಣ ಧಾಮಾ । ಪೂರಿತ ಕಾಮಾ ।
ತ್ರಿವಿಕ್ರಮಾ । ಅನಂತ ನಾಮಾ । ಲೋಕಾಭಿರಾಮಾ ೨

ಅಸುರ ಕುಲ ಸಂಹರಣಾ । ಬಿಸರುಹ ಸಖ ಶತ ಕಿರಣಾ ।
ಅಸಮನೆ ಮಹಿಪತಿ ಸುತನಾ । ಪೋಷಿಸುವೆ ನೀ ಪರಿಪೂರ್ಣ
ಸರಸಿಜ ನಯನಾ । ಫಣಿವರ ಶಯನಾ । ಖಗವರ ಗಮನಾ ।
ಮೃದುತರ ಚರಣಾ । ಅಹಲ್ಯೋದ್ಧರಣಾ । ಕನಕಾಭರಣಾ ೩

## ೮೭

ಬಾರ್ರೈಯ್ಯಾ ಕರುಣಾ । ಸುರಾರ್ಚಿತ ।
ದೋರ್ರೈಯ್ಯಾ ಚರಣಾ ಪ

ಇಂದಿರೆ ಆನನ ಇಂದೀವರ ಮಕರಂದ । ಮಕರಂದ ।
ಭ್ರಮರಾ ಮುಕುಂದಾ ದೇವಾ ೧

ಖಂಡಣ ಅಸುರರಾ ಮಂಡಣ ಸುರರಾ ಪ್ರಚಂಡ ।
ಸುರರಾ ಪ್ರಚಂಡ । ಚಂಡ ವಿಧೀ ವಂದ್ಯನೇ ೨

ಮಹಿಪತಿ ನಂದನ ಅಹಿತ ಸಂಹರಣಾ । ಅಹಿತ ।
ಸಂಹರಣಾ ಅಹಿತಲ್ಪ ಶಯನ ಗೋವಿಂದ ದೇವಾ ೩

## ೮೮

ಬಾರೋ ಬಾರೋ ಭಾವಜನಯ್ಯಾ
ತಾರಸೋ ಎನ್ನನು ನೀನು ।
ದೋರಿ ಸನ್ಮಾರ್ಗವನು ಸಿರಿಯಾದಿವರ್ಯನೇ
ಮೊರೆಯ ಹೊಕ್ಕೆನು ಪ

ಸುರಭಿ ಚೋರ ವಿದಾರಾ । ಸುರಭಿ ಸಂಸಾರ ಧೀರಾ ।
ಸುರಭಿ ಭಾಗವತರಾ । ಗುರುತನವರತದಲರಿತವರೋಳಗಿಹೆ ೧

ನಗಜಾಮಾತಾಸನ್ನುತಾ । ನಗದಾ ವೈರಿಯಾ ಭ್ರಾತಾ।
ನಗದಭಿಮಾನ ಸೂತಾ। ನಗಧರ ದುಗವಾಬ್ಧವಾಸನೆ ೨

ಗುರು ಘಾತಕಾನುಜೆಯಾ । ಗುರುತಭಿಮಾನ ದೊಡೆಯಾ ।
ಗುರುಮಹಿಪತಿ ಪ್ರೀಯಾ । ಶರಣಾಭರಣಾ
ಸುಕರುಣಾಲು ಮೂರುತಿ ೩

## ೮೯

ಬಾರೋ ಬಾರೋ ಬಾರೋ ರಂಗಾ । ಬಾರೋ ಶುಭಾಂಗಾ।
ವರಶೌರಿ ಪರೋಪರಿದೋರ್ವಲೀಲೆ ।
ವೀರ ದೀರ ಶೂರುದಾರಿ ವಾರಿಜಾರಿ ವಂಶಜಾ ಪ

ಉತ್ಸವದಗೆ ತ್ಯಾವಿನಾ । ವತ್ಸವ ಗಾಯಿದೇ ಪ್ರಾಣಾ ।
ಮತ್ಸರಿ ಪರ ಸಂಹಾರಾ । ಮತ್ಸ್ಯಾವ ತಾರಾ ।
ಸತ್ಸುರೇಶ ಸಂಪತ್ಸು ಮಹಾ ಸತ್ಸು ಖದಾ । ಭೀ
ಭತ್ಸ ವತ್ಸಲನೇ ಸಿರಿ ವತ್ಸ ಚಿತ್ಸ್ವರೂಪನೇ ೧

ಕಾಯಜಕೋಟಿ ಲಾವಣ್ಯಾ । ಕಯಾದು ಸುತಪಾಲನಾ ।
ತ್ರಯಭುವನ ವ್ಯಾಪಕಾ । ತ್ರ್ಯಯಾಕ್ಷ ಸಖಾ ।
ದಯ ತೋಯಧಿ ಶ್ರೀ ಯದುನಾಯಕನೇ ।
ತೋಯಜಾಯತಾಕ್ಷಾಕ್ಷಯ ಪಯಧೀಯ ವಾಸನೇ ೨

ಮಂದಮತಿಯೆಂದು ನೋಡೋ । ಕುಂದನನಾರಿಸಬ್ಯಾಡೋ ।
ಬಂದು ಕೊಡೋ ಮಹಿಪತಿಯಾ । ನಂದನ ಪ್ರಿಯಾ ।
ಎಂದೆಂದಿಗೆ ಸದ್ವಂದ ರಕ್ಷಕ ಶ್ರೀ –
ನಂದ ಕಂದ ಇಂದಿರೇಶಾನಂದನೀವಾ ನಂದನೆ ೩

## ೯೦

ಬಾರೋ ವಾರಿಜ ಚರಣಾ ಪ

ಬಾರೋ ವಾರಿಜ ಚರಣಾ । ಭೂರಿ ದುರಿತ ಹರಣಾ ೧

ಸಾರಂಗಹರ ಸಖ ಪತಿತೋದ್ಧೋರಣಾ । ಸಾರಂಗಧರ ಕರುಣಾ ೨

ದ್ವಿಜರಾಜ ವಾಹನಾ । ಪೀತಾಂಬರಾವರಣಾ
ದ್ವಿಜರಾಜ ಕುಲಾಭರಣಾ ೩

ಸುರಪಾರಿ ನಂದನನ ಕಾಯಿದೇ ಹರಿಣಾ ।
ಸುರಪಾದಿ ಮುನಿ ಸ್ಫುರಣಾ ೪

ಗುರು ಮಹಿಪತಿ ಸುತ ಪ್ರಭು ಕೇಯೂರಾಭರಣಾ ।
ಇಹಪರಾನಂದ ಪೂರಣಾ ೫

## ೯೧

ಬಾರೋ ಈ ರೇಳು ಜಗಜೀವನಾ । ಜಗಜೀವನಾ ಪ

ಬಾರೋ ಈರೇಳು ಜಗಜೀವನಾ ಜಗಜೀವನಾ ।
ಪಾವನ ದೇವಾ ಪಾವನ ದೇವಾ । ಧೀರ ಕೇಶವಾ ೧

ಎನ್ನ ಎರಡು ನಯನಗಳು । ನಯನಗಳು ।
ಕಂಗೆಡುತಿದೆ ಕಂಗೆಡುತಿದೆ । ನಿನ್ನ ಕಾಣದೆ ೨

ಬೆನ್ನ ಬಿದ್ದವರವಗುಣವಾ । ಅವಗುಣವಾ ।
ಆರಿಸುವರೇ ಆರಿಸುವರೇ । ಚಿನ್ನ ಶ್ರೀ ಹರಿ ೩

ಇಂದು ಮನಿಗೆ ಬಾರದಿರಲು । ಬಾರದಿರಲು ।
ನಿಲ್ಲದು ಪ್ರಾಣಾ ನಿಲ್ಲದು ಪ್ರಾಣಾ । ಒಂದರೆಕ್ಷಣಾ ೪

ತಂದೆ ಮಹಿಪತಿ ಸುತ ಪ್ರಭುವೇ । ಸುತ ಪ್ರಭುವೇ ।
ದೀನಾಭಿಮಾನಿ ದೀನಾಭಿಮಾನಿ । ಬಂದು ಕೂಡೋ ನಿ ೫

## ೯೨

ಬಾರೈಯ್ಯಾ ಗೋವಿಂದಾ । ಕೀರ್ತನೆಗೆ ಮುಕುಂದಾ ।
ಬೀರುತ ನಿಮ್ಮ ಮಹಿಮೆ ಸ್ವಾನಂದ ಪುರದಿಂದಾ ಪ

ಕೊಂಡಾಡುವಂತೆ ಕೀರ್ತಿ ನೀಡಬೇಕು ನಿಜಸ್ಫೂರ್ತಿ ।
ಮಂಡಿಸಿ ಭಕ್ತರಂಗಾ ಹೇಳುವೆ ನಿಮ್ಮ ವಾರ್ತೆ ೧

ವೈಕುಂಠ ಯೋಗಿವರಿಯಾ ಸ್ಥಳಸುರ ಮುನಿರಾಯಾ ।
ನೀ ಕರಿಸಿ ಪಾಡುವಲ್ಲಿ ಇಹನೆಂದೆ ನಿಶ್ಚಯಾ ೨

ಕಂದನ ತೊದಲು ಮಾತಾ ಕೇಳಿ ಹಿಗ್ಗುವಂತೆ ಮಾತಾ ।
ತಂದೆ ಮಹಿಪತಿ – ಸ್ವಾಮಿ ಬಲವಾಗೋ ಶ್ರೀ ಕಾಂತಾ ೩

## ೯೩

ಬಾರಯ್ಯಾ ಗೋವಿಂದಾ । ಬಾರೋ ನಂದನ ಕಂದಾ ಪ

ಕನಕಗರ್ಭನ ತಂದೆ । ಕನಕಮೃಗವ ಕೊಂದೆ ।
ಕನಕಾಂಬರಧರ । ಕನಕನಯನ ಹರ ।
ಕನಕವಕ್ಕಿಗಮನ । ಕನಕಾಭರಣ ೧

ಹರಿಯಾನಂದನ ಕೊಲಿಸಿ । ಹಿರಯಾನಂದನನುಳಿಸಿ ।
ಹರಿಯಾ ಸುತನುತ । ಹರಿಯಾ ರಿಪುಸುತ ।
ಹರಿಯೇ ಬಾಯೆನೆ ಹರಿಯಾದೆ ೨

ಗೋಕುಲವರಾಧಾರಾ । ಗೋಕುಲ ವಿಹಾರಾ ।
ಗೋಕರ್ಣ ಶಯನಾ । ಗೋಕೋಟಿ ತೇಜಾ ।
ಮಹಿಪತಿ ಸುತ ಪ್ರಭು ಗೋಪಾಲಾ ೩

## ೯೪

ಬಾರೋ ಬರೋ ರಂಗಯ್ಯಾ ನೀ ಬಾರೋ । ನಿನ್ನ ।
ಮೂರುತಿ ಹೃದಯಕ ತಾರೋ ಪ

ಬೀರೋ ಬೀರೋ ಕರುಣಾರಸ ಬೀರೋ । ಪದ ।
ವಾರಿಜ ಶರಣರ ತೋರೋ ೧

ಸಾರೋ ಸಾರೋ ಸುಗತಿ ಪಥ ಸಾರೋ । ಹಗೆ।
ತೀರಿದೆ ಭವಭಯ ಬಾರೋ ೨

ಗುರುವರ ಮಹಿಪತಿ ಪ್ರಭು ಬಾರೋ । ಮರಹು ।
ಹಾರಿಸಿ ಸಲಹುವರಾರೋ ೩

೯೫

ಬಾರೋ ಬಾರೋ ರಂಗಯ್ಯಾ ।
ಮಿರುಪ ಅಂದುಗೆ ಗೆಜ್ಜೆ ।
ಝುಣ ಝುಣ ಝುಣ ಝುಣ ರವದಿಂದಾ ಪ

ಕಡೆಗಣ್ಣು ಹೊಳವನು । ಅಡಿಗಡಿಗೆ ದೋರುತಾ ।
ಎಡಬಲದೋಳಿಂದೊಲಿದು ।
ದುಡುದುಡು ದುಡು ನಲಿಯುತಾ ೧

ಪದಹತಿಗೆ ಮಯೂರಾ । ವದನ ತಗ್ಗಿಸುವಂತೆ ।
ಮುದದಿ ಗೆಳೆಯರವೆರಸಿ । ಒದಗಿ ಧಿಗಿಧಿಗಿ ಧಿಗಿಲೆನುತಾ ೨

ಅಂದು ಉದಯದಲೆದ್ದು । ಬಂದು ಬೆಣ್ಣೆಯ ಬೇಡೆ ।
ಕಂದಾ ನೀ ಕುಣಿಯೆನಲು । ನಿಂದು ತೋರಿದ ಭಾವದಿಂದ ೩

ಬಿರಮುಗುಳ ನಗುತಾ । ಪೆರೆ ನೊಸಲೊಳು ಮೆರೆವಾ ।
ಅರಳೆಲೆ ಕರ್ಣ ಕುಂಡಲಾ । ಭರದಿಂದಾ ಒಲಿಯುತಾ ೪

ಗುರು ಮಹಿಪತಿ ಸ್ವಾಮಿ । ಹಾರೈಸುವಾ ನಯನಕ ।
ಹರುಷದಿ ತೃಪ್ತಿಗೈವಾ । ಕರುಣಾ ಸಾಕಾರದಿಂದಾ ೫

## ೯೬

ಬಾರೋ ಬಾರೋ ಎನ್ನ ನೀ ತಾರಿಸ ಬಾರೋ ಪ

ವಾಸವ ತನುಜನ ಸಾರಥಿ ಬಾರೋ ।
ವಾಸುಕಿ ಶಯನಾವಂತನೇ ಬಾರೋ ।
ವಾಸುದೇವ ಮುಕುಂದನೆ ಬಾರೋ ।
ವಾಸ ಮಾಡಿದೆ ಕ್ಷೀರಾಬ್ಧಿಲಿ ಬಾರೊ ೧

ಕರಿವರ ಸಂಕಟ ಹರಿಸಿಹ ಬಾರೋ ।
ಕರುಣಾಕರ ಗೋಪಾಲನೆ ಬಾರೋ ।
ಕರದಲಿ ಚಕ್ರವ ಪಿಡಿದಿಹ ಬಾರೋ ।
ಕರಿಚರ್ಮಾಂಬರ ಮಿತ್ರನೆ ಬಾರೋ ೨

ಸರಸೀರುಹದಳ ನೇತ್ರನೇ ಬಾರೋ ।
ಸರಸೀರುಹ ಸಂಭವ ವಂದ್ಯನೇ ಬಾರೋ ।
ಸರಸಿಜೋವನಾಭನೆ ಬಾರೋ ।
ಗುರುಮಹಿಪತಿ ಸುತ ಸಾರಥಿ ಬಾರೋ ೩

## ೯೭

ಬಾರೋ ಬಾರೋ ಮೋಹನಾ । ಶ್ರೀದೇವಾ ಪ

ವೃಷಭಾನು ಜಾನನ ಸರಸಿಜ ಭೃಂಗಾ ।
ಶಶಿಧರ ವಂಶಾಭರಣಾ ೧

ಮುನಿಜನ ವಂದಿತ ನಿರ್ಜರ ತುಂಗಾ ।
ದನು ಜಾವಳಿ ಮದಹರಣಾ ೨

ಮಹಿಪತಿ ಸುತ ಪ್ರಭು ಜಗದಂತರಂಗಾ ।
ಇಹಪರದಾಯಕ ಕರುಣಾ ೩

## ೯೮

ಬಾರೈಯ್ಯಾ ಗೋವಿಂದಾ ನಂದಾ ।
ಶ್ರೀವಧು ಲೋಲಾ ಸುರಜನ ಪಾಲಾ ।
ಸುಮನಾಮಾಲಧರ ಘನ ನೀಲಾ ೧

ಭುವನಾಧಾರ ಭೂಬಯ ಹಾರಾ ।
ಭಾವಿಕ ಜನರಾ ದುರಿತ ನಿವಾರಾ ೨

ದಾನವ ಮಥನಾ ಕೌಸ್ತು ಭಾಭರಣಾ ।
ಘನಗುರು ಮಹಿಪತಿ ನಂದನ ಪ್ರಾಣ ೩

## ೯೯

ಭಕುತರ ರಿಣಕಂಜಿ ಅಡಗಿದರೇ ।
ಅಖಿಳದಿ ಬಿಡುವರೇ ಪ್ರಕಟಿಸಿ ಬಾ ರಂಗಯ್ಯಾ ಪ

ಕತ್ತಲೆಯೊಳು ಹೆಜ್ಜೆ ದೋರದೇ ತಿರುಗುತಾ ।
ಮತ್ತೆ ದೊಡ್ಡ ಬೆಟ್ಟದಾ ಮರಿಲ್ಯಾಡುತಾ ।
ಅತ್ತಿತ್ತ ನೋಡದವೆ ಝುಡಪಿನೊಳಗ ಹೊಕ್ಕು ।
ಉತ್ತಮ ನರಮೃಗದಂತಡವಿಯ ಸೇರಿ ೧

ಬಡತನ ದೋರಲೆಂದು ಯಾಚಕನಾದರೇನು ।
ಕಡಲ ಬೊರಿಯಾ ಮನೆ ಮಾಡಿರಲೇನು ।
ಜಡೆಗಟ್ಟ ನಾರ ಸೀರೆನುಟ್ಟು ಉಪವಾಸ ಮಾಡಿ ।
ಗಿಡವೇರಿ ಮಡುಹೊಕ್ಕು ಕಳವಿಲಿ ತಿರುಗುತಾ ೨

ಮುನಿಯಂತೆ ದಿಗಂಬರ ರೂಪವ ತಾಳಲೇನು ।
ಜನದ ಕಲಿಕೀ ಮಾತು ಕಡೆಗಾಣುದೇ ।
ಘನಗುರು ಮಹಿಪತಿ ಸುತ ಪ್ರಭು ನಿನ್ನೊಳಿದ್ದಾ ।
ಅನುವದೋರಿ ಸಂತೈಸಿ ಶರಣರ ರಕ್ಷಿಸಯ್ಯಾ ೩

## ೧೦೦

ತೋರಿಸೇ । ಗೋಪಿ । ತೋರಿಸೇ ॥
ಅವನ ದೂರಿಂದ ಸಾಕಾರ । ನೋಡುವೆ ಜೋಗಿಯಾ ಪ

ಚಿಕ್ಕ ಮಕ್ಕಳು ಅಂಜಿ । ಪಕ್ಕನೆ ಒಳಮನೆ ॥
ಪೊಕ್ಕರು ನೋಡುತಾ ॥ ಮುಕ್ಕಣ್ಣಿನವನ ೧

ಎಂದ ಮುದ್ದಿನ ನುಡಿ । ಚೆಂದದಿ ಕೇಳುತ ॥
ಕಂದನೆತ್ತಿಕೊಂಡು । ಬಂದಳೆಶೋದಾ ೨

ಇಂದು ಮೌಳಿಯ ನೋಡಿ । ಮಂದಹಾಸದಲಿಂದಾ ।
ನಂದವ ನಿತ್ತನು । ಬಂದ ಮಹೇಶಗೆ ॥ ೩

ಸಿರಿಯರಸನ ಶುಭ । ಚರಣಕೆ ಎರಗುತ ॥
ತೆರಳಿದ ಸಾಂಬನು । ಹರಷದಲಿಂದ ೪

ಗುರುಮಹೀಪತಿಪ್ರಭು । ಚರಿತೆಯ ಅನುದಿನ ।
ಧರೆಯೊಳು ಕಾಂಬುವರ । ಸುಕ್ರತವೆಂತೋ ೫

## ೧೦೧

ಏ ನೀರೇ ತೋರೇ ರಂಗನಾ ಪ

ರಂಗನಾ ಸಕಲಾಂತ ರಂಗನಾ । ಕೋಮಲ ಸುಂದ ।
ರಾಂಗನಾ ಭೂ ಭುಜ ಯದು ತುಂಗನಾ ೧

ಪಾಲನಾ ಜಗದಾ ಸಿರಿ ಲೋಲನಾ । ನಯನಸುವಿ ।
ಶಾಲನಾ ಮೃಗ ಮದಾಂಕ ಬಾಲನಾ ೨

ತಪನ ನಂತೆತೇಜಸ್ವರೂಪನಾ । ಪಾಂಡವರಸಂ
ಸ್ಥಾಪನಾ ಮಹಿಪತಿಜ ರಕ್ಷಿಪನಾ ೩

## ೧೦೨

ಅರುಣಾನುಜ ವೈರಿಯಾ ಭರಣನ ಮಿತ್ರನ ತೋರೇ ಪ

ಉರಗಾ ಹರಿಧ್ವಜಪಿತನಾ । ಅರಿಪಿತ ಸಂಹಾರಕನಾ ।
ಗಿರಿಜಾವಲ್ಲಭರಿಯನಾ । ಶರಗರ್ಭನನುತನ ತೋರೆ ೧

ಶೂರರಾಯನಂದನಾ । ಅರಸಿ ಯಣ್ಣನ ಮದನನಾ ।
ವೈರೋಚನ ಆತ್ಮಜನಾ । ವರದನ ತಂದು ತೋರೆ ೨

ಗಿರಿ ರಿಪುತನು ಸಂಭವನಾ । ಅರಸಿಯಣ್ಣನನುಜನಾ ।
ಗುರುವರ ಮಹಿಪತಿ ಪ್ರೀಯನಾ । ಹರಿಣಾನೇತ್ರನೀ ತೋರೆ ೩

## ೧೦೩

ಏನು ಕಾರಣ ವೆನ್ನ ಮನೆಗಿಂದು ಬಾರನು ।
ಮಾನಿನಿತಂದು ತೋರಮ್ಮಾ ರಂಗನ ಪ

ದೀನ ವತ್ಸಲನೆಂಬ ನಾನ್ನುಡಿ ಮಾತಿಗೆ ।
ನಾನೆರೆ ಮರುಳಾದೆನಮ್ಮಾ ರಂಗಗೆ ೧

ಬಂಧು ಬಳಗದಾಶೆ ಇಂದು ಜರಿದು ತನ್ನ।
ಹೊಂದಿದೆ ಚರಣ ನೋಡಮ್ಮಾ ರಂಗನೆ ೨

ತಾನೆ ದಯಾಂಬುಧಿ ನಾನೆವೆ ಅಪರಾಧಿ ।
ನ್ಯೂನಾರಿಸುವ – ರೇನಮ್ಮಾ ರಂಗನು ೩

ತನ್ನ ಹಂಬಲಿಸುವ ಕಣ್ಣಿಗೆ ಮೈದೋರಿ ।
ಧನ್ಯಳ ಮಾಡನೇನಮ್ಮಾ ರಂಗನು ೪

ತಂದೆ ಮಹಿಪತಿ ನಂದನ ಸಾರಥಿ ।
ಒಂದು ನೆಢದಪುಣ್ಯಲೆಮ್ಮಾ ರಂಗನು ೫

## ೧೦೪

ಬಾರನೇನೆ ಭಾಗ್ಯನಿಧಿ । ಬಡವರ ಮರೆಯದೇ ।
ಸಾರಸೊಬಗುಳ್ಳ ಕೃಷ್ಣ । ಸಾದರದಿ ಮಾನಿನಿ ಪ.

ಕಾಲಿಲ್ಲದವನಂತೆ ಕುಳಿತನೇ ಮಧುರಿಲಿ ।
ನೀಲಾಂಗನಂಗವೆಂತು । ನಿಬ್ಬರವೇ ಮಾನಿನೀ ೧

ಮುಂದಕೆ ತಿರುಗಲೊಲ್ಲ ಹಿತಗಜಪಂಚಾನನ ।
ಮಂದರಧರೆಗೆ ಭಡತನವೇನೆ ಮಾನಿನಿ ೨

ಶಿರವಕತ್ತರಿಸಿನ್ನು ಸಂದನೇ ನೆಲೆಯಬಿಟ್ಟು
ತುರುಗಳ ಕಾವ ಬುದ್ಧಿ ತೋರಿದನೆ ಮಾನಿನಿ ೩

ತಂದೆ ಮಹೀಪತಿ ಪ್ರಭು । ತುರಗವೇರಿ ಬಂದನೆಂದು ।
ಇಂದು ಹೇಳಿದರಿಷ್ಟಾರ್ಥ ಈವನೆಲ್ಲ ಮಾನಿನಿ ೪

## ೧೦೫

ತಂದು ತೋರೆ ಮಂದಹಾಸನ । ಕಾಮಿನಿ ।
ತಂದು ತೋರೆ ಮಂದಹಾಸ । ನಂದ ಕಂದ ಶ್ರೀಮುಕುಂದ ।
ವಂದಿತಾಮರೇಂದ್ರ ವಂದ್ಯನ । ಕಾಮಿನಿ ಪ

ಹರನ ಹೊದಯ ಅರಿಯಶಾಪದಿ ।
ಹರಿಯರಾದರೋಡಯನಿಂದ
ಭರದಿಯಜ್ಞಕ್ಕಾಯ್ಸಿಕೊಂಡನಾ । ಕೋಪಕೆ
ಉರವನಿತ್ತಗುರುಮೊಮ್ಮನುದರಲಿ ಬಂದ ಮಾತೆ ಮಗನ ।
ಶರದ ಭರಕೆ ಫಣಿಲಿ ತಾಳ್ದಾನಾ । ಕಾಮಿನಿ ೧

ಸರಳಮಂಚದವನ ತಲೆಗೆ । ಸರಳದಿಂಭಕೊಟ್ಟನವನ
ಸರಳದಿಂದ ಪ್ರಾಣ ತೊರಿದನಾ । ಪ್ರೀತಿಯಾ ।
ಸರಳಕಾದು ಅಳಿದನಯ್ಯನ । ಸರಳಗದೆಯ ಕೈಯ್ಯಲಿಂದ ।
ಸರಳತ್ರಯನ ಕೊಲಿಸಿದಾತನ । ಕಾಮಿನಿ ೨

ಶತಕಮ್ಯಗನ ಭೋಜ್ಯವಾಹನ । ಸಖಉರಭಕಾಗಿ ನಿಲ್ಲದೇ ।
ಅಖಿಲದೋಳಗೆನುಸಲುತಿಹನಾ । ರಾಶಿಯ ।
ಪಕವನಳಿದನರಿಯಸುತನ । ರಕ್ಷಕಮಹೀಪತಿನಂದನ।
ಮುಖದಿ ತನ್ನ ಚರಿತೆನುಡಿಪನ ಕಾಮಿನಿ ೩

## ೧೦೬

ಎನ್ನ ಪ್ರಿಯನಾ ನೀ ತಂದು ತೋರೇ ಸುಜ್ಞಾನೇ ಪ

ಕನಸಿನೊಳಗ ಕಂಡ ಪರಿಯಾರೂಪದ ದೋರಿ
ದಾವ ತೇಜಮುಸುಕಿತು ಧರಿಯೇ । ತ್ರೈ ಭುವನವ ರಕ್ಷಿಸ
ಬಂದಾ ಹರಿಯೇ । ಮುಜ್ಜೆಮರಿಯೇ ೩

ಮುಟ್ಟಿಲೀ ತಗಧನುವಿಳಲಿ ಝುಮ್ಮನೇ
ನಾವು ನೆಟ್ಟನೆಪೂಜಿಪೆವು ಗೌರಮ್ಮನೇ ಎಂದು
ಬಿಟ್ಟ ಮಗಳು ಬೇಡಿಕೊಂಡರು ಸುಮ್ಮನೇ
ಅಡಿಯಿಟ್ಟುನಲಿದು ಬರುವ ರಾಮೋ ಘಮ್ಮನೇ ಪರಬೊಮ್ಮನೆ ೪

ಬಂದು ನೋಡಿಬಿಲ್ಲನೆತ್ತಿದ್ದಾಚಕ್ಕನೇ
ಅರುವಿಂದ ಲೋಚನೆ ಮಾಲಿ ಹಾಕಲು ಫಕ್ಕನೇ
ವೃಂದ ಕಾಣುತ ಹೆದರಿತುಧಕ್ಕನೇ
ನಮ್ಮ ತಂದೆ ಮಹಿಪತಿ ನಂದನ ಪ್ರಭು ಠಕ್ಕನೇ ಪಾಲಕ್ಕುನೇ ೫

## ೧೦೭

ನೋಡಿರೇ ನೋಡಿರಮ್ಮಾ ಚೆಲುವನಾ ನೋಡಿರೇ ॥ ಇವ॥
ರೂಢಿಗೆ ಆವನಿಜೆಯಾ ತಕ್ಕುವರನೇ ಮುದ್ದುಸ್ಮರನೇ ಪ

ಕೆಂದಳಿರ ಹೋಲುವ ಪಾದ ತಳವೇ
ಜಂಘಾಯಿಂದ ಜಾನೂರುಮಾರಾ
ಪೊಂಬಾಳವೆ ಕಟ ಛಂದದಂಬರ ಉದರ
ತ್ರಿವಳವೇ। ಹಾರ ದಿಯ
ವಪ್ಪುವಯದೆ ಕಂಬುಗಳವೇ ಕರ ಸರಳವೇ ೧

ನಗೆ ಮೊಗದಂತಾಧರ ಹೊಳೆವಾ ಕಡ ಮಗಳು
ಮಂಡಿತದ ಕುಂಡಲವಾ।
ನಯನಗಳು ಹೋಲುತಿವೇ ಕಮಲವಾ। ಪಣಿ।
ಮೃಗಮದ ಕಿರೀಟ ೨

ಆವರಾಯನಮಗನೋತಾನರಿಯೇ।ಭೂಸು।
ರಾವಳಿಯೊಳಿಂದ್ಧಾರೇನು ।ಅಂಗ।
ದಾವ ತೇಜಮುಸುಕಿತು ಧರಿಯೇ।ತ್ರೈಭುವನವರಕ್ಷಿಸ
ಬಂದಾಹರಿಯೇ । ಮುಜ್ಜಿಮರಿಯೇ ೩

ಮುಟ್ಟಿಲೀ ತಗಧನುಏಳಲಿ ಝುಮ್ಮನೇ
ನಾವು ನೆಟ್ಟನೆಪೂಜಿಪೆವು ಗೌರಮ್ಮನೇ ಎಂದು
ಬಿಟ್ಟ ಮಗಳು ಬೇಡಿಕೊಂಡರು ಸುಮ್ಮನೇ
ಆಡಿಯಿಟ್ಟುನಲಿದು ಬರುವ ರಾಮೊ ಘಮ್ಮನೇ ಪರಬೊಮ್ಮನೆ ೪

ಬಂದು ನೋಡಿಬಿಲ್ಲನೆತ್ತಿದ್ದಾಚಕ್ಕನೇ
ಅರುವಿಂದ ಲೋಚನೆ ಮಾಲಿ ಹಾಕಲು ಘಕ್ಕನೇ
ವೃಂದ ಕಾಣುತ ಹೆದರಿತುಧಕ್ಕನೇ
ನಮ್ಮ ತಂದೆ ಮಹಿಪತಿ ನಂದನ ಪ್ರಭು ಠಕ್ಕನೇ ಪಾಲಕ್ಕುನೇ ೫

## ೧೦೮

ನರಹರಿ ತಾರಿಸೊಎನ್ನಾ ದುರಿತಾರಿ
ಮುಕ್ತಿ ದಾರಿ ಸಾರಿ ದೋರಿ ದಯಬೀರಿ ಪ

ಕಮಲಾಯ ತಾಂಬಕ ಕರುಣ ಜಲನಿಧಿಸಿರಿ
ಕಮನೀಯ ಲಾವಣ್ಯ ರೂಪ ಶಂಖಾರಿ
ವಿಮಲಗದಾಂಭುಜಧಾರೀ
ಸುಮನಸಾಧುಜನ ಹೃದಯ ವಿಹಾರಿ ೧

ಎಲೆ ದೇವ ದೇವ ಎಂದ್ಯ ಜೀವ ಕಾವ ಮುರ ಅರಿ
ಚೆಲುವಕಸ್ತೂರಿ ಶ್ರೀಹರೀ
ವಲಿದು ಮಹಿಪತಿ ಜನಪರೋಪರಿಯಲಿ
ಸಲಹುತಿಹ ಮಾಮನೋ ಹಾರಿ ೨

## ೧೦೯

ನರಹರಿ ಬಂದು ಮೂಡಿದಾ
ಶರಣಗದಯವಾ ಮಾಡಿದಾ ಪ

ತಟತಟ ಬಿರಿಯಲು ಕುಂಭವವಳಗಿನ
ಛಟ ಛಟ ಶಬ್ಧವ ತೋರುತಾ
ಕಟ ಕಟ ಬ್ರಹ್ಮಾಂಡೊಡೆಯಿತೋ ನೋಡಲು
ಪಟ ಪಟ ತಾರೆಗಳಾರಲು ತಾ ೧

ಗುಡ ಗುಡ ಗುಟ್ಟಿಬಾಯಾಳಗಗ್ನಿಯ
ಧಡ ಧಡ ಕಿಡಿಗಳನುಗುಳುತಾ
ಗಡ ಬಡಿಸಲು ಸಮುದ್ರಗಳೆಲ್ಲವು
ಬುಡು ಬುಡು ಗುಳ್ಳೆಗಳೇಳಲು ತಾ ೨

ಫಳ ಫಳ ಭೂಮಿಯು ಬಿಚ್ಚಿತು ಗಿರಿಗಳು
ಹಳ ಹಳ ಕಲ್ಲುಗಳುದುರಿದವು
ಭಳ ಭಳ ಭಾಸಮ ಗಡಿಶತ ತೇಜನ
ಥಳ ಥಳ ಮಿಂಚುಗಳಾಡಿದವು ೩

ಮಾಗ್ಗಿತು ಧನಿಯನು ಕೇಳುತ ಕೇಳವು
ಮುಗ್ಗಿತು ಕಂಗಾಣದೆ ಹಲವು
ಅಗ್ಗಳ ದೈತ್ಯರು ದೂರದಿ ಬಿಸುಟರು
ನುಗ್ಗಾದವು ಅವರಾಯುಧವು ೪

ಸರಸಿಜ ಭವ ಭವ ಸುರಮುನಿ ಇಂದ್ರರು
ಇರದೆವೆ ಮುರಿಯನು ಸಾರಿದಿರು
ಗುರುವರ ಮಹಿಪತಿ ನಂದನಸಾರಥಿ
ಶರಣೆಂದೆನುತಲಿ ಹೊಗಳಿದನು ೫

## ೧೧೦

ಆನಿ ಬಂತಿದೆಕೋ ಮಹ ಮದ್ದಾನಿ ಬಂತಿದಕೋ।
ಸ್ವಾನಂದದಲಿ ಮೆಲ್ಲಮೆಲ್ಲನೆ ಅಡಿಗಳ।
ತಾನಿಡುವುತೊಲಿವುತಲಿ ನೋಡಮ್ಮಾ ಪ

ಕರಿಯ ಬಣ್ಣದ ಲೊಪ್ಪತಾ । ಕಿರಿಗುದಲು ।
ಸಿರದಲೀ ಹೊಳೆವುತಾ ।
ಪೆರೆನೊಸಲೊಳು ಕೇಶರದ ಕಸ್ತೂರಿ ರೇಖೆ ।
ಕರುಣ ಭಾವದ ಕಂಗಳು ನೋಡಮ್ಮಾ ೧

ಝುಳ ಝುಳಿಪಂಬರದೀ । ಝಣ ಝಣಲೆಂಬಾ ।
ಚೆಲುವ ಘಂಟೆಯರವದೀ ।
ವಲಿದು ತನ್ನಯನಿಜ ಶರಣರ ಅನುಮತ ।
ದಲಿ ನಲಿದಾಡುತಲೀ । ನೋಡಮ್ಮಾ ೨

ದುಷ್ಟಜನರು ತೊಲಗೀ । ಯನುತ ಮುಂದ ।
ಶಿಷ್ಟಭಟಿರುವದಗೀ ।
ಅಟ್ಟಹಾಸದಿ ಬಂದರಿದೇ । ಮಹಿಪತಿ ಜನ ।
ಇಷ್ಟ ದೈವತ ಎನಿಪಾ ನೋಡಮ್ಮಾ ೩

## ೧೧೧

ನಡೆಯ ಬೇಕೆಲ್ಲೋರಂಗಾ ವಳಮನಿಗೆ ।
ತಡವಾಯಿತು ಬಂದು ಸಭೆಯೊಳಗೆ ಪ

ಭಕುತರು ತಾಳ ಮೃದಂಗ ವೀಣೆಗಳಿಂದ ।
ನಿಗಮಗೋಚರ ನಿಮ್ಮಚರಿತವನು ।
ಬಗಿ ಬಗಿಯಲಿ ಪಾಡುವದಕೆ ಮರುಳಾಗಿ ।
ನಗಧರನಿಂತೀ ಸಕಲ ಮರೆದು ೧

ಹೊನ್ನು ಮಯದ ತೂಗು ತೊಟ್ಟಿಲ ವಂಬರ ।
ಬಣ್ಣಬಣ್ಣದ ಪುಷ್ಪವಹಾಸಿ ।
ರನ್ನ ದೀಪದ ಎಡಬಲಲಿಂದಿರೆದೇವಿ ।
ನಿನ್ನ ಮಾರ್ಗವ ನೋಡುತಿಹಳಯ್ಯಾ । ೨

ಬಂದ ಭಾಗವತರಿಗೆಲ್ಲ ಬೇಡಿದ್ದು ಕೊಟ್ಟು ।
ಮಂದ ಹಾಸದ ಉಚಿತದಿ ಕಳುಹಿ ।
ತಂದೆ ಮಹಿಪತಿ ನಂದನ ಸಾರಥಿ ।
ಛಂದದಿ ಬಿನ್ನಹ ಅವಧರಿಸಿ ೩

## ೧೧೨

ರಾಮ ಬಂದನೇನೆ । ಶ್ರೀ ರಘು
ರಾಮ ಬಂದನೇನೆ॥
ಪ್ರೇಮಿಕ ಜನರನು ಪೊರೆಯಲಾಗಿ।ಶ್ರೀರಘು ಪ

ಜಾನಕಿ ಸಹಿತ ಲಕ್ಷಣರೊಡಗೂಡಿ ।
ಸ್ವಾನಂದದಿ ದಿಗ್ವಿಜಯಮಾಡಿ । ೧

ಈರೇಳು ವರುಷಕೆ ಬರುವೆನೆಂದು ಮುನ್ನ ।
ಸಾರಿದ ನುಡಿ ಸತ್ಯಮಾಡಿ ದೋರಲು ೨

ಹಾರೈಸಿ ನೋಡಲು ಕಣ್ಣಿಗೆ ಹಬ್ಬ ।
ದೋರಲು ಮೋಹದ ಮುದ್ದು ಮೊಗದಾ ೩

ಅವಧಿಯ ಮೀರಲು ಅಸುವ ತೊರೆವೆಸಿಂದು ।
ತವಕದಿ ಭರತನ ಪಾಲಿಸಲಿಕ್ಕೆ ೪

ಸಾಕೇತ ಪುರಪತಿ ಸಾಮ್ರಾಜ್ಯಲೋಲನಾಗಿ ।
ಸಾಕುವ ಜಗಗುರು ಮಹೀಪತಿ ಪ್ರಭು ೫

## ೧೧೩

ಕಂಡೇವಮ್ಮ ರಂಗನಾ ।ಕಂಡೇವಮ್ಮಾ ಕೃಷ್ಣನಾ ಪ

ಹೃದಯದೊಳಗಿನ ಸದಮಲ ಬ್ರಹ್ಮನಾ ೧

ಬಿಡದೆವೆ ಗೋಕುಲದಿ ಸಂಚರಿಪನಾ ೨

ಗುರುಮಹಿಪತಿ ಪ್ರಭು ಕರುಣ ಕಟಾಕ್ಷದಿ ೩

## ೧೧೪

ಅವನೆವೆ ಧನ್ಯ ನೋಡಿ
ಅವನ ದರುಶನ ಮಾಡಿ ಪ.

ಹರಿಧ್ಯಾನ ಹೃದಯದಲ್ಲಿ ।
ಹರಿನಾಮ ಜಿಹ್ವದಲಿ ।
ಹರಿಕಥೆ ಶ್ರವಣದಲ್ಲಿ।
ಹರಿಯಾ ಸೇವೆ ಅಂಗದಲ್ಲಿ ೧

ಹರಿಭಕ್ತಿಯೊಳು ಕೂಡಿ ।
ಹರಿ ಕೀರ್ತನೆಯ ಮಾಡಿ ।
ಹರಿ ಪ್ರೇಮ ತುಳಕಾಡಿ ।
ಹೊರಳುವ ನಲಿದಾಡಿ ೨

ತಂದೆ ಮಹಿಪತಿ ದಯಾ
ದಿಂದ ಪಡೆದು ವಿಜಯಾ
ಹೊಂದುವ ತಿಳಿದು ನೆಲಿಯಾ
ಛಂದವಾದಾ ಪುಣ್ಯಕಾಯಾ ೩

## ೧೧೫

ಅವತಾರ ಹರಿಯ ವಿವರಿಸೆ ಬ್ರಹ್ಮಗಳ ಅಳವಲ್ಲಾ ಪ

ಸುರಿವ ಮಳೆ ಹನಿ ಎಣಿಸಬಹುದು
ಧರಣಿಯ ರಜ ಕಡಗಣಿಸ ಬಹುದು
ಪರಮಾಣು ವರ ವೆಣಿಸಬಹುದು ೧

ತಾರೆಯ ಲೆಖ್ಖವ ಹಿಡಿಯಲು ಬಹುದು
ನೀರಸ್ವಿಯ ಮಾಪವ ಮಾಡಬಹುದು
ಮೇರುಗಿರಿ ತೂಗಿ ನುಡಿಯ ಬಹುದು ೨

ಅನಂತ ಗುಣಗಣ ನಿಲಯನುಯನಿಸಿ
ಘನಗುರು ಮಹಿಪತಿ ಪ್ರಭು ಅವತರಿಸಿ
ಅನುಚರರ ಹೊರೆವನು ಕರುಣಿಸಿ ೩

## ೧೧೬

ಈತ ಸೀತಾನಾಥನೇ।ವಾತಾಜಾತ ಪ್ರೀತನೇ।
ಧಾತು ಮಾತು ರಹಿತ ಖ್ಯಾತ।ಭೂತವ್ರತದಾತನೆ ಪ

ಸುಗ್ರೀವಗೆ ಸಾಮಗ್ರನೆ।ಶೀಘ್ರಗೈದನುಗ್ರಹನೆ।
ನಿಗ್ರಹಿಸಿದಾ ವಾಘ್ರದಶಾ।ಗ್ರೀವನುಗ್ರಹ ವಿಗ್ರಹನೆ ೧

ಕಾಮನಿವಾನೇಮನೆ।ನಾಮಸಾರ್ವಭೌಮನೆ।
ರಾಮಶ್ಯಾಮ ಮಹೀಪತಿನಂದನ।ಹೃತ್ಕುಮುದಾ ಸೋಮನೆ ೨

## ೧೧೭

ಎಂಥಾ ಮೋಹನನೇ ನೋಡಮ್ಮಯ್ಯಾ।
ಸಂತತ ತೃಪ್ತನು ಬಾಲಕನಾದಾ।ಅ–
ನಂತ ಚರಿತೆಯಾ ದೋರುವ ಕೃಷ್ಣ ಪ

ಮೂಡಣ ದೇಶಕೆ ಪಡರಲು ಗೋಪಿಯು।
ತಡೆಯದೆ ದುಮುಧುಮು ಧುಮುಕೆನುತ।
ಕಡೆಯಲು ಧುಡು ಧುಡು ಧುಡುನಡೆಯುತ ಬಂದು।
ಪಿಡಿದೆನ್ನ ಸೆರಗ ಬೆಣ್ಣೆ ಬೇಡುವಾ ಕೃಷ್ಣ ೧

ಸಮಗೆಳೆಯರ ಸಂಗಡ ಧ್ವನಿವೇಣಿಯ।
ಉಮಟೆಸುತಲಿ ಧಿಗಿಧಿಗಿಲೆನುತಾ।
ಧಿಮಿಕಿಟ ಧಿರಕಿಟ ತಿರುಕಿಟವೆಂಬೋ।
ಕ್ರಮದಿ ವಾದ್ಯವ ಬಾರಿಸುವಾ ಕೃಷ್ಣ ೨

ಗುರು ಮಹೀಪತಿ ಪ್ರಭುವಿನ ಪದರಜ।
ದೊರಕದು ಅಜಭವ ಮುಖ್ಯರಿಗೆ!
ಹರುಷದಿ ತೋಳ್‌ದೊಡೆ ಮೇಲೆ ಓಡಾಡುವಾ।
ಧರೆಯೊಳು ಯಶೋಧೆ ಸುಕೃತವೆಂತೋ ೩

## ೧೧೮

ನಾಥದೀನಾನಾಥ ಸದ್ಗತಿ।ದಾತ ನೋಡಿರೋ।ಭವ।
ಭೀತರ ಪತಿತರೆ ಪುನೀತಮಾಡುವ ನೀತನೆ।ರಘು। ಪ

ಹವಣದಿ ತಾನಾರೆ ಸವಿಧ್ವಣ್ಣುಗಳನ್ನು।
ತವಕದಿ ಜಾನಕಿಧಮುಗರ್ಪಿತವೆನೆ।

ಅವನಿಲಿ ಶಬರಿಗೆ ಘವಿಘವಿಸುತ್ತಿಹ।
ಅವಿರಳ ಪದದನುಭವ ನೀಡಿದ।ರಘು...... ೧

ದಾವನ ಶ್ರುತಿಗಳು ಭಾವಸಿ ನುಡಿಯಲು।
ದೇವನ ಹಿತಕುಜ ಕೇವಲ ವನಜರ।
ಜೀವರೊಳಾಡುತ ಸೇವೆಗೆ ನಲಿಯುತ।
ಕೈವಿಡಿದಿತ್ತನು ಕೈವಲ್ಯವ।ರಘು...... ೨

ಕುಂದದೆ ಬಾಂಧವ ನಿಂದಿಸಿ ನೂಕಲು।
ನೊಂದುವಿಭೀಷಣ ಬಂದರೆ ಶರಣವ।
ತಂದೆ ಮಹೀಪತಿ ನಂದನ ಪ್ರಭು ಆ।
ನಂದದ ಸ್ಥಿರಪದ ಹೊಂದಿಸಿದಾ।ರಘು..... ೩

## ೧೧೯

ನಮ್ಮ ರಂಗ ಮಥುರೆಗೆ ನಡೆತರಲು ಪ

ಮಥುರೆಗೆ ನಡೆತರಲು ಅತಿ।ಹರುಷದಲಿ ಅಕ್ರೂರನೊಡನೆ।
ರಥದಲಿ ಕುಳಿತು ಘಡ ಘಡಘಡಲೆಂದು।
ಪಥದಲಿ ನಡಸ್ಯಾಡುತಲಿ ೧

ಬಿಲ್ಲಹಬ್ಬದ ನೆವದಲ್ಲಿ।ಫುಲ್ಲಲೋಚನ ಮೋಹನ ಕೃಷ್ಣ।
ಇಲ್ಲಿಗೆ ಬಂದನು ಎನುತಲಿ ಕೇಳಲು।
ಎಲ್ಲರು ನಡೆದರು ನೋಡಲಾಗಿ ೨

ಆಲಯದೊಳಗೆ ನಿಲ್ಲದೇ।ಬಾಲಕಿಯರು ತಮತಮ್ಮ।
ಚಾಲವರುತಿಹಾ ತೊಟ್ಟಿಲೊಳಗಿನಾ।ಬಾಲಕರಿಗೆ ಮೊಲೆಗುಡದೆ ೩

## ೫೬

ಜಯಜಯವೆಂದು ಶರಣೆನ್ನಿ ಹನುಮಯ್ಯಗ ।
ಜಯ ಭೀಮಶೇನಾನಂದ ತೀರ್ಥರೇಯಗ ಪ

ಆದಿಲಿ ಅಂಜನಿ ಉದರದಲಿ ಬಂದಾ ।
ಸಾದರ ರಘುಪತಿ ಸೇವೆಯಲಿ ನಿಂದಾ ।
ಶ್ರೀದೇವಿ ಸುದ್ದಿ ಶರಧಿಯ ದಾಟಿ ತಂದಾ ।
ಭೇದಿಸಿ ರಾವಣನಾ ದಳವೆಲ್ಲಾ ಕೊಂದಾ ೧

ಎರಡನೇ ರೂಪದಿ ಕುಂತಿ ಉದರದಲಿ ಬಂದಾ
ಸಿರಿಯಾದವರಾಯನ ಭಕುತಿಗೆ ನಿಂದಾ
ತರಿ ತರಿದೊಟ್ಟದಾ ಕುರುಕುಲಾನ್ವಯ ವೃಂದಾ
ಅರಸ ಯುಧೀಷ್ಠಿರನಾ ವಾಸಿಯ ತಂದಾ ೨

ಮೂರನೇ ರೂಪದಿ ಮಧ್ಯಗೇಹದಿ ಬಂದಾ
ನೆರೆ ಬಾದರಾಯಣನಾಜ್ಞೆಲಿ ನಿಂದಾ
ವರವರದ್ವೇಳಿದ ತತ್ವಾರ್ಥ ಛಂದಾ
ಗುರುವರ ಮಹಿಪತಿ ನಂದನ ಮನಕಾನಂದಾ ೩

## ೫೭

ನಮೋ ನಮೋ ಮುಖ್ಯ ಪ್ರಾಣ ನಾಥನೇ
ನಮೋ ಜಗದೊಳು ಪ್ರಖ್ಯಾತನೇ ಪ

ಧರಣಿ ಸುತೆಯ ಮುಖ ಚಂದ್ರಚಕೋರನಾ
ಸಿರಿ ಚರಣಾಂಬುಜ ಭೃಂಗಾ
ಸುರವರರಿಯ ತಂದೆಯ ಮಾವನ ಸಂ
ಹರಿಸದೆ ವಾನರ ತುಂಗಾ ೧

ತಾಯಿಯ ಮರೆವ ಶಿಶುವಿನ ಪರಿದಣಿದೆನಾ
ಪ್ರೀಯದಲಿ ಸಲಹವು ಅವಗುಣ ನೋಡದೇ ೧

ಧರೆಯೊಳಗ ಸಕಲಪತಿತರನ್ನು ಉದ್ಧರಿಸಲ್ಕೆ
ಪರಬೊಮ್ಮತಾನೊಂದು ರೂಪನಾಗಿ
ಕರುಣದಿಂದಲಿ ಅವತರಿಸಿದನೆಂದೆನ್ನದೆ
ನರನೆಂದು ಬಗೆವವನು ಗುರುತಲ್ಪಕಾ ೨

ಸಾಕಾರ ನಿರ್ಮ್ಮಲನಾಗಿ ಕ್ರೀಡಿಸಿದರೆಯು
ಏಕ ಮೇವಾದ್ವಿತಿಯು ಶೃತಿಯೆನುತಿರೇ
ಕಾಕು ಬುದ್ದಿಯಲಿ ಪರತರ ವಸ್ತು ನಿಮಗೆಂದ
ಧಿಕ ಉಂಟೆಂಬುವ ಸುರಾಪಾನಿಯು ೩

ಗಗನದಂದಲಿ ಸಕಲಾತೀತನಾಗಿನೀ
ಮಿಗಿಲೆನಿಸಿ ಸಂಸಾರ ಸ್ಥಿತಿಯಲಿರಲು
ಅಗಣಿತತೆ ಗುಣಬಂದನವ ಕಲ್ಪಿಸುವ
ಜಗದೊಳಗ ಬ್ರಹ್ಮತ್ಯಕಾರನವನು ೪

ಎನಗ ತಾರಕ ವಸ್ತು ಇದೆಯೆಂದು ನಿಶ್ಚೈಸಿ
ತನು ಮನರ್ಪಿಸಿ ನಿಮ್ಮ ಚರಣಾಬ್ಜಕೆ
ಘನನಂಬಿ ಶರಣವನು ಪೊಕ್ಕುನೆಲೆಗೊಂಬುದಕೆ
ಅನುಮಾನ ವಿಡಿವವನ ಸ್ವರ್ಣಸ್ತೇಯಾ ೫

ಇಂತು ಪರಿಯಾದಾ ನಾಲ್ವರ ಸಂಗಡದಲಿ ಅ
ತ್ಯಂತ ಹರುಷದ ತಾವ ಬಾಳುತಿಹನು
ಅಂತಿಜನ ಸಮನಾದ ಸರ್ವದ್ರೋಹಿಯವನು
ಸಂತತ ಬುಧ ಜನರು ಯನುತಿರುವರು ೬

ಎಂದೆಂದು ಈ ಪಂಚ ಮಹಾಪಾತಕಿಳಗಳ ಮುಖ
ತಂದೆ ತೋರಿದಿರೆನ್ನ ನಯನಗಳಿಗೆ
ಎಂದು ಬಿಡದೇ ಕಾಯೋ ಮಹಿಪತಿ ಸುತ ಪ್ರಾಣ
ಛಂದದಲಿ ಮಂದಮತಿ ತನ ಹರಸಿಯನ್ನಾ ೭

## ೧೨೧

ಅಹುದಹುದನಾಥ ಬಂಧು
ಅಹುದಹುದನಾಥ ಬಂಧು।ಅನುಪಮ್ಯ।
ಮಹಿಮೆ ಕಾರುಣ್ಯಸಿಂಧು।
ಏನೆಂದು ಪೇಳಲೆಮ್ಮಾ।ಈ ದಯಕ।
ತಾನು ಪಮೆ ಇಲ್ಲವಮ್ಮಾ।
ನ್ಯೂನಾರಿಸದೆ ಬಂದನು,ಕ್ಷಮೆಯಿಂದ।
ತಾನಾಗಿ ಸಲಹುತಿಹನು।
ಜ್ಞಾನವಿಲ್ಲದೆ ತರಳನೆಂದಪೇಕ್ಷಿಸದೆನ್ನ।
ಮನ ನೆನೆವಿನೊಳಗಿಟ್ಟು ತನ್ನ ಅಂಘ್ರಿಯದಾ ೧

ಪತಿತರೊಳು ಪತಿತ ಅಧಮಾ।ಅಮೂಲ್ಯ।
ಪತಿಹೀನ ಮೂಢ ಪರಮಾ।
ಸುತ್ತ–ಭಕುತಿ ಮಾಡಲರಿಯೆ।ಚತೆರ ಸಂ।
ಸ್ಕೃತ ಮಾತನಾಡಲರಿಯೇ।
ಗತಿಗೈದರೊಂದೊಂದು ವ್ರತದಿ ಮೊದಲಾದವರು।
ಕ್ಷಿತಿಯೊಳಗೆ ಎನ್ನಂಥ ಶೂನ್ನರಾರಮ್ಮ ೨

ನೆಲಿಗೆ ಮುಯ್ಯಕ ಮುಯ್ಯವು।ಈ ತೆರದಿ।
ಸಲೆ ನಡೆತಿ ಉಂಟು ಕೆಲವು।

ಕೊಳದೆ ಕೊಡುವವರಿಂದಿಗೆ।ಆರಿಲ್ಲಾ।
ನಳಿನಜೇಂದ್ರಾದ್ಯರೊಳಗೇ
ಒಲಿದು ಮಹೀಪತಿ ಸುತನ ಕರವಿಡಿದು ತನ್ನ।
ದಾಸರ ದಾಸ ದಾಸನೆನಿಸಿದ ಬಿರದಿಗಿಂದು ೩

## ೧೨೨

ಅಹುದಹುದು ದೀನ ಬಂಧು
ಅಹುದಹುದು ದೀನಬಂಧು।ಶ್ರೀ ಕೃಷ್ಣ।
ಸಹಕಾರಿ ಶರಣ ಜನರಾ ಹರಿಯೇ ಪ

ಕಪ್ಪೆಮರಿ ಅಂದರೇನು।ಕಾಯ್ದಿರುವಾ।
ಅಪ್ಪವಿನೋಳು ಬಳಲುತ।ಹರಿಯೇ।
ಸರ್ಪಶಯನೆಂದು ಕರೆಯೆ।ಬಂದೊದಗಿ।
ಒಪ್ಪಿಕೊಳ್ಳಬೇಕು ದಯದಿ ಹರಿಯೇ ೧

ಪಕ್ಷಿತತ್ತಿಯು ಬೀಳಲು।ಭಾರತ ಮಹಾ।
ಅಕ್ಷೋಹಿಣಿ ರಣದಲಿ ಸಲವೆಂದು।
ಲಕ್ಷಣದಿ ಗಜ ಘಂಟೆಯಾ।ನೀ ಕೆಡಹಿ।
ರಕ್ಷಿಸಿದ ಮುಸುಕಿ ಅವರ ಹರಿಯೇ ೨

ಕಬ್ಬುಲಿಗ್ಯಾತದ ರೂಪದೀ ಕಪಟದಲೀ।
ಒಬ್ಬರಾಯನ ಕನ್ಯೆಯಾ ಭೋಗಿಸುತ।
ನಿಬ್ಬುರಕ ನಿನ್ನ ನೆನೆಯೇ।ಗತಿಗೊಟ್ಟು।
ಉಬ್ಬುಸವ ಕಳೆಯಲಿಲ್ಲದೇ ಹರಿಯೇ ೩

ವ್ಯಭಿಚಾರಿ ಗಣಿಕೆ ತಾನು।ಧನವೀವ।
ಪ್ರಭುಗಳೊಂದಿನ ಕಾಣದೇ ವಿರಕ್ತಿಯಲಿ।

ವಿಭುನಿನ್ನೀ ಕೀರ್ತನೆಗಳಾ ಮಾಡಲಿಕ್ಕೆ।
ಅಭಯ ಪದವಿತ್ತೆ ಬೇಗ ಹರಿಯೇ ೪

ಹಿಂದಾದ ಕಥಿಗಳಿವನು।ಅಹುದಲ್ಲೋ।
ಎಂದಾರು ಬಲ್ಲರಯ್ಯಾ ಮಹಿಪತಿ।
ಕಂದರೊಡೆಯನೇ ಎನ್ನ ಕೈ ಪಿಡಿದ।
ರಿಂದು ನಿಜವೆಂಬೇ ನಾನು ಹರಿಯೇ ೫

೧೨೩

ಅಂದೇನಿಂದೆನುತಾ ಪ

ಒಂದು ಮನದಿ ನಿಂದು ನಂಬ ಬಲ್ಲಡೆ ಸಾಕು।ತನ್ನ।
ಹೊಂದಿದವರ ಕಾವಾ ಇಂದಿರೇಯರಸನು ಅ.ಪ.

ಸಗರ ಕಾರ್ತೀಕನು ಭಗೀರಥ ಮೊದಲಾದಾ।
ಸುಗುಣ ರಾಯರನುದ್ಧರಿಸಿಹ।
ಜಗದೊಳೀ ಪಾಮರ ಲೋಕದ ಕುಂದವ।
ಬಗೆಯದೇಪಾವನ ಮಾಡುವ ಗಂಗೆಗೆ ೧

ರನ್ನಗಣಕು ಪರೀಕ್ಷೆ ಮುಖ್ಯರಾಗಿಹ।
ಮನ್ನಣೆಯವರನು ಎಚ್ಚರಿಸಿ।
ಮುನ್ನಿನ ಬೋಧಧಿ ಭಾವಿಕ ಸಾಧಕ।
ರನ್ನು ತಾರಿಸುವ ಸತ್ಸಂಗ ಮಹಿಮೆಗೆ ೨

ಹಿಂದಿನ ಶರಣರ ಸಲಹಿದ ದೇವರಿ।
ಗಿಂದೇನು ಮಹಿಮೆಗೆ ಬಲ್ಲವಿಲ್ಲದೇ।

ತಂದೆ ಮಹಿಪತಿ ಸ್ವಾಮಿಯ ನಾಮವ।
ಛಂದದಿ ನೆನೆಯುತ ಇಹಪರ ಪಡೆವುದಕ ೩

## ೧೨೪

ಅಂಥವನಲ್ಲಾ ಕಾಣಿರೇ ಸಂತತ ತೃಪ್ತಾ ಪ

ಹಸಿದರೆ ಬಂದು ಬೇಡಿ ತುಸು ಹಾಲು ಕೊಳ್ಳಲರಿಯಾ
ಮೊಸರಾಲು ಕುಡಿಯ ಬಲ್ಲನೇ ನಮ್ಮ ಶ್ರೀರಂಗಾ ೧

ಗಡಿಬಿಡಿಯನ್ನಾಲಾಗ ವಡನೆಂಜಿಸಾರುವ
ಕಡೆವ ಬೆಣ್ಣೆಯ ಮೆಲುವನೇ ೨

ತರಳರ ಕೂಡ ಹೋಗಿ ಬರಲು ಹಾದಿ ತಪ್ಪವ
ಕೇರಿ ಕೇರಿತಿರುಗಬಲ್ಲನೇ ೩

ಹೊಸ ಮೋರೆ ಕಾಣಲು ಕುಸಿದು ತಲೆ ಬಾಗುವ
ವಿಷಯಕ್ಕೆ ನಿಮ್ಮ ಯಳೆವನೇ ೪

ಅಡಿಯಿಡ ವೃತ–ಕಾಲ ತೊಡಕಿತಾ ಬೀಳುವಾ
ತುಡುಗದಿ ಓಡ ಬಲ್ಲನೇ ೫

ಹಡೆದಾ ಮಕ್ಕಳು ನಿಮಗ ಪೊಡವಿಯೊಳಿಲ್ಲವೇನೇ
ಬಿಡ ನುಡಿಗವ ಸಲ್ಲನೇ ೬

ಗುರು ಮಹಿಪತಿ ಸ್ವಾಮಿ ಸರಸಾಟಕವತಾಳಿ
ಚರಿಸುವ ಅಂತದೋರನೇ ೭

## ೧೨೫

ಆರೇ ಸುಳಿದವನಿಂದು।ನೀರೇ ತಂದುವನ ತೋರೇ ಪ

ನೀಲಮೇಘದ ಕಾಂತಿಮೈಯ್ಯಾ।ನೋಡೇಮದನಯ್ಯಾ।
ಕಾಲಲುಂದಿಗೆ ಹೆಜ್ಜೆಘಿಲು ಘಲುಕೆನುವಾ।
ಮೇಲು ಪಿತಾಂಬರ ಝಳ ಝಳಿಸುವ ನವನಾರೇ ೧

ಮೆರೆವ ವಡ್ಯಾಣ ಘಂಟೆಸಿರಿಯಾ।ಕವಿಹೊಗಳಲರಿಯಾ।
ಬೆರಳುಂಗುರ ಕಡಗ ಕೇಯೂರಾ।
ಕೊರಳ ಕೌಸ್ತುಭ ಮಾಲೆಯ ಹೊರವನಾರೇ ೨

ಕಡೆಗಣ್ಣನೋಟ ಪದುಮದೆಲಿಯೋ।ಮೋಹನದಾಬಲೆಯಾ।
ಎಡಬಲ ಕುಂಡಲ ಹೊಳೆವ ಕಪೋಲಾ।
ಇಡಿದನೇ ನಗೆಯ ಸುನಾಶಿಕ ಸರಳವನಾರೇ ೩

ಮೃಗದ ಪಣಿಯಾಲುಂಗುರ ಗುರುಳೋ।ಕಾವನಸರಳೋ।
ಝಗಝಗಿಸುವ ರನ್ನ ಮುಕುಟದ ಚೆಲುವಾ।
ಬಗೆ ಬಗೆ ಸೊಬಗಿನ ನವರಸಗರೆವನಾರೇ ೪

ತರುಣೀ ಮುನ್ನಿನಸುಕೃತಬಂದು।ವದಗಿ ತಾ ಇಂದು।
ಗುರು ಮಹಿಪತಿ ಪ್ರಭು ಚರಣವದೋರಿ।
ಮರುಳೆನ್ನಾ ಮಾಡಿದ ದೀನೋದ್ಧಾರಿವನಾರೇ ೫

## ೧೨೬

ಅರೋಗಣೆಯ ಮಾಡೋ ವಾರಿಜರಮಣಾ।
ಸಾರಿದವರಿಗೆ ಅಭಯವನೀವಕರುಣಾ ಪ

ಪೊಂಬ್ಬರಿವಾಣದಿ ರನ್ನಬಟ್ಟಲುಗಳು।
ಅಂಬುಜಾನನರಿಸಿ ಲಕುಮಿಯವೆರಸಿ ೧

ಪರಿಪರಿ ಮಾವಿನ ತನಿವಣ್ಣಳ ನೋಡಿ।
ಮೆರೆವ ಸುದ್ರಾಕ್ಷ ದಾಳಿಂಬರ ಸವಿಯಾ ೨

ಶಾಲ್ಯೋದನ್ನದಿ ಸುಘೃತ ಪರಿಪರಿಯ ವಿ।
ಶಾಲ ಶಾಖಂಗಳ ಸವಿಯನೆ ಕೊಳುತಾ ೩

ಪಂಚ ಭಕ್ಷ್ಯವು ಕೆನೆವಾಲು ಸೀಕರಣಿಯು।
ಮುಂಚೆ ಶರ್ಕರದ ಪಾಯಸ ಪರಿಪರಿಯ ೪

ದಧ್ಯೋದನ್ನದಲುಹಗಾಯಿ ಸ್ವಾದಿಸುತಾ।
ಸದ್ವಿದ್ಯದ ಮನ ಕಲ್ಪತರುವೆಲ್ಲಾ ೫

ಪತ್ರಸುಮನ ಫಲತೋಯಭಕ್ತರುಕೊಟ್ಟ।
ರರ್ಥಿಲಿ ಕೊಂಬೊ ದಯಾಳುತನದಲ್ಲಿ ೬

ತಂದೆ ಮಹೀಪತಿ ನಂದನ ಸಾರಥಿ।
ಎಂದೆಂದು ಸ್ಮರಣೆಗೊದಗಿ ಮುದ್ದು ಮುಖದಿ ೭

## ೧೨೭

ಆರೋಗಣೆಯ ಮಾಡೋ ಮುಕುಂದಾ ಪ

ಆರೋಗಣೆಯ ಮಾಡೋ ವಾರಿಜರಮಣಾ
ಸಾರಿದವರಿಗೆ ಭಯನಿವಾಕರದಿ ೧

ಪೊಂಬ್ಬರಿವಾಣದಿರನ್ನ ಬಟ್ಟಲುಗಳು
ಅಂಬುಜಾನನಸಿರಿ ಲಕುಮಿಯವೇರಿಸಿ ೨

ಶಾಲ್ಯೋದನಸೂಪಘೃತ ಪರಿಪರಿಯಾ
ಶಾಲ್ಯಾಶಾಖಂಗಳಸವಿಯನೆ ಕೊಳುತಾ ೩

ಪಂಚಭಕ್ಷವು ಕೆನೆಹಾಲು ಸೀಖರಿಣಿಯಾ
ಮುಂಚೆ ಪಾಯಸಪರಿಪರಿಶರ್ಕರದಲಿ ೪

ದದ್ಯೋದನದಲುಪಗಾಯಿಸ್ವಾದಿಸುತ
ಸದ್ವಿದ್ಯ ದಮನ ಕಲ್ಪಿತರುವೆಲ್ಲಾ ೫

ಪತ್ರಸುಮನತೋಯ ಭಕ್ತರು ಕೊಟ್ಟು
ದರ್ಥಲಿ ಕೊಂಬ ದಯಾಳುತನದಲಿ ೬

ತಂದೆ ಮಹಿಪತಿ ನಂದನ ಸಾರಥಿ
ಎಂದೆಂದು ಸ್ಮರಣೆ ಗೊದಗಿ ಮುದ್ದು ಮುಖದಿ ೭

## ೧೨೮

ಆರು ನಿನ್ನಂಘ್ರಿ ಭಜಿಸುವರ್‍ಯೆಯ್ಯಾ
ಸಾರಹೃದಯರ ಪ್ರೀಯ ಸುರಮುನಿಜನ ಧ್ಯೇಯಾ ಪ

ಕಮಲಭವಶಿವ ಇಂದ್ರ ನೀನಾಗೇನು
ರಮೆ ಧರಾದೇವಿ ರಮಣಾದರೇನು
ಯಮದೂತರೊಳಗಾದ ಅಜಮಿಳ ಪೆಸೆ ರ‍್ಹೊಳೆ
ಸುಮನಿಸುರ ನಯ್ಯುವನ ಕಾಯದಿದ್ದೊಡೆ ೧

ಜಗದುತ್ಪತ್ತಿ ಸ್ಥಿತಿಲಯ ಕರ್ತನಾಗೇನು
ಮಗುಳೆ ಸೂತ್ರಧಾರಿಯಾದರೇನು
ಸುಗುಣ ಪ್ರಲ್ಹಾದಂಬರೀಷ ಕರಿವರ
ಧ್ರುವಾದಿಗಳನುದ್ಧರಿಸಿ ತಾರಿಸದಿದ್ದಡೆ ೨

ಎಂದೆಂದು ಅರ್ತಜನ ಬಂದು ದೀನಾನಾಥ
ತಂದೆ ಮಹಿಪತಿ ಸ್ವಾಮಿಯಂದಡೇನು
ಮಂದಮತಿ ಕುಂದಘನವಂದು ನೋಡದ್ದೆ
ಇಂದು ನಂದನಗೆ ಸೇವೆ ಪದಲಿಡದಿದ್ದರೆ ೩

## ೧೨೯

ಆವ ಪುಣ್ಯವ ಮಾಡಿದಳೋ ಮುನ್ನ ಗೋಪಿ ನೋಡಮ್ಮಾ ಪ

ಆವ ಪುಣ್ಯ ಮಾಡಿದಳೋ ಮುನ್ನ ಗೋಪಿ ನೋಡಮ್ಮಾ
ದೇವ ದೇವೋತ್ತಮನಾದ ಕೇವಲ ಪರಬ್ರಹ್ಮ।
ದೇವಿಮಗನಾಗಿ ಬಂದಿಹನೆ ನರರಂದದಿ ನಮ್ಮಾ
ಭಾವಿಸಿ ಬ್ರಹ್ಮನ ಜನಕನ ಶಿಶುವೆಂದು
ಮುದ್ದಾಡಿಸುವಾ ಸಂಭ್ರಮಾ ೧

ಮುಖಸಾರಭೋಕ್ತನಿಗೆ ಮೊಲೆ ಹಾಲನುಣಿಸಿ।
ಅಕಳಂಕ ಮೂರುತಿಯ ಸಲೆ ಮಜ್ಜನ ಗೈಸಿ।
ಪ್ರಕಟಿದಿ ಶೇಷಶಾಯಿಗೆ ತೊಟ್ಟಿಲದಿ ಮಲಗಿಸಿ।
ಸುಖಯೋಗ ನಿದ್ರೆಯುಳ್ಳಂಗೆ ಮಲಗೆಂದು
ಜೋ ಜೋ ಎಂಬಳಾಕೆ ೨

ಆವ ಯೋಗ ಮಾಯದಲಿ ಮೂಜಗವಾಡಿಸುವ।
ಆವ ಮುಂಜರಗ ಸಿಡಿದು ಬೆಣ್ಣೆ ಬೇಡುತ ಕುಣಿವಾ।
ಆವನುದರದಿ ಬ್ರಹ್ಮಾಂಡವು ಗೋಪಿ ಕೈಯೊಳಾಡುವಾ।
ಆವನಲಿ ಮಹಿಪತಿ–ಸುತ ಪ್ರಭು ಲೀಲೆಯ ಕಣ್ಣಲಿ
ನೋಡಿ ಸುಖಿಸುವಾ ೩

## ೧೩೦

ಇದೇನಿದೇನು ನಿನ್ನ ಪದವ ನಂಬಿದವ ಗೆಡರು
ಬಾಧಿಸು ವದೇನು ಪ

ಅವನ ಬದಿಯಲಿ ಗರುಡ ಮಣಿಯಿರೆ।
ಹಾವಿನ ಗರಳವ ಏರುವದೇ।
ಆವಾಗು ಅಮೃತ ಕಲಶ ಮನೆಯೊಳಿರೆ।
ಸಾವಿನ ಭಯದಿಂಬಳಲುವರೇ ರಂಗಯ್ಯಾ ೧

ಹನುಮನ ಪರಿಚಾರಕರಿಗೆ ಬೆಂಬತ್ತಿ
ಬಿನಗು ಭೊತಂಗಳು ತಟ್ಟುವವೇ
ಅನಳನ ಹೊರಿಯಲಿ ಕುಳಿತಿರೆ ಹಿಮದಿಂದ
ತನುಗುಗ್ಗರಿಸಿ ಬಿದ್ದು ಎರಗುವ ದೇನಯ್ಯಾ ೨

ನಿನ್ನವ ನೆನಿಸಿರೆ ಎನಗ ದುರಿತ ಬಂದು।
ಬನ್ನ ಬಡಿಸೆ ಕುಂದ ನಿನಗಲ್ಲವೇ
ಎನ್ನವ ಗುಣಗಳ ನೋಡದೆ ರಕ್ಷಿಸು
ಸನ್ನುತ ಮಹಿಪತಿ ನಂದನ ಜೀವನ ೩

## ೧೩೧

ಇದೋ ಬಂದಾನೇಳೇ ಭಾವೇ ನಿನ್ನರಸಾ।
ಮುದದಿ ಪ್ರಾರ್ಥನೆಯ ಮಾಡಿ ಕರೆತಂದೆನೀಗ ಪ

ನೊಸಲಲಿ ಇಟ್ಟ ಕಸ್ತೂರಿ ರತ್ನಮಯದಿಂದ।
ಪೊಸಪರಿಯ ಕಿರೀಟವಧರಿಸಿ।
ಎಸೆವ ಕುಂಡಲದಿಂದ ಪೊಳೆವಾಕದಪುಗಳು।
ಬಿಸಿರು ಹದಳ ನೇತ್ರಲೊಪ್ಪುತ ನಮ್ಮ ೧

ತುಂಬಿಯಂತೆ ವಳೆಕಾವಳಿ ಶೋಬಿ।
ತುಂಬಜ ಮುಖ ಅತಿ ಸುಂದರ ರೂಪಾ।
ಕಂಬುಕಂದರದಲಿ ಹಾರದಾ ಕೌಸ್ತಭ ಮಾಲೆ।
ಅಂಬುಜಧರ ನೋಡು ಅರನಗೆ ನಗುತ್ತಾ ೨

ಗರುಡನ ಮ್ಯಾಲೇರಿ ಕೊಂಡುತಾಹರುಷದಿ।
ಪರಮ ಪಾವನೆ ಕೇಳು ಸದ್ಭಕುತಿಂದ।
ಧರೆಯೊಳಾರಾರು ಕರೆದರೆ ಬಪ್ಪುವೆನೆಂಬ।
ತೆರ ತೋರಿಸಲು ಮಹಿಪತಿ ನಂದ ನೊಡೆಯಾ ೩

## ೧೩೨

ಇನ್ಯಾಕೆ ದೇವಿ ಮುನಿಸು ಮಾತಾಡೇ।
ನಿನ್ನ ಹಿಡಿದ ಛಲ ಗೆಲಿಸಿದ ಬಳಿಕ ಪ

ಘನ ಮಳೆಗರವ ಜೀಮ್ಯೂತಮ್ಯಾಲೇ।ತಾ।
ಮುನಿಪ ಕೋಪದಿ ಪೋಗುತಲಿಹ।
ಮನ ದೊಳಗಿದ್ದ ಚಾತಕನಂತೆ ನಿನ್ನ ಮ್ಯಾಲೆ।
ವನರುಹ ನೇತ್ರ ನಾ ಮುನಿದುದು ಕಾಣೆ ೧

ಸಂಗತಿಲ್ಲದೆ ನಿನ್ನಾಂಗ ನಟ್ಟುಳಿಯಿಂದ।
ಹಿಂಗದೆ ಮನಸೆನ್ನ ಭಂಗ ಗೊಂಡಿಹುದು।
ತುಂಗ ಪಯೋಧರೆನ್ನಂಗ ತೋಷಿಸುವ ತಾ।
ಲಿಂಗನ ಗೈಯೆ ನೀ ಮಂಗಳವದನೇ ೨

ನಿನ್ನಿಂದಾಗಲಿ ಮತ್ತ ನನ್ನಿಂದಾಗಲಿ ಇನ್ನು
ಮುನ್ನಾದ ಮನದ ಗಂಟು ಬಿಟ್ಟು।
ಪನ್ನಗವೇಣಿ ಮಾತಾಡೇ ಸದ್ಗುಣದ ಸಂ।
ಪನ್ನೇ ಮಹಿಪತಿ ಸುತಗೊಲಿದ ಶ್ರೀದೇವಿ ೩

## ೧೩೩

ಇವನಾ ನೆಲೆಗಾಣೆ ನಮ್ಮಯ್ಯಾ ಸಣ್ಣವನೇ ಪ

ಒರಳವನೆಳೆದೊಯ್ದು ಮರಗಳ ಕೆಡೆಹಿಡಿದ।
ಭರದಿ ಪೂತನಿಯಸುವ ಹೀರಿದಾ ನಮ್ಮಯ್ಯಾ ೧

ಬೇರಳಲಿ ಗಿರಿಯೆತ್ತಿ ತುರುಗಳ ಕಾಯ್ದಾ।
ತೆರೆದು ಬಾಯೊಳು ಜಗವ ತೋರಿದ ನಮ್ಮಾಯ್ಯಾ ೨

ವೇಣುನಾದ ಮಾಡಿ ತೃಣಪಶು ಮೊದಲಾದ।
ಏಣಾಕ್ಷಿಯರ ಮನವಾ ಭ್ರಮಿಸಿದಾ ನಮ್ಮಯ್ಯಾ ೩

ಕಾಳಿ ಮಡುವ ಹೊಕ್ಕು ಕಾಳಿಂಗನೆಳೆತಂದಾ।
ಲೀಲೆ ತೋರಲು ಹರಿ ಉದಿಸಿದ ನಮ್ಮಯ್ಯಾ ೪

ಗುರುಮಹಿಪತಿ ಸ್ವಾಮಿ ಸುರುತರು ಎನಗಾದಾ।
ನರನೆಂಬವರ ಬಾಮಾ ಬಿಗಿಸಿದ ನಮ್ಮಯ್ಯಾ ೫

## ೧೩೪

ಇವ ನೋಡಮ್ಮಾ ಮಾನವನೆ।ಅವತರಸಿಹ ತ ಮಾಧವನೇ ಪ

ಹಲವು ನಾರೇರೊಳಗ ಕೂಡಿ।ಹಲವು ರೂಪಾದನು ನೋಡಿ।
ಕೊಳಲೊಳು ಬೋಧ ಸ್ವರದಿ ಪಾಡಿ।
ನಲಿದಾಡುವ ಸ್ವಸುಖ ನೀಡಿ ೧

ಅವಿದ್ಯ ವಿಷಮಡುವನೆ ಕಲಕಿ।ಬವರದಿ ಹಮ್ಮಿತುರಗ ತುಡಕಿ।
ತವೆ ವಾಸನೆ ಹಡೆಗಳ ಕುಸುಕಿ।
ಜೀವನಮೃತ ಮಾಡಿದ ಬಳಿಕಿ ೨

ಭವಭಜಗರ ಮುಖದೊಳಗಾದಾ।ನವವಿಧ
ಗೋವಳರನು ತೆಗೆದಾ।
ಕವಿಗುರು ಮಹಿಪತಿಜನ ಹೊರದಾ।
ಭುವನದಿ ಗೋಕುಲದಲಿ ಮೆರೆದಾ ೩

## ೧೩೫

ಇಂದ್ಯಾಕ ಬಾರನಮ್ಮಾ।ಎನ್ನೊಳು ದಯಾ
ಎಂದಿಗೆ ಕಾಂಬೆನಮ್ಮಾ।ಎನ್ನೊಡೆಯನಾ ಪ

ಕಾಲಿಲಂದುಗೆ ಗೆಜ್ಜೆ ಲೀಲಾಘನ ನೀತಾಗೊ।
ಪಾಲಾ ವಿಶಾಲ ಭಾಲಾ ೧

ಮಾರನಾ ಪಡೆದ ಸುಂದರಾಕಾರಾ ಮನೋ।
ಹಾರಾ ಗುಣ ಗಂಭೀರಾ ೨

ತಂದೆ ಮಹಿಪತಿ ಸ್ವಾಮಿ ಬಂದಾ ಗೋ।
ವಿಂದಾ ಮುಕ್ಕುಂದಾ ನಂದನ ಕಂದಾ ೩

## ೧೩೬

ಇಂದಿರೆಯರಸನಾಡಿದ ಆಟನೋಡಿ।ನಲಿದಾಡಿ।
ಬಂದರಜಮುಖ್ಯರೋಡಿ।ಬಹುಜನ ಕೂಡಿ ಪ

ಅರುಣ ತಳದಿರಂಜಿಪ ದ್ವಯ।ಚರಣದಿಂದ ಕಾಳಿ ಅಹಿ।
ವರನಸಿರವ ಮೆಟ್ಟಿಸೂರ್ಯ।ಕಿರಣದಂತೆ ಪೊಳೆವಾ।
ಸ್ಫುರಣಗೆಜ್ಜಯ ಝಣ ಝಣ।ಝಣಕು ಝಣಕೆಂಬ ತೆರದಿಂದ।
ಕರುಣ ಧಿಗಿ ಧಿಗಿಯೆಂದು।ವಾರುಣದಲಿ ಕುಣಿಯೇ ೧

ವೀಣೆಯಲಿತಾಸರಿಗ ಮಪಧನಿ।ಸೆಂಬಮೆಟ್ಟಿಕೆಯೊಳ।
ತ್ರಾಣದಿಂದ ಝಂ ಝಂ ಝಂ ಝಂ ಕೆನಿಪ ಧ್ವನಿಯಗಳನು।
ಮಾಣುತಲಿ ಸಿರಿರಾಗ ಘನಮಲಾಹರ ಮೊದಲು।
ವಾಣಿಪತಿಸುತ ಪಾಡಿದ ನಾನಾ ರಾಗದಲಿ ೨

ಅಂಬುಜಾಕ್ಷಪ್ರಿಯನಾದ।ಅಂಬುಜಭವ ಪದ ಕರ್ತ।
ಕುಂಭಿಯೊಳಹಸ್ತಿನಿಕು।ರಂಬಾರಿ ಕೋಟಿ ದ್ವನಿ।
ವೆಂಬಂತೆ ಕಹಳೆಗಳು।ತುಂಬಿ ಪೂರೈಸಿದನು।
ಭುಂ ಭುಂ ಭುಂ ಭುಂ।ಭುಂ ಮೆಂದು ಗಂಭೀರ ಸಪರದಿ ೩

ತತ್ತಥೈಯ್ಯಾ ಥೈಯ್ಯಾ ಥರಿಕೆಂದು।ಧತ್ತೆರಿಕುಥಲಿ।
ಒತ್ತಿ ಖಿಣಿ ಖಿಣಿ ಖಿಣಿಲೆಂಬ।ಮೊತ್ತತಾಳು ವಿಡಿದು।
ಮತ್ತ ಏಕತಾಳ ಝಂಪೆ।ತಾಳ ಅಟ್ಟತಾಳಗಳು।
ಉತ್ತುಮದಾ ಕರದಿ ಹರ ಅರ್ಥಿಯಲಿ ನಿಂದಾ ೪

ಇಂದೀವರಜ ಮದ್ಯಸ್ಥಲ ಒಂದು ನೆಗೆದು ಜವದಿಂದಾ।
ದಂ ದಂ ದಂ ದಂ ದಮುಕೆಂದು।ಛಂದದಿ ಮುಟ್ಟಿದನು।
ಧಿಂ ಧಿಂ ಧಿಂ ಧಿಂ ಧಿಮಿಕೆಂದು।ದುಂಧುಂಪೊಡದರು ಸುರರು।
ತಂದೆ ಮಹಿಪತಿ ನಂದನ ವಂದ್ಯನೊಲುವಂತೆ ೫

## ೧೩೭

ಇಂದರೆ ರಮಣಾ ಇಟ್ಟಾಂಗಿರಬೇಕು ಪ

ಒಮ್ಮಿಗೆ ಕದಶನ ಶಾಖಾ ಆಹಾರವ ನೀಡುವನು
ಒಮ್ಮಿಗೆ ಷಡ್ರಸದ್ದನ್ನವ ಸಾರುಣಿಸುವನು ೧

ಒಮ್ಮಿಗೆ ಜೀರ್ಣ ಕಂಥಾಧಾರಿಯೆನಿಸುವನು।
ಒಮ್ಮಿಗೆ ದಿವ್ಯಾಂಬರಗಳ ನುಡಿಸಿ ನೋಡುವನು ೨

ಒಮ್ಮಿಗೆ ಧರಿಯಲಿ ತೋಳತಲೆದಿಂಬದಲಿಡುವಾ।
ಒಮ್ಮಿಗೆ ಪರ್ಯಾಂಕಾಸನ ಸಂಪದ ಕೊಡುವಾ ೩

ಒಮ್ಮಿಗೆ ಕವಡಿ ಲಾಭಕ ಕೃತ-ಕೃತ್ಯೆಯೆನಿಸುವನು
ತಂದೆ ಮಹಿಪತಿ-ಕಂದಗ ಸಾರಿದ ನಿಜ ಖೂನಾ ೪

ತಂದೆ ಮಹೀಪತಿ–ಕಂದಗ ಸಾರಿದ ನಿಜ ಖೂನಾ।
ದ್ವಂದ್ವ ಗೆಲಿದು ಸ್ವಾನಂದದಲಿರುವವನೇ ಜಾಣಾ ೫

## ೧೩೮

ಇಂತುಯನ್ನಾ ಬಯಕೆ ಕೈಗೂಡಿಸೋ ದೇವಾ
ಅಂತರ, ಗಲಿದೇ ಹಂಬಲಿಸುತಿದೇ ಜೀವಾ ಪ

ನಿನ್ನ ಸಿರಿಪದಾ ಸಖಚಂದಿರದಲಿ
ಎನ್ನ ಕಂಗಳು ಚಕೋರಾಗಿ ನೋಡಲಿ
ನಿನ್ನ ಕಥೆಯಾ ಘನ ಗರ್ಜನೆಯಲಿ
ಘನ್ನ ಶ್ರವಣ ಮಯವಾಗಿ ನಲಿಯಲಿ ೧

ನಿನ್ನ ನಾಮಾ ಮೃತ ಫಲ ಸೇವಿಸಲಿ
ಎನ್ನ ನಾಲಿಗೆ ಶುಕವಾಗಿರಲಿ
ನಿನ್ನ ಚರಣಾರ್ಪಿತ ತುಲಸಿ ಕುಸುಮದಲಿ
ಎನ್ನ ಪ್ರಾಣವು ಮಧುಪಾಗಿ ಕೂಡಲಿ ೨

ನಿನ್ನ ಮನೆಯಾಶೆಯಾ ಊಳಿಗದಲಿ
ಎನ್ನಂಗ ನಿರುತ ಮಾರಿಸಿ ಕೊಳ್ಳಲಿ
ಘನ್ನ ಗರು ಮಹಿಪತಿ ಪ್ರಭು ಯಚ್ಚರದಲಿ
ನಿನ್ನಂಕಿತದಾ ಜನ್ಮಗಳೇ ಬರಲಿ ೩

## ೧೩೯

ಇಂದುಕುಲುಮಣಿಯಾ।ಎಂದು ಕಾಂಬೆ
ಮನೋದಣಿಯಾ ಕುಲಮಣಿಯಾ ಪ

ಎಳೆಬಿಸಿಲೊಳು ಥಳ ಥಳಿಸುವಾ ಬೆಳಗಿನಾ।
ಬಳದ ಒಬ್ಬುಳಿಯಂತೆ ದಿನಮಣಿಯಾ।

ಕಳೆಶತ ಮಡಿಯೊಳು ಹೊಳೆವ ರನ್ನಮುಕುಟಾ।
ಝಳ ಝಳಿಸುವ ರಳ ಕಾವಳಿ ದೋರಣಿಯಾ ೧

ಚಲಾಚಲ ಭೂತಾವಳಿಗಳ ಸಲಹುವ
ಭ್ರೂಲಲಿತ ಮೃಗಮದಾಂಕಿತದ ಫಣಿಯಾ।
ವಿಮಲತರ ಕಮಲದೆಸಳ ಸುಗಂಗಳ।
ರಂಜಿಪ ನಾಸಿಕ ಸಂಪಿಗಿ ನೆನಿಯಾ ೨

ಎಳೆನಗೆ ಚುಬುಕಾಗ್ರ ಚೆಲುವಾ ಕುಂದರದನಾ।
ಇಳೆಯೊಳು ಕಾಣೆ ಕುಂಡಲಕ ಎಣಿಯಾ।
ಕಳ ಕಳಿಪ ಕದಪು ವದನ ಮೋಹನಾರಾಯ।
ಒಲಿವ ಮಹಿಪತಿ ಜನ ಪ್ರಭು ಗುಣಖಣಿಯಾ ೩

## ೧೪೦

ಇಂದು ಕಂಡೆನಾ ಇಂದು ಕುಲಮಣಿ
ನಂದ ಕಂದ ಮುಕ್ಕುಂದನಾ।
ಬಂದು ವದಗಿಹ ಬಹಳ ಪುಣ್ಯದಿ ಛಂದವಾಯಿತು
ಚಲುವನಂಘ್ರಿಯ ಪ

ಬಲಿಗೆ ಭೂಮಿಯ ಬೇಡಿ ಹೆಜ್ಜೆಯಾ।
ಅಳತೆಯರಡಲಿ ಅಡಗಿಸಿ।
ನಳಿನ ಜಾಂಡಕ ಸಖವ ಸೋಂಕಿಸಿ।
ನೆಲಿಗೆ ಸುರನದಿ ಪಡೆದ ನಂಘ್ರಿಯಾ ೧

ಶಿಲೆಯು ಆಗಿರೆ ಶಾಪದಲಿ ಸೋಂ।
ಕಲು ನಿಜಾಂಗದ ಕಾಣಿಸಿ।
ನಲಿದು ಕಾಳೀಂದಿಯೊಳುರುಗನಾ।
ತಲೆಯಳಾಟದಿ ತುಳಿದ ನಂಘ್ರಿಯಾ ೨

ಮುನಿಜನ ಹೃದಯ ಮನೆಯ ದೀಪವು।
ಯನಿಪ ಶ್ರೀದೇವಿ ಯರಸನಾ।
ಮನದಿಗುರುವರ ಮಹಿಪತಿ ಪ್ರಭು।
ನೆನೆವವರೊಳಗೆ ನೆಲೆಸಿಹನ ಪದ ೩

## ೧೪೧

ಇಂದು ಧನ್ಯನಾ ಪ

ಇಂದು ಧನ್ಯನ ಇಂದಿರೇಶನಾ।
ಇಂದುವದನವ ಕಂಡೇನಾ।
ಕಂದರೊಳಗುದ್ದಂಡನಾ।
ಬಂದು ಪಾಲ್ಬೆಣ್ಣೆ ಉಂಡನಾ ೧

ಅರ್ನವೊಪಮ ವರ್ಣಕಾಯಸು।
ಪರ್ಣ ವಾಹನ ಕರುಣನಾ।
ನಿರ್ನಸುವರಣ ನಿಪುಣನಾ।
ಸ್ವರ್ಣವಸನಾ ವಿರ್ಣನಾ ೨

ಮಹಿಯ ಭಾರವನಿಳುಹಲೋಸುಗ।ದಯ।
ಗೃಹದೊಳಗ ತಾಬೆಳೆದನಾ।
ಇಹಪರ ಜನ ಹೊರೆದನಾ।
ಮಹಿಪತಿಸುತ ವರದನಾ ೩

## ೧೪೨

ಇಂದು ಪರಮಾನಂದ।ನಮಗ ಮುಕುಂದನ ಕೃಪೆಯಿಂದಾ।
ಮಂದರಧರ ಪದದ್ವಂದ್ವ ಕಮಲ ಮಕ।
ರಂದ ಭ್ರಮರ ಸಂಗ ಛಂದದಲಾಯಿತು ೧

ವೇಗದಿಂದಲಿ ನೋಡೀ।ಸಕಲರು।ಭಾಗವತರು ಕೂಡಿ।
ಭಾಗಿರಥೀ ಪಡೆದ ನಾಗಶಾಯಿಯ।
ನಿಗ ಮಾಗ ಮಯುಕ್ತದಿ।ಈಗ ಪಾಡಿದೆವೆಂದು ೨

ಹಿಂದಣ ಜನ್ಮದೊಳು।ಮಾಡಿದ ।
ಸಂದಿದ ದೋಷಾದಿಗಳು ಚೂಕಿ।
ಕುಂದಿ ತೊಲಗಿದವು ತಂದೆ ಮಹಿಪತಿ।
ನಂದನ ಪ್ರಿಯನಾನಂದ ಕರುಣದೀ ೩

## ೧೪೩

ಇಂದು ಕಂಡೆ ಚರಣಾ ಶ್ರೀಕೃಷ್ಣನಾ ಪ

ಕೊಳಲ ಧ್ವನಿಗೈದನಾ ಚಲುವಿಗೆ ಗೆದ್ದ ಕಾವನಾ ೧

ಹೆಡೆಯಲಿ ಕಾಳಿಂಗನಾ ಒಡನೆ ಕುಣಿದ ರಂಗನಾ ೨

ಗೋವರ್ಧ ನೆತ್ತಿದನಾ ಗೋವಳಕ ಕಾಯದನಾ ೩

ಬಾಲಕ ಲೀಲಾ ಲೋಲನಾ ಮೂರುಲೋಕ ಜೀವನ ಪಾಲನಾ ೪

ಮಹಿಪತಿ ನಂದನ ಜೀವನಾ ಸಹಕಾರಿ ಪಾವನ್ನನಾ ೫

## ೧೪೪

ಇಂದು ನಮ್ಮ ಸಲಹಯ್ಯಾ ಸಿರಿರಮಣಾ।
ಬಂದ ದುರಿತ ನಿವಾರಿಸು ಪೂರ್ಣ।
ಮಂದಮತಿಗಳಾ ನೋಡದೆವೆ ನ್ಯೂನಾ।
ಛಂದದಿಂದ ಕೊಡು ನಿನ್ನ ಚರಣ ಧ್ಯಾನಾ ಪ

ಹಿಂದ ವ್ಯಾಧನೊಬ್ಬ ಹರಿಣಿ ಹಿಡಿಯಲಿ।
ನಿಂತು ಚತುರ್ವಿಧ ಬಲಿಯಾನೊಡ್ಡಿರಲಿ।
ಅಂದು ನಿನಗಾಗಿ ಮೃಗ ಮೊರೆಯಿಡಲಿ।
ಬಂದು ಕರುಣಿಸಿ ರಕ್ಷಿಸಿದ ಪರಿಲಿ ೧

ಬಸಿರೊಳಗಿದ್ದ ಪರೀಕ್ಷಿತಗೆಂದು।
ಎಸೆಯಲು ಬಾಣಗಳ ದ್ರೋಣಿ ಮುಳಿದು।
ಬಿಸಜಾಕ್ಷ ನಿನ್ನ ಚಕ್ರ ಮರೆವಿಡಿದು।
ಶಿಶುವಿನ ರಕ್ಷಿಸಿದ ಪರಿ ಬಂದು ೨

ದಿನ ವತ್ಸಲ ದಯಾನಿಧಿ ಎನುವಾ।
ಖೂನದೋರಿಸಯ್ಯಾ ಬಿರುದಿನ ಅನುವಾ।
ನಿನೇ ತಾಯಿ ತಂದೆ ಬಂಧು ಸಖದೈವ।
ಘನಗುರು ಮಹಿಪತಿ ಸುಖ ಜೀವಾ ೩

## ೧೪೫

ಇಂದು ಸಲಹಿದೇ
ಇಂದು ಸಲಹಿದೇ ಆರ್ತರ ಬಂಧು
ಕುಂದ ನೋಡದೇ ಕರುಣಾ ಸಿಂಧು ಪ

ಅಂದು ಪ್ರಲ್ಹಾದ ನೆಂಬುಧಿಯೊಳಗ
ಬಂದು ಉಳುಹಿದ ತರಧಿಂದಲೆನಗೆ ೧

ಹಿಂದ ಪ್ರಳಯ ಜಲದಿ ಸತ್ಯ ವ್ರತನಾ
ಸಂಧಿ ಸ್ಯೊರದಗಿದ ಪರಿ ಸಿರಿರಮಣಾ ೨

ಕುದಿ ವೆಣ್ಣೆ ಗೊಪ್ಪರಿಗೆಯೊಳಿಹ
ಸುಧನ್ವನಾ ಪ್ರಾಣನುಳಹಿದ ಪರಿಯಾ ೩

ತಂದೆ ಮಹಿಪತಿ ಪ್ರಭು ದತ್ತಾತ್ರೆಯಾ
ಬಂದದುರಿತದಿ ಬಿಡಿಸುತ ಕಾವಾ ೪

## ೧೪೬

ಇನ್ನಾರ ಭಜಿಸಲ್ಯೆಯ್ಯಾ।ಯನ್ನ ಗತಿ
ಮುಕುತಿದಾಯಕ ರಂಗ ನೀನಿರಲು ಪ

ಸ್ನಾನಪಾನಕಬಪ್ಪ ಸುರನದಿಯನೇ ತ್ಯಜಿಸಿ
ಹೀನ ಸರಿತೆಗಳಲ್ಲಿ ಮುಣುಗುವರೇ
ಏನ ಬೇಡಿದ ನೀವ ಸುರ ಭೂಜ ಇದಿರಿಡಲು
ಕಾನನದ ಶಾಲ್ಮಲಿಯ ಫಲವ ನರಸುವಂತೆ ೧

ಕಾಮಧೇನು ಮನಿಗೆ ಬರಲು ಕರೆ ಕೊಳ್ಳದೇ
ಆ ಮೊಲದ ಹಾಲವನು ಬಯಸುವಂತೆ
ಕಾಮಿತಾರ್ಥವ ನೀವ ಚಿಂತಾ ಮಣಿಯಿರಲು
ಪ್ರೇಮದಿಂದಲಿ ಕಾಜು ಮಣಿಯ ನರಸುವಂತೆ ೨

ತಾಯ ಮಾರಿಯ ತೋತ್ತು ಕೊಂಬಂತೆ ಸಿರಿಯಸುಖ
ದಾಯಕ ನಿನ್ನ ಮರದನ್ಯಕೆರಗೀ
ಹೇಯ ವೃತ್ತಿಗೆ ಬೆರೆವದುಂಟೇ ನಿನ್ನವನೆನಿಸಿ
ಕಾಯೋ ಭಕುತಿಯ ನಿತ್ತು ಗುರು ಮಹಿಪತಿ ಸ್ವಾಮಿ ೩

## ೧೪೭

ಎನಗ ನೀ ಕಾಯಲಾಗದೇ।ಆಗದೇ ದೇವಾ ಪ

ದಶ ಜನುಮ ವಂಗೀಕರಿಸಿ ಭಕ್ತ ಅಂಬ।
ರೀಷನ ಶಾಪ ಹರಿದೆ ದೇವಾ ೧

ಗಣಿಕಾ ಅಜಮಿಳ ಶಬರಿ ಮುಖ್ಯರಾಗಿಹಾ।
ಗಣಿತರನು ಪೊರೆದೆ ದೇವಾ ೨

ಗುರುವರ ಮಹಿಪತಿ ಸುತ ಪ್ರಭು ಯನ್ನನು।
ದ್ಧರಿಸುವದನರಿದ ಅರಿದೇ ದೇವಾ ೩

## ೧೪೮

ಎನ್ನ ಪಾಲಿಸುವದಾಗದೇ।ಸಿರಿ ರಮಣಾ।
ಪ್ರಸನ್ನ ವಿಮಲ ಅತುಳ ಶೇಷಗಿರಿಯ ವಾಸಾ ವೆಂಕಟೇಶಾ ಪ

ದುರುಳ ದೈತ್ಯನ ಕರುಳ ಬೆರಳ ಸರಳ ಉಗುರಿನಿಂದ ವಿರಳ।
ವಿರಳ ಮಾಡಿ ಪೊಸರಂತೆ ಕೊರಳಿಗಾಕಿ ಮರಳೆ।
ತರಳಗೊಲಿದು ಹರಣಗಾಯ್ದೆ।ಆದೇಶದಲ್ಲಿ।
ಅರಸುತನುವ ಕೊಟ್ಟು ನಿಲಿಸಿದೇ।ಕ್ಷಿತಿಯೊಳಗ।
ಪರಮ ನಿಜ ಭಕ್ತನೆನೆಸಿದೇ ೧

ನೆಗಳಿ ಬಂಧನ ಬಿಡೆ ಹರಿಗಳರಿಗಳ ಸಂಗಡಿಭಗಳ ಸಮೂ।
ಹಗಳ ಪತಿ ನೀರ್ಗುಡಿಯೆ ಪೋಗಲಾಗಳೆ।

ನೆಗಳಿ ಪಿಡಿಯೆ ಶ್ರೀ ಪಾದಗಳ ಯುಗಳ ನೆನಿಯ ಕೇಳದೇ।
ಸಕಲ ಪಕ್ಷಿಗಳ ಶ್ರೇಷ್ಠ ನಿಲ್ಲದೊದಸಿದೇ।ಕರುಣದಿಂದ
ಸುಗತಿ ಕೊಟ್ಟು ಜನಮ ಹರಿಸಿದೇ ೨

ಇಳೆಯ ಮದದಿ ದ್ರೌಪತಿಯನು।
ತಿಳಿಯದೆಳಿಯೆ ಕಳಿಯೆ ಸೀರೆಯಾ।
ಕಳಿಯೆ ಮಾನ ವಿಜಯಗೆಳೆಯ ಇಳೆಯ ಭಾರರ್ಬಳಿಯೆ।
ಸುಳಿಯೆ ದಾಟಿಸೆನುತ ನುತಿಸೆ ತ್ವರಿತದೀ।ನೀನು ಸಭೆ।
ಯೊಳಗ ಪೊರಯಿಸಿದೇ ವಸ್ತ್ರದೀ।ಮಹಿಪತಿ।
ನಂದನೊಡೆಯ ವ್ಯಾಳ್ಯಕ್ಕೊದಗಿದೇ ೩

## ೧೪೯

ಎನ್ನ ಪಾಲಿಸೋ ಕರುಣಾಕರಾ।
ಪನ್ನಗಶಯನ ಗದಾಧರಾ ಪ

ವಸುದೇವ ನಂದನ ಹರಿಮಧುಸೂದನ।
ಅಸುರಾಂತಕ ಮುರಲೀಧರ,
ಬಿಸರುಹನಾಭ ಸರ್ವೇಶನೆ ಮುನಿ।ಮಾ
ನಸ ಸಂಚಾರ ರಮಾಧವಾ ೧

ಪರಮ ಪುರುಷ ಉರಗಾಸನ ವಾಹನಾ।
ಕರುಣಾರ್ಣವ ವಡವಾನಳಾ॥
ಸರಸಿಜಭವ ಗಿರಿಜಾವಲ್ಲಭನುತ।
ವರಸುಜನಾವಳಿ ಪಾಲನಾ ೨

ಕಾವನ ಪಿತ ಮುಚಕುಂದ ವರದ ರಾ।
ಜೀವ ನಯನ ನಾರಾಯಣಾ।
ಶ್ರೀವತ್ಸಲಾಂಛನ ಗುರುಮಹೀಪತಿ ಸುತ
ಜೀವನ ಸಖ ಶ್ರೀ ಕೃಷ್ಣನೆ ೩

## ೧೫೦

ಎನ್ನ ಸಲಹೋ ನೀ ದಯಾಂಬುಧಿ।
ಘನಶಾಮಾ ರಾಮಾ ಪ

ವಸುದಿಜ ಲೋಲ ಸುರಮುನಿ ಪಾಲಾ।
ದಶರಥ ತನಯ ಕೃಪಾಲ ೧

ದೀನೋದ್ಧಾರ ದುರಿತ ನಿವಾರಾ।
ದಾನವಕುಲ ಸಂಹಾರಾ ೨

ಸರಸಿಜನಯನಾ ಸದ್ಗುಣ ಸದಾನೆ
ಗುರು ಮಹಿಪತಿ ಸುತ ಜೀವನಾ ೩

## ೧೫೧

ಎನ್ನ ಸಲಹುದೋ ರಂಗಾ ಎನ್ನ ಸಲಹು।
ನಿನ್ನ ಚರಣ ಕಮಲದೋರಿ।
ಚೆನ್ನ ಕಿಂಕರ ದಾಸ ನಾನು।ಪನ್ನಗಾರಿ ಗಮನ ರಂಗಾ ಪ

ನಷ್ಟ ಪರಮ ಪತಿತ ಗತಿಯ।ಗೆಟ್ಟು ಅಜಮಿಳ ತನ್ನ।
ಕಷ್ಟ ಬಡುವ ಕಾಲದಲ್ಲಿ ಸುತನ ಪೆಸರನು।

ಮುಟ್ಟಿ ಕರಿಯೇ ತೃಪ್ತನಾಗಿ।ಅಷ್ಟರಿಂದ ಅವಗ ನಿನ್ನ।
ಪಟ್ಟಣಕ ನೀ ಅಟ್ಟಿ ಗತಿಯ।ಕೊಟ್ಟು ಸಲುಹಿದೆ ರಂಗಾ ೧

ಸಂಧಿಸಿ ಮಧ್ಯರಾತ್ರಿಯೊಳಗ।ಬಂದು ದೂರ್ವಾಸನ್ನವ ಬೇಡ।
ಲಂದು ದೃಪದ ನಂದನೆ।ನಿನ್ನೆ ಸ್ಮರಿಸೆ ತ್ವರಿತದಿ।
ಬಂದು ನಿಂದು ಬೇಡಿದುದನು।ಛಂದದಿಂದಲಿತ್ತು ದ್ವಿಜರಾಜ।
ನಂದ ಬಿಡಿಸಿ ಐವರ ಮಾನ ಕುಂದಂತೆ ಕಾಯ್ದೆ ರಂಗಾ ೨

ಐದು ವರುಷ ಹಸುಮಗನಾ।ಬೈದು ಮಲತಾಯಿ ಪೊರಗೆ।
ಹಾಕಲಾಗ ಧೃವನು ನಿನ್ನ ಕುರಿತು ಧ್ಯಾನವಾ।
ಗೈಯ್ಯಲಾಗಿ ಅಚಲ ಪದಕ।ಒಯ್ದು ಇಟ್ಟು ನೀನು ಅವನ।
ಕಾಯ್ದೆ ಮಹಿಪತಿ ನಂದನೊಡೆಯನಾದ ದೇವ ರಂಗಾ ೩

## ೧೫೨

ಎನ್ನ ಸಲಹೋ ಚರಣವನ್ನು ದೋರಿ ಪರಮ।
ನಿನ್ನ ಕಿಂಕರನೆಂದು ಘನ್ನದಯವನು ಬೀರಿ ಎನ್ನಾ ಪ

ಶರಣ ಜನ ಮಾನ ರಕ್ಷಕನೇ
ವರಕಮಲ ಕರಕಮಲ ಪದವಿಮಲ ಮಹಿಮನೇ
ಸಕಲ ಗುಣಧಾಮ ಘನಶ್ಯಾಮ ಸುರ ರಿಪು ಮಥನ।
ಗೋಕುಲರಿ ಸೋದರಾನಂತ ಗುಣಾ ಶ್ರೀ ಹರಿ
ಭಕ್ತರ ವಸರಕೊದಗುವೆ ನೀ ಪರೋಪರಿ।
ಸುಕಲ್ಪತರು ದನುಜ ಕುಲಸಂಹಾರ
ಸರ್ವದುರಿತ ನಿವಾರಾ ೧

ಅಖಿಳ ಶೃತಿ ಸ್ಮೃತಿ ನಿಕರಲಿಂದ ನುತಿಸಿಕೊಂಬೆ।
ವಿಕಸಿತನುಪಮ ವದನಬ್ಜ ಕುಲ ಅಬ್ಜರವಿ

ಪ್ರಕಟದೊಳೊದಗಿ ಬಂದೆ
ಸರಸೀರುಹ ನಯನ ಜಗದ ತಂದೇ।
ಸಿರಿನಂದ ನಂದನ ಪರಮುದಾರೇ।
ಸುರವೃಂದ ರಕ್ಷಕ ವರ ಮುರಾರೇ ೨

ಶರಣಾಗತ ಜನರ ಪಾಲಾ।
ಸಿರಿ ಉರಗಾರಿಗಮನ ಸೂರಾರಿ ಸಿಬಿಕುಲ।
ವೈರಿ ಶಯನ ಶೌರಿ ನರಸಹಕಾರಿ ಗಿರಿಧರನೇ।
ಕರುಣಾಕರ ತ್ರಯದಿ ಸ್ಮರಣ ಮಾಳ್ಪರ ಭಯವ।
ಹರಣ ಶರಣ ಕೌಸ್ತುಭಾಭರಣ ನೀಲವರಣಾನಂದ ೩

ವರ ಶ್ರೀರಮಣ ದೇವ ಜಗಜೀವ ಮಹಿಪತಿ ನಂದ ನೊಡಿಯ।
ಪರಮಾನಂದ ಜೀವದೊರಿಯೇ।
ಸರಸೀರುಹ ಭವ ವಿನುತ ಮತಿ ಚರಿತಾ ಸಿಂಧೂರ।
ವರದ ನವನೀತ ಚೋರ ಜಗದೀಶ ಹರಿಯೇ ೪

## ೧೫೩

ಏನಾದರೇನು ಗುರುದಯ ಪಡದನಕಾ।
ತಾನೊಲಿಯನು ಹರಿ ಕಾವನ ಜನಕಾ ಪ

ಪರಿ ಪರಿ ಸಾಧನದಲಿ ಬಳಲುವರೇ।
ಪರಸ ಮುಟ್ಟದ ಲೋಹವಾಗುವದೇ ಕನಕಾ ೧

ಪತೀತೋದ್ಧರ ಗುರು ಸ್ವಸುಖದಾನಿ।
ವ್ರತ ತಪದಿ ಸಿದ್ದಿಯ ಬಹ ಸುಖ ಕ್ಷಣಿಕಾ ೨

ಗುರು ಮಹಿಪತಿ ಪ್ರಭು ಜ್ಞಾನಾಂಜನಿಡದೇ।
ಧರಿಯೊಳಾಹನೇ ನರ ಚಿದ್ಘನ ಧನಿಕಾ ೩

## ೧೫೪

ಎಮ್ಮಳವೇ ಪೊಗಳಲಮ್ಮಮ್ಮಾ
ಬೊಮ್ಮನರಿಯ ನಿಮ್ಮ ಮಹಿಮಾ ಪ

ಭೂತಳದೊಳರವು ಸಕಲ ಉಂಟೆಂದು
ಖ್ಯಾತಿಯಿಂದ ನಾನಾತೆರದಿ ಸ್ತುತಿಸೆ
ಮಾತಿಗೆ ವಿಗತ ಕಗತ ವಾಗೆ ಶೃತಿಗಳು
ನೇತಿ ನೇತಿ ತಿರುಗಿದ ಬಳಿಕಾ ೧

ಕುಸುಮನಾಭೇನನ ಸಾಮೀಪೆಂಬಾ ತವಕದಿ
ಅಸಮ ತೆರದಿ ಪೊಗಳಲು ಚರಿತಾ
ದ್ವಿಸಹಸ್ರ ಜಿವ್ಹಕ ಮೀರಿ ಪೊಗಳುತ ಅತಿ
ಕುಶಿದು ತಲೆವಾಗಿ ತಾ ನಾಚಿದ ಬಳಿಕ ೨

ತರಣಿ ಕೋಟಿತೇಜ ಸ್ವರೂಪ ಜ್ಯೋತಿಯ ಅನ
ವರತ ಹೃದಯ ಮಂದಿರದೊಳಿರಿಸಿ
ಮೆರವುತ ನಿನಗತಿ ಬ್ರಯರಾದಾ ಭಕುತರಾ
ಸ್ಮರಣೆ ಯೋಗ್ಯವಲ್ಲದೆ ಮಹಿಪತಿಸುತ ಪ್ರಿಯಾ ೩

## ೧೫೫

ಎಲೆ ದೇವಿ ಇಂತು ಚಿಂತೆಯು ಯಾಕ।
ಸುಲಭದಿ ತಂದು ತೋರುವೆ ನಿನ್ನರಸನಾ ಪ

ನಳಿನಗಳಲಿ ಅಪರಾಧವಾಯಿತೆಂದು।
ಮುಳಿದು ಬಿಂಕದಿ ಅಳಿಮೊರೆದು ತಾನೆದ್ದು।

ಕಲಸಾರುವೇನೇ ನಿನ್ನಯ ತನುಗುಪವ।
ತೊಲಗಿಬಿಟ್ಟು ನಿಲ್ಲುವನೇನೇ ರಂಗಾ ೧

ಹಣ್ಣಾಗಿ ರಂಜಿಸತಿಹಾ ಚೂತದ ಫಲವನ್ನು।
ತ್ಯಜಿಸಿ ಬಂದ ತಪ್ಪಾಯಿತೆಂದು।
ಉಣಲೋಲ್ಲದೇ ಶುಕಬಿಟ್ಟು ಪೋಪದೇನೇ।
ಪೊಂಬಣ್ಣಾಧರಸವಿಯಾ ಬಿಟ್ಟು ನಿಲ್ಲುವನೇ ೨

ಘನ್ನ ಚಿಂತೆಯಬಿಟ್ಟು ಹರುಷದಲಿರು ತಾಯೆ।
ಇನ್ನು ನಾ ಪೋಗಿ ನಾನಾ ಪರಿಯಿಂದಾ।
ನಿನ್ನ ಬಳಿಗೆ ಒಪ್ಪಂತೆ ಮಾಡುವೆನೆ ಸಂ।
ಪನ್ನ ಕೀರುತಿ ಮಹಿಪತಿ ಸುತ ಪ್ರೀಯನಾ ೩

## ೧೫೬

ಎಷ್ಟೆಂದು ಸಾರುವೆ ನಿಮ್ಮ ನಾಮ ಮಹಿಮಾ।
ಶ್ರೀ ಪರಬೊಮ್ಮಾ ಶಿಷ್ಟ ಜನರ ಸಂಭ್ರಮಾ ಪ

ಹರಿಹರಿಯಂದೊದರೆ ಮರೆದರಿದೊಮ್ಮಾ।
ಹರದ್ವರ ದೋಹುದುಪಾಪ ಪುಣ್ಯವು ಮೋಪಾ।
ತಿರು ತಿರುಗಿ ಯಾತ್ರೆಗಳಾ ಮಾಡಿದ ಫಲಾ।
ಪರತರಾಸುಖ ನೀವುದು ರಕ್ಷಿಸುವುದು ೧

ರಮ ರಾಮಯಂದು ಕಾಮಿಕಾಮಿ ಅಂದು।
ನಾಮಾ ನೇಮದಿ ನುಡಿಯೆ ಗಿಳಿಯ ಕರಿಯೆ।
ಪ್ರೇಮ ಪ್ರೇಮಕರ ತಂದೆ ಗತಿ ನೀಡದೇ।
ಸೋಮ ಸೋಮಾರಿ ಕುಲೇಶ ಕೋಟಿ ಪ್ರಕಾಶಾ ೨

ಸುರ ಸುರಭಿಯ ಛಂದಾ ಪರಿ ಪರೀವದಾನಂದಾ।
ಕರೆ ಕರೆದುಂಡು ನಲಿದರು ನಾರದಾದ್ಯರು।
ತರಿಸಿ ತಾರಿಸುತಿಹರು ಸಾಧು ಸಂತರು।
ಗುರುವರ ಮಹಿಪತಿ ಜನು ಧನ್ಯನಾದನು ೩

## ೧೫೭

ಎಂತು ನೋಡುವಿಯನ್ನ ಅಂತ ಹರಿಯೇ।
ಕಂತುಪಿತ ಕೈವಿಡಿದು ಕಡೆಗಾಣಿಸಯ್ಯಾ ಪ

ಆಶೆಯೆಂಬಾ ಮಹಾ ಹೆಸರುಳ್ಳ ಆ ನದಿಯು।
ಲೇಶ ಅಂತಿ–ಲ್ಲದಾ ಚಿಂತೆ ಥಡಿಯು।
ಸೂಸುತಿವೆ ಇದರೊಳಗ ಮನೋರಥವೆಂಬ ಜಲ।
ಘಾಸಿ ಮಾಡುವ ಬಯಕೆ ಲಹರಿ ಬರುತಿದೆ ೧

ದೋರುತಿದೆ ಸಂಸಾರ ತಾಪದಾವಾನಳವು ।
ಹರಿದು ಬರುತಿದೆ ಕಾಳಸರ್ಪ ತಾನು ।
ಅರಿಷಡ್ವರ್ಗಗಳನು ಉತ್ತುಂಗ ಜಲ ಚರವು ।
ತೆರಗಾಣೆ ಮೋಹಸುಳಿಯಲಿ ಬಿದ್ದ ಬಳಿಕಾ ೨

ನಿನ್ನ ನಾಮವೆಂಬ ಸಂಗಡಿಯನು ಕಟ್ಟಿ।
ಮುನ್ನಿನ ಪರಾಧಗಳ ಕ್ಷಮೆಯ ಮಾಡಿ।
ಸನ್ನುತನೆ ಮಹಿಪತಿ ಸುತ ಪ್ರಾಣದೊಡಿಯನೆ।
ನಿನ್ನ ದಾಸರ ದಾಸನೆಂದು ದಯಮಾಡಿ ೩

## ೧೫೮

ಎಂಥವ ನಿವನಮ್ಮಾ ಬಾಲಕನಂತಿಹ ಗೋಪೆಮ್ಮಾ
ಎಂಥವನಿವ ತನ್ನಂತತ ನ್ನಂತದೋರ ಗುಡದ
ನಂತ ಮಹಿಮ ನರಕಾಂತಕ ದೇವಾ ಪ

ವಾರಿಯೊಳಗ ಮನವಾರಿ ಕ್ರೀಡಿಸುತಿರೆ
ಘೋರ ಪ್ರವಾಹದಿ ತೀರದಲೆಮ್ಮಾ
ಆರು ಅರಿಯದಂತೆ ಸೀರೆನೆಗೆದು ಕೊಂಡು
ಗಾರು ಮಾಡಿದ ಮರ ಸೇರಿದ ಕಾಣಮ್ಮಾ
ನಾರೇರೆಲ್ಲರು ಕೂಡಿ ಸೀರೆ ಬೇಡಲು ಬಿಟ್ಟು
ನೀರ ಮುಗಿದು ಕೈಯ್ಯದೋರೆರಡೆನವಾ ೧

ಪುಣ್ಯ ಚರಣೆಸಳ ಗಣ್ಣ ಜಲಧರದ
ಬಣ್ಣದ ಲೋಪ್ಪವ ಸಣ್ಣಪನೆಂದು
ಬಣ್ಣಿಸಿ ಕರುವುತ ಹೆಣ್ಣೆಂದೊಪ್ಪುವ
ತಿಣ್ಣ ಮೊಲೆಗಳನು ಉಣ್ಣೆಂದೂಡಿದಾ
ಹೆಣ್ಣು ಪೂತನಿಯಾ ಕ್ಷಣದಿ ಅಸುವನು
ಸಣ್ಣಿಸಿ ಕಳೆದ ಮುಕ್ಕಣ್ಣನ ಸಹಿನು ೨

ಇಂದು ವದನೆಯರು ಮುಂದಕ ಕದವನು
ತಂದಿಕ್ಕಿ ಪೋಗೆರೆ ಮಂದಿರದಿಂದಾ
ಸಂದಿಸ್ಯಾಗಳೆ ಆಂದದಿ ಗೋವಳ
ವೃಂದ ನೆರಹಿಕೊಂಡು ಬಂದು ನೋಡಮ್ಮಾ
ಛಂದದಿ ಬೆಣ್ಣೆಯನಿಂದು ಸೇವಿಸುತಿಹ
ತಂದೆ ಮಹಿಪತಿ ನಂದನೋಡಿಯನು ೩

## ೧೫೯

ಎಂಥಾ ಬಾಲಕನಿವನು ಎಷ್ಟೆಂದ್ಹೇಳಲಿ ನಾನು
ಪಂಥಗಾರಿಕೆಯಂಗ ಪರಮ ಪುರುಷರಂಗ
ಅಂತವ ತಿಳಿಗುಡನು ಗೋಪೆಮ್ಮಾ ಪ

ನೋಟಾವೇಟದಿ ನಲುವಾ ನಡೆಯಾಲೊಲ್ಲದೆ ನಿಲುವಾ
ಸ್ಫೋಟ ಹೃದಯವಾಗುವ ಪರಿಯಂಜಿಸುವ ಮಗು

ನೀಟ ಘಾತಪಾತಕನಮ್ಮಾಗೋಪೆಮ್ಮ
ನೀಟ ಹಾದಿಯೆ ಹಿಡಿದು ನಿತ್ಯ ಬೆಣ್ಣೆಯ ಸವಿದು
ಕಾಟಕಾರವೆ ಭಂಡಾ ತುರುಗಾವರೊಳು ಮುಂಡಾ
ಆಟಕೆ ಗುಣವೇನ ಗೋಪೆಮ್ಮಾ ೧

ನಯ ಮಾತಿಲಿ ಬರುವಾ ನೋಡಲು ಕಠಿಣಿರುವಾ
ತಾಯಡಬಲ ನೋಡಾ ತರುಣಿಯರನ ಬಿಡಾ
ಬಾಯಾದರೆದು ಬೇಡವಾ ಗೋಪೆಮ್ಮಾ
ತಾಯಿಂಗಂಜನು ನಿನಗೆ ತಡೆದುರೋಗವ ಹೊರಗೆ
ಮಾಯಾಗಾರನೆ ಗೋವಾ ಮತಿಯ ಕಡುವನಿವ
ಸಾಯಸ ಕಲಿಯಮ್ಮ ಗೋಪೆಮ್ಮಾ ೨

ಇದರೇರಿ ಚಿನ್ನವರಾ ಇಕ್ಕಿ ಅಂಗವ ತೋರಾ
ಕದನ ವೆಂದರ ಕಾಲ ಕೆದರಿ ಪೊರೆವ ಬಾಲಾ
ಅದ್ಭುತ ವಿಕ್ರಮನೆ ಗೋಪೆಮ್ಮಾ
ಉದ ಧಿಗಂಜನು ಧುಮುಕಿ ಉಲುವಾ ಬುದ್ಧಿಯ ಸೊಕಿ
ಮುದದಿ ವಾಜಿರಿಸೇ ಮಹಿಪತಿಸುತ ಪ್ರಭು
ಬುಧ ಜನರೊಲುವಂತೆ ಗೋಪೆಮ್ಮಾ ೩

## ೧೬೦

ಎಂಥಾ ಮಾಯಾಗಾರನೇ ತನ್ನಂತವ
ದೋರನು ಬ್ರಹ್ಮಾದಿಕರಿಗೆ ಪ

ದುಷ್ಟತನವ ಮಾಡಲು ಮನಿಮನಿ ಪೊಕ್ಕು।
ಸಿಟ್ಟಿಲೆ ಕಣ್ಣಿಲೆ ಚರಣವನು।

ಕಟ್ಟಲು ಒರಳನೆಳೆದುಕೊಂಡು ಹೋಗಿ।
ನೆಟ್ಟನೆರಡಮರಕೆಡಹಿದ ಕೃಷ್ಣಾ ೧

ಮಣ್ಣವನುಂಗಲು ಮುಳಿಯಲು ಗೋಪಿ।
ಚಿಣ್ಣರ ಕೇಳೆ ನಾನಿಲ್ಲೆನುತ।
ಸಣ್ಣ ಚೆಲುವಾ ಬಾಯಾ ನೋಡೆಂದು ತೆರೆದು ತಾ।
ಉನ್ನಂತ ಬ್ರಹ್ಮಾಂಡ ದೋರಿದಾ ಕೃಷ್ಣಾ ೨

ನೋಡು ಬಾಲಕ ರೂಪ ತಾನಾಗಿಹಾ।
ಪ್ರೌಢತನದಿ ಕೊಳಲನೂದಿ।
ರೂಢಿಲಿ ಗೋಪಿಕ ಮನಸೆಳೆದು ನಲಿ।
ದಾಡುವ ಮಹಿಪತಿ ಸುತಪ್ರಿಯ ಕೃಷ್ಣಾ ೩

## ೧೬೧

ಎಂದು ಕಾಂಬೆನೆ ಯದುವರನಾ।
ತಂದು ಲೋಲಿಸೆ ಸಖಿಜಿತ ರೂಪಸ್ಮರನಾ ಪ

ಶಿರಿದೇವಿ ಪ್ರೀಯನ ಶರಣಾಶ್ರಯನಾ।
ಸರಸಿಜ ಭವ ಭವ ಮುಖರೊಡೆಯನಾ ೧

ವಿಮಲೆ ಚರಣನಾ ಕಮಲೇಕ್ಷಣನಾ।
ಶಮಿತ ದುರಿತ ಕುಲದೀನೋದ್ಧರನಾ ೨

ಹೇಮಾಂಬರನಾ ಶಾಮಸುಂದರನಾ।
ಕಾಮಿತಾರ್ಥವ ನೀವ ಕರುಣಾ ಸಾಗರನಾ ೩

ತಂದೆ ಮಹಿಪತಿಯಾ ನಂದನ ಸಾರಥಿಯಾ।
ಹೊಂದಿದವ ಕಾಂಬಾನಂದ ಮೂರಿತಿಯಾ ೪

## ೧೬೨

ಏನಯ್ಯ ವಾರಿಜನಯನಾ । ಎನ್ನನುದ್ಧರಿಸಲಾರೆಯಾ ।
ದೀನಾನಾಥ ದಯಾಂಬುಧಿಯಂಬಾ ।
ಶ್ರೀನಾಮದ ಬಿರುದಿನ ಮಹಾಮಹಿಮನಾ ಪ

ನಾಮ ಪ್ರತಾಪಕ ಶಣಸುವ ಪಾತಕ ।
ತಾ ಮೊದಲಿಗೆ ಇಲ್ಲವೋ ಎನುತಾ ।
ಆ ಮಹಾಶೃತಿ ಸಾರುತಲಿರೆ ದುಷ್ಕೃತ ।
ನಾ ಮಾಡಿದ ಘನವಾಯಿತೇ ದೇವಾ ೧

ಗಜಗಣಿಕಾ ಅಜಮಿಳನಹಲ್ಯಾ ।
ವೃಜಗೋವಳ ವ್ಯಾಧರ ಮೊದಲು ।
ಭಜನಿಯಿರಲಿ ಇರದಿರಲಿ ಸನಾತನ ।
ನಿಜಪದದೋರಿದ ಪರಮ ಉದಾರಾ ೨

ನೀನೇ ಗತಿ ಎಂದಾನತೆ ನಾದೆ ।
ಇನ್ನೇನು ನೋಡುವಿ ಅಂತವಾ ।
ನ್ಯೂನವಾರಿಸದೆವೆ ತಾರಿಸು ಪಾಮರ ।
ವಣನವನನು ಗುರು ಮಹಿಪತಿ ಸ್ವಾಮಿ ೩

## ೧೬೩

ಏನು ಕಾರಣವಿಲ್ಲೆ ನಿಂದೇ ಅಶ್ವತ್ಥ
ಶ್ರೀ ನಾರಸಿಂಹೆನಿಸಿ ಅಜಭವರ ತಂದೇ ಪ

ಹೊರೆಯ ಲೈತರಲು ಹಂಬಲಿಪ ಪ್ರಲ್ಹಾದಿಲ್ಲ ।
ದುರಿತ ಪರಿಹರಿಸಲಿಕೆ ಹಿರಣ್ಯ ಕಾಸುರನಿಲ್ಲ ।

ಸುರರಿಗುಪಟಳವೇನು ಇಲ್ಲ ಸ್ತಂಭ ।
ಬಿರಿದು ದೋರುವ ಅಹೋಬಲದ ಸ್ಥಳವಲ್ಲ ೧

ಸಿರಿಯ ಮೋಹನ ನಿಮ್ಮ ರೂಪವನೆ ಆವರಿಸಿ ।
ಮರದ ಪೇರ್ಗಳೆಪಾದ ಕೊಂಬುಗಳ ಕರಧರಿಸಿ ।
ಸಿರಸಾಗ್ರ ಮಧ್ಯುದರ ವೆರಸೀ ಪರ್ಣ।
ದಿರುವ ಅವಯವ ಮಾಡಿ ಪಾದರ್ಪೆದ್ರನಿಸೀ ೨

ಧರೆಗಧಿಕ ಸುಕ್ಷೇತ್ರ ಶೂರ್ಪಾಲಯವೆ ನೋಡಿ ।
ಮೆರೆಯುತಿಹ ಕೃಷ್ಣ ವೇಣಿಯ ತೀರದಲಿ ಮೂಡಿ ।
ಹರಗರುಡ ಗಣಪರೊಡಗೂಡಿ ನಲಿವ ।
ಗುರುಮಹಿಪತಿ ಸ್ವಾಮಿ ಕಾಯೋದಯ ಮಾಡಿ ೩

## ೧೬೪

ಏನೆಂದು ಬಣ್ಣಿಪೆ ಶ್ರೀನಾಥ ನಿನ್ನಯ
ಆನಂದ ಮಹಿಮೆಗಳಾ ಸ್ವಾಮಿ
ಆ ನಾಕು ಶೃತಿಗಳು ಮೌನವ ಹಿಡಿದವು
ಅನಿರ್ವಚನೀಯಗಳಾ ಸ್ವಾಮಿ ೧

ವಾರಿಧಿ ಪಾತ್ರೆಯು ನೀರನೆ ಮಸಿ ಮಾಡಿ
ಧಾರುಣಿ ಹಲಗೆಯಲಿ ಸ್ವಾಮಿ
ಮೇರು ಲೇಖಣಿಯಿಂದ ಶಾರದೆ ಬರೆಯಲು
ಪಾರ ಗಾಣಲಿಲ್ಲೋ ಸ್ವಾಮಿ ೨

ಉರಗೇಂದ್ರ ಸಾಸಿರ ವೆರಡ ನಾಲಿಗೆಯಿಂದ
ತೆರವಿಲ್ಲ ಹೊಗಳಲಿಕ್ಕೇ ಸ್ವಾಮಿ
ಗುರುಮಹೀಪತಿ ಸುತ ಸಾರಥಿ ನಿನ್ನದಾ
ಸರಸ್ತುತಿರತಿ ನೀಡೋಸ್ವಾಮಿ ೩

## ೧೬೫

ಇಂದಿನ ದಿನವೇ ಶುಭದಿನವು ।
ಇಂದಿರೇಶನ ಕೀರ್ತಿಯ ಕೊಂಡಾಡಿದೆವೆಂದು ಪ

ಮುನ್ನ ಮಾಡಿದ ಜನ್ಮಾಂತರದ ದುಷ್ಕ್ರತವೆಂಬ ।
ಘನ್ನ ಕೆಸರಸೋಸಿ ಹೃದಯ ಶುದ್ಧಾಯಿತೆಂದು ೧

ಗುರುಕರುಣವೆಂಬ ತರಣಿ ಉದಯವಾಗಿ ।
ಪರಿಹಾರಾಯಿತು ಅಜ್ಞಾನವೆಂಬ ಕತ್ತಲೆಯಿಂದು ೨

ಎಂದೆಂದು ಮರೆಯದಂತೆ ದಯದಿಂದ ಮಹೀಪತಿ ।
ಕಂದ ನೊಡೆಯ ತನ್ನ ಸ್ಮರಣೆ ಕೊಟ್ಟನೆಂದು ೩

## ೧೬೬

ಏನೆಂದ್ಹೇಳಲಿರಂಗನಟ್ಟುಳಿ ಮಾನವರಂತಿವನಲ್ಲಾ
ತಾನಾರಿಗೆ ತನ್ನೆಲೆಗುಡ ಗೋಪೀ ಮಾನಿನಿಮಗ ಬಲುಹೊಲ್ಲಾ ಪ

ಕೆಳಗಿಲ್ಲದಲಿರೆ ಗೋರಸ ಭ್ಯಾಂಡ್ಯವು ।
ನೆಲವಿನ ಅಡಕಲ ನೋಡಿ ಅದು ।
ನಿಲಕದಲಿರೆ ಕೈಗೂಡಿ ಕಡ ।
ಗೋಲಿಲಿ ಯಜ್ಞ ಮಾಡೀ ।
ಗೆಳೆಯರ್ವೆರ ಸೈದ ಬಲುಸೂರ್‍ಯಾಡಿ ।
ಸಿಲುಕದ ಲ್ಹೋಗುವ ಪೋಡಿ । ೧

ಇಕ್ಕಿದ ಕದಗಳು ಇಕ್ಕಿರಬೇಕು ।
ಘಕ್ಕನೆ ಮನೆಯೊಳು ಸುಳಿದು ।

ಚಿತ್ತಕ ಮೋಹಿನಿಂದು ಅವ । ರಕ್ಕರದಲಿ ನೆರೆದು
ಚಿಕ್ಕ ಬಾರಕೆ । ಠಕ್ಕಿಸಿ ಹೊರುವ ಆ ಮಕ್ಕಳಾಟಿಕೇನಿದು ೨

ಖೂನಕೆ ಬಾರದೆ ತಾನಲ್ಲಿದಲಿಹ । ನಾನಾ ವೃತ್ತಿಗೆ ಬಂದು
ಇದು । ಧೇನಿಸಿ ನೆಲೆ ತಿಳಿಯದ । ನಾನಾ ನೆಂಬವರಿಗೆ ಇದು ।
ಶ್ರೀನಿಧಿ ಗುರುಮಹಿಪತಿ ಪ್ರಭುವಿನ ।
ಅನುಮಾನದಲೇ ದೂರುವುದು ೩

## ೧೬೭

ಓಂ ನಮೋ ರಾಘವೇಂದ್ರಾ ಪ

ಓಂ ನಮೋ ರಾಘವೇಂದ್ರಾ ಘನದಯ ದಾಸಾಂದ್ರಾ
ನಿನ್ನ ಭಕ್ತಜನರೆಂಬಾ ವಾರಿಧಿ ಪೂರ್ಣಚಂದ್ರಾ ೧

ಶ್ರೀರಾಮ ಜಯರಾಮ ಸ್ವಾಮಿ ಜಯಜಯ ರಾಮಾ
ಈರೀತಿ ಸ್ತುತಿಸಲಿಕೆ ಕೊಡುವಿ ವೈಕುಂಠ ಧಾಮಾ ೨

ಉಗ್ರ ವೃತ ತಪದಿಂದಾ ಜಪ ಅನುಷ್ಠಾನದಿಂದಾ
ಶ್ರೀಘ್ರದಿಂದ ಪಡಕೊಂಬಾ ಫಲಕಾಮ ಸನ್ನಿಧಾ ೩

ಹನುಮಬಲ್ಲಾ ಹರಬಲ್ಲಾ ಋಷಿನಾರದ ಬಲ್ಲಾ
ನೆನವನಾಮ ಸವಿಯಲೋ ಹೇಳಲಿಕೆ ಅಳವಲ್ಲಾ ೪

ಮರಳು ಮಾನವರಂತಾ ಎನ್ನ ನೋಡಬ್ಯಾಡ ಡೊಂಕಾ
ಗುರುಮಹಿಪತಿ ಸ್ವಾಮಿ ನಾಮ ವೆನೆವ ನಿ: ಶಂಕಾ ೫

## ೧೬೮

ಕಮಲಂಶಂಖಗದಾರಿಪಾಣಿಕಮಲಂ
ರಾಜೀಸುವದು ನಾಭಿಯಾ
ಕಮಲಂವತ್ಸದ ಬ್ರಹ್ಮನಂಘ್ರಿ ಕಮಲಂ
ಸುರಗಂಗೆಯಂ ಶೇಧೀಭಿಯಾ ಪ

ಕಮಲಂ ದ್ವೇಷಿಯ ಕೋಟಿ ಕಾಂತಿ ಕಮಲಂ
ನೇತ್ರನ್ನದಯ ಪೂರ್ಣದಾ
ಕಮಲಂ ಹಾರಿಸಿ ನೀಡುವ ಬುದ್ಧಿ ವಿಮಲಂ ನೇ
ಶ್ರೀ ವೆಂಕಟೇಶಂ ಸದಾ ೧

ಸಿರಿಯಂ ಮೋಹನದೇವ ನಿನ್ನ ಮಹಿಯಂ
ಪೊಗಳಲಿಲ್ಲ ಮತಿ ಸಲ್ಲದೇ
ಬರಿಯಂ ಮಾಯಕೆ ಶಿಲ್ಕಾ ಸಾಧುವನೆರಿಯಂ
ಆಶ್ರಯಸಿ ನೆಲೆಗೊಳ್ಳದೇ
ಸೋರೆಯಂತಾ ನೆರೆಮೂಢನಾಗಿ ಗುರಿಯಂ
ಭವಕಾದೆ ಪರಿಹಾರ ದಾ
ಪರಿಯಂ ಕಾಣದೆ ಬೇಡಿ ಕೊಂಬೆ ಧೋರಿಯಂ
ಶ್ರೀ ವೆಂಕಟೇಶಂ ಸದಾ ೨

ಒಡಲಂ ಪೋಷಣ ಮಾಡಿ ಕಾಮ ದೃಢಲಂ
ಪಟನಾದೆ ನೆರೆ ಭಾಗ್ಯದೀ
ನಡಲಂ ದೀಗಳಿ ಪಶ್ಚಾತ್ತಾಪ ಒಡಲಂ ಮನವಿಲ್ಲ ವೈರಾಗ್ಯ ದೀ
ಬಿಡಲಿನ್ನಾಧೀ ನವೇ ಅವಿದ್ಯಪಡಲಂ
ಮುಸುಕಿಪ್ಪು ದನಿವಾರ ದಾ
ಕಡಲಂ ಮನಿಯೆ ಕಾಯೋ ಸಾಖರದಿಡಲಂ
ಶ್ರೀ ವೆಂಕಟೇಶಂ ಸದಾ ೩

ತರಳಂ ಕರಿಯಾಲಾಗಿಸ್ತಂಭ ಸರಳಂ
ಬಿದಿರೀಸಿ ವಥ ಮಾಡಿದೇ
ದುರುಳಂದಾನವನಂಗ ನಿನ್ನ ಬೆರಳಂ
ಕೊನಿಯಿಂದ ಕಲಕ್ಯಾಡಿದೆ
ಕರಳಂ ಮಾಲೆಯ ಹಾಕಿಕೊಂಡು ವಿರಳಂ
ಮುದವಿತ್ತೆ ಭಕ್ತಂಗದಾ
ಮರಳಂ ಕಾವದು ಭಕ್ತಿಗಿಲ್ಲ ಹುರಳಂ
ಶ್ರೀ ವೆಂಕಟೇಶಂ ಸದಾ ೪

ಕಿರಣಂ ಸೂರ್ಯರ ಕೋಟಿ
ಕಾಂತಿಚರಣಾಂಬುಜಭಾವ ಭಕ್ತಿಂದಲಿ
ಶರಣಂ ಪೊಕ್ಕವರಿಂಗೆ ಜನ್ಮಮರಣಂ ಹರಿಸೂವದಯದಿಂದಲಿ
ಸ್ಮರಣಂ ಮಾಡಲು ಪಾಪಹರಣಂ ಸಲೆ ಸಾಧ್ಯಸುರ ಸಂಪದಾ
ಕರುಣ ಬೀರುತ ಕಾಯೋಯನ್ನಹರಣಂ
ಶ್ರೀವೆಂಕಟೇಶಂ ಸದಾ ೫

ರತನಂ ಜೋಲುವದೀಗ ಮಾನವ ತನುಂಪಡದೀಗ ಸದ್ಗತಿಯಾ
ಯತನಂ ಮಾಡದೆ ಅಂಧಕೂಪ ಪತನಂ
ಗಡ ಹೊಂದಿ ವಿಷಯೇಚ್ಛೆಯಾ
ಜತನಂ ಭೋಧವ ಗೈಯಲ್ಲಿಲ್ಲ ಸುತನಂ
ಅಪರಾಧವನು ಗಣಿ ಸದಾ
ಪಿತನಂ ತನ್ನಯ ಕಾಯೋ ಜ್ಞಾನ ಚ್ಯುತ ನಂ
ಶ್ರೀ ವೆಂಕಟೇಶಂ ಸದಾ ೬

ಯಜನಂ ಯಾಜನ ಮುಖ್ಯ ಕರ್ಮದಜನಂ
ಮೆಚ್ಚಿ ಸುಮನ ನರಿಯೆನು
ಸುಜನಂ ಮಾಡುವ ದಿವ್ಯ ನಿನ್ನಭಜನಂ
ಯಂತ್ರಿಪ್ಪ ದಾಂನರಿಯೆನು

ಗಜವಂ ತಾರಿಸಿದಂತೆಯನ್ನ ವೃಜಿನಂ ದಾಟೀ ಸುವಾ ಬಿರದಾ
ಕುಜನಂ ಸೇರಿದಂತೆ ಯನ್ನಂ ಕಾಯೋದ್ವಿಜನಂ
ಶ್ರೀ ವೆಂಕಟೇಶಂ ಸದಾ ೭

ಸದನಂ ಸುದ್ಗುಣ ಗಾಣದಬ್ಜವದನಂ ಸ್ಪರ್ಧಿಸುತಿದನುಜರಾ
ಕದನಂ ಕರ್ಕಶವಾಗಿ ಸೌಖ್ಯ ಪ್ರದನಂ ಭಾವಿಸುತಿಹ ಮನುಜರಾ
ಮದನಂ ನಿರ್ಜಿತ ರೂಪ ಕುಂದರದನಂ
ಸುಕುಮಾರ ಘನ ಶಾಮದಾ
ಇದನಂ ಬಣ್ಣಿಪರಾರು ವೇದವಿದಿನಂ
ಶ್ರೀ ವೆಂಕಟೇಶಂ ಸದಾ ೮

ಸಿರಿ ಕಾಂತಂ ಬಲಿಯಾ ಚ ಕಂದುದಯಸಾಗರನೆಂದು
ಶಿಖಿ ಕೇತನಾ
ದೊರದಂ ನೋಡದೆ ಕಾಯ ಬ್ರಹ್ಮ ನುತ
ಭಂಡಿಯವಾಧನು ಪ್ರಾರ್ಥನಾ
ಪರಬ್ರಹ್ಮ ತುರುಗಾಯ್ವನೆಂದು ಪೊಗಳ್ವಾರಿಂತರಿವರ್‍ಯೆ ಚರಿತದಾ
ಗುರು ಮಹಿಪತಿ ಕಂದಸಲಹೋ ಸ್ಮರಿಸಲು ಅಷ್ಟಕವಾ ೯

## ೧೬೯

ಕರುಣಾಕರಾ ಕಮಲಾರಮಣ
ಕರಿರಾಜ ಬಂಧನ ಹರಣಾ
ಸುರ ಬ್ರಹ್ಮ ಮುಖಾರ್ಚಿತ ಚರಣಾ
ಶರಣಾಗೆಲೋ ದೀನೋದ್ಧರಣಾ ಪ

ಅತಿಸುಂದರ ನಂದ ಕುಮಾರಾ
ಸುತ ನಾಗ್ಯೆ ತಂದನು ಮಾರಾ
ಅತನೇ ಕುಸುಮದ ಶರೀರಾ
ಸುತ ಸದ್ಗುಣ ಗಣ ಮಂದಾರಾ

ಪ್ರತಿಯುಗದಲಿ ಧರಿಸ್ಯೆವತಾರಾ
ಕ್ಷಿತಿಯೊಳು ಪಾಲಿಪ ಸುರನಿಕರಾ ೧

ಜಲಧಿ ಯೊಳಗೆರಡು ರೂಪಾದೆ
ಸಲೆ ವೇದಾಮೃತವನು ತಂದೆ
ಬಲಿದೀ ಕ್ರೂರಾಂಗವ ವಿಡಿದೆ
ಇಳೆಸಲೆ ಪ್ರಲ್ಹಾದರ ಹೊರೆದೆ
ನೆಲೆ ಪ್ರಥಮಾಶ್ರಮದಲಿ ನಿಂದೇ
ಬಲಿ ಜಮದಗ್ನ್ಯರ ತೋಷಿಸಿದೆ ೨

ಎರಡನೆ ವರ್ಣದೊಳಗೆ ಜನಿಸಿ
ಸುರ ಪಾಂಡವರೇಳಿಗೆ ಬಲಿಸಿ
ನೆರೆ ಅಂತ್ಯಯುಗದಿ ಅವತರಿಸಿ
ಪುರಹರ ದ್ವಿಜರಭಿಮತ ಸಲಿಸಿ
ಗುರು ಮಹಿಪತಿ ಪ್ರಭು ಕರುಣಿಸಿ
ಹೊರಿಯೋ ನಿನ್ನೆಚ್ಚರ ನಿಲಿಸಿ ೩

## ೧೭೦

ಕರುಣಿಸು ಶ್ರೀ ರಾಮಾ ಪ

ವಾರಿರುಹನಯನ ಜೀಮೂತ ಶ್ಯಾಮಾ ।
ಪೂರಿತ ಮನೋಕಾಮಾ ೧

ದೀನೋದ್ಧರಣಾ ಸದ್ಗುಣ ಧಾಮಾ ।
ಶ್ರೀನಿಧೀ ಸಾರ್ವಭೌಮಾ ೨

ಗುರುಮಹಿಪತಿ ಸುತ ಪ್ರಭು ಸರ್ವಾತ್ಮಾ ।
ಸುರಮುನಿ ವಿಶ್ರಾಮಾ ೩

## ೧೭೧

ಕರೆತಾರೆ ನೀ ಮನದಾ ಮೋಹನನಾ ಸುಜ್ಞಾನೇ ಪ

ಸ್ಮರನ ಬಾಣಕ ಶಿಲ್ಕಿ ಬಲಿಯೊಳಗಾದೆ ।
ಹರಿಯಾ ನಗಲಿ ಅಸುವಿಡಿಯೇ ನಿನ್ನಾಣೆ ೧

ಮರುಳು ಮಾನಿನಿಯಳ ಮಾನ್ಯಳ ಮಾಡೀ ।
ಕೊರತೆ ನೋಡುವದಿನ್ನು ಉಚಿತವೇ ಜಾಣೆ ೨

ಗುರುವರ ಮಹಿಪತಿ ನಂದನ ಸ್ವಾಮಿ ।
ಕರುಣಾ ಸಾಗರನೆಂಬಾ ಬಿರುದ ಕಿದೇನೆ ೩

## ೧೭೨

ಕರೆದುಣ್ಣಲಿಲ್ಲಾ ಹರಿನಾಮ ಕಾಮಧೇನುವನು ಪ

ನೆನೆವರಾ ಹೊರೆಯಲು ಅನುವಾಗಿ ಬಂದಿರಲು ।
ಮನುಜ ಮೈ ಮರೆವರೆ ನೀನು ೧

ಮನವೆಂಬ ಕರುಬಿಟ್ಟು ಘನ ಭಕ್ತಿ ಮುರವಿಟ್ಟು ।
ತನುವಿನ ಪಾತ್ರೆಲಿ ನೀನು ೨

ಕರುಣದಾ ಕೆಚ್ಚಲು ತೊರೆದು ಭೊರ್ಗರೆಯಲು ।
ಅರಿವೆಂಬ ಕೈಯಿಂದ ನೀನು ೩

ಗುರು ಮಹಿಪತಿಕಂದಗರುಹಿದ ನಿಜಾನಂದ
ಸಿರಿಸುಖವ ಪಡೆಯಲು ನೀನು ೪

## ೧೭೩

ಕಾಣಲಿಲ್ಲೇ ದೇವರ ನೋಡಲಿಲ್ಲೇ ಪ

ವಿಶ್ವದೋಲಾಡುವ ವಿಶ್ವಂಭರಿತ ಹರಿ ೧

ದೂರಿಹನೆ ನ್ನದೆ ಸಾರೆವೆ ಭಾವಿಸಿ ೨

ಗುರುಮಹಿಪತಿ ಪ್ರಭುಗುರುತಕತದೊಮ್ಮೆ ೩

## ೧೭೪

ಕಾಯಬೇಕೆಲೋ ರಂಗಾ ಎನ್ನಾ ।
ನೀ ಕಾಯಬೇಕೆಲೋ ರಂಗಾ ।
ತೋಯಜಾಕ್ಷ ದಯಾನಿಧಿ ತರಣೋ ।
ಪಾಯದೋರೋ ಶುಭಾಂಗಾ ಪ

ದುರಿತ ಸಮೂಹವ ಬಂದು । ಶಣಸುತ ।
ಹರಿದಂಜಿಸುತಿವೆಯಿಂದು ।
ನರಹರಿ ನಿನ್ನ ನಾಮದ ಘನಗರ್ಜನೆಯ ।ಕೊಡು ।
ಮರಳು ಮಾನವನಿವನೆಂದು ೧

ಕುಂದನಾರಿಸಿಯೆಲ್ಲಾ ನೋಡಲು ।
ಒಂದೆರಡೆನಲಿಕ್ಕಿಲ್ಲಾ ।
ಮಂದಮತಿ ಅವಗುಣ ರಾಶಿ ಪತಿತರ ।
ವೃಂದದೊಳೆನ್ನಧಿಕಲಾ ೨

ಕೊಂಬು ನೀಚನವಾದರೆ ಬಿರದಾ ।
ಡಂಬರ ನೀಚನಲ್ಲಾ ।
ಇಂಬುದೋರೆಲೆ ನಿನ್ನ ದಾಸರ ದಾಸ ।
ಎಂಬದೆನ್ನಧಿಕಾರವಿಲ್ಲಾ ೩

ಬಿನ್ನಹವೆನ್ನ ಮುರಾರಿ । ಪಾಲಿಸಿ ।
ನಿನ್ನ ಚರಣವ ದೋರಿ ।
ಧನ್ಯಗೈಸೆಲೋ ಗುರುವರ ಮಹಿಪತಿ
ಚಿನ್ನನೊಡಿಯ ಸಹಕಾರಿ ೪

## ೧೭೫

ಕಾಯಯ್ಯಾ ಎನ್ನಾ ಪ

ಸರಸೀರುಹ ಶತಕಿರಣಾ ।
ಅರುಣಾಂಬುಜಾಲಯ ರಮಣಾ ।
ಅರುಣಾನುಜ ಗಮನಾ । ಅರಿದಮನಾ ೧

ಸುರನರ ಕಿನ್ನರ ಸುತ ಚರಣಾ ।
ಶರಣಾಗತ ಜನಭಯ ಹರಣಾ ।
ಅರುಣಾದ್ರಿ ನಿಲಯ ಸಖಚಿದ ನಾ ೨

ಗುರು ಮಹಿಪತಿ ಸುತ ಪ್ರಭು ಕರುಣಾ ।
ಹರಿಣಾಂಕ ಕುಲವರ ರನ್ನಾ ।
ಧರಣಿ ಧರಧರ ದೀನೋದ್ಧರಣಾ ೩

## ೧೭೬

ಕಾಯಯ್ಯಾ ಕಾಯೊ ಮುರಾರಿ । ದಯದಲೆನ್ನಾ ಪ

ತರಳತೆಯಿಂದಾ ಸ್ಮರಣೆಯ ನಿನ್ನಾ ।
ಮರೆದುನೊಂದೆ ಬಹು ಪರಿದಯದಲೆನ್ನಾ ೧

ಮತಿಹೀನನೆಂದು ಒಲಮಿಲಿ ನೋಡಿ ।
ಅತಿ ಜವದಿ ಪಾದ ದೋರಿ ದಯದಲೆನ್ನಾ ೨

ಮಹಿಪತಿ ನಂದನ ಜೀವನರಾಮಾ ।
ಅಹಿತರ ವಂಶವಿದಾರಿ ದಯದಲೆನ್ನಾ ೩

## ೧೭೭

ಕಾಯಿ ಕಾಯಯ್ಯಾ । ಅನಾಥ ಬಂಧೋ ಪ

ಶರಣರ ದುರಿತಪಹರಣ ಸುಪಾವನ ।
ಚರಣನೆ ಕೌಸ್ತುಭಾಭರಣ ಹೇಮಾಂಬರಾ ।
ವರಣ ಗೋವರ್ಧನೋದ್ಧಾರಣಾ ತರಣಿ ಶತ ।
ಕಿರಣ ವಿರಾಜಿತ ಕರುಣಾ ಸಿಂಧೋ ೧

ವಾರಣಭಯ ನಿವಾರಣ ಸುರಜನ ।
ತಾರಣ ದೈತ್ಯ ವಿದಾರಣ ಸೃಷ್ಟಿಯೆ ।
ಕಾರಣ ಚಿತ್ಸುಖ ಪೂರಣ ಮುನಿಜನ ।
ಪ್ರೇರಣ ಫಣಿಮದ ಹಾರಣ ಧೀರಾ ೨

ಇಂದಿರೆ ನಯನಾನಂದ ಚಕೋರ ಸು ।
ಚಂದಿರ ಸ್ಮರಚಿತ ಸುಂದರ ಸದ್ಗುಣ ।
ಮಂದಿರ ವಿಧಿಹರ ವಂದ್ಯ ಮುಕಂದನೇ ।
ತಂದೆ ಮಹಿಪತಿ ನಂದನ ಪ್ರಾಣಾ ೩

## ೧೭೮

ಕಾಯಯ್ಯ ರಘುನಾಥ ಧೀನಜನೋದ್ಧಾರಿ ಪ

ಕೇವಲ ಪತಿತ ಪಾಮರ ನಾನು
ಕೇವಲ ಪಾವನ ಮೂರುತಿ ನೀನು
ಕೇವಲ ಘನ ಅಪರಾಧಿಯು ನಾನು
ದೇವನೀ ಕರುಣಾ ಸಾಗರ ೧

ಭಾವ ಭಕ್ತಿಯ ಕೀಲವ ನರಿಯೇ
ವಿವೇಕ ಮತಿ ನೀ ನೀಡುವ ಧೊರೆಯೇ
ಆವಾಗ ವಿಷಯಾ ಸಕ್ತನು ಹರಿಯೇ
ಕಾದ ದೈವನು ನೀನ್ನೈ ೨

ಚರಣವೇ ಗತಿ ಯೆಂದಾ ನತ ನಾದೇ
ತರಳನ ಕುಂದಾಲಿಸದಿರು ತಂದೇ
ಗುರು ಮಹಿಪತಿ ಪ್ರಭು ನಮೋಯಂದೇ
ಶರಣಾಗತ ಸಹಕಾರೀ ೩

## ೧೭೯

ಕಾಯೋ ಕರುಣಾನಿಧೆ । ಶ್ರೀ ಹರಿ ।
ಖಗವರ ಗಮನಾ ಪ

ಘೋರ ಸಂಸಾರದ ತಾಪದಿ ನೊಂದೆ ।
ವಾರಿ ಭವ ಭಯ ಅಘಕುಲ ಶಮನಾ ೧

ಜ್ಞಾನ ಧ್ಯಾನದ ನಿಜ ಸಾಧನವರಿಯೆ ।
ನೀನೆ ಗತಿಯೆನುತ ಮಾಡುವೆ ನಮನಾ ೨

ಗುರು ಮಹೀಪತಿ ಪ್ರಭು ಅನಾಥ ಬಂಧು ।
ಚರಣದ ಭಜನೆಯ ಲಿರಿಸೆನ್ನ ಮನ । ೩

## ೧೮೦

ಕಾಯೋ ಕರುಣಿಸಿ ಎನ್ನ ರಂಗಾ ।
ಬೇಗನೇ ಪಾದವದೋರಿಸಿ ।
ನಮನಕ ಭವಬಲಿಯನು ಬಿಡಸಿ ರಂಗಾ ಪ

ಶರಣೆಂದು ಸಕಲರು ಬಂದು ಪೋಗುವಾ ।
ನಿನ್ನ ಮಹಾದ್ವಾರದಲಿ ।
ಇರುತಿಹ ನಿನ್ನಯ ಭಕುತ ಬಲೆಯಲಿ ।
ಇರಿಸಿ ನೀ ಇಟ್ಟು ಅಚಲದಲಿ ರಂಗಾ ।
ಸಂಬಳನಿತ್ತಿಹ ಧನವ ನಾನೊಲ್ಲೆ ।
ಬೇಡುವೆ ಒಂದನೋ ರಂಗಾ ।
ಹಂಬಲ ದಣಿವಂತೆ ನಾಮ ಭಾಂಡಾರವ ।
ಮಾಡೆನ್ನ ಆಧೀನವ ರಂಗಾ ೧

ಕರಿದಲಿಧೃತಿ ಚಿತ್ತವನಿತ್ತು ಅನುದಿನಾ ।
ಹರಿಪಾದ ಸದ್ಭಕ್ತಿಯಾ ರಂಗಾ ।
ಮೆರೆವ ಮಂಟಪದೊಳು ನಿಲಿಸೆನ್ನ ।
ದುರಿತವ ತಟ್ಟದಂದದಿ ಪೊರೆಯೋ ರಂಗಾ ೨

ಇಹಪರದಲ್ಲಿ ಏಕೋದೇವನೆಂಬ ಮುದ್ರೆಯಾ
ಭಾವದ ಬಲದಿಂದಲಿ ।
ಮಹಿಪತಿ ಸುತ ಪ್ರಭು ಕೊರಳಿಗೆ ಹಾಕಿನ್ನು ।
ಸಲಹು ನೀ ಕೃಪೆಯಿಂದಾ ರಂಗಾ ೩

## ೧೮೧

ಕಾಯೋ ದಯದಿಂದೆನ್ನ ಕಾರುಣ್ಯ ನಿಧಿಯೇ ।
ಯದು ನಾಯಕನೇ ದೇವ ದೇವಾ ಪ

ಪುಷ್ಯರಾಗದಿ ನವರತ್ನ ಪದಕಧರ ।
ಘನಶ್ಯಾಮ ಉರಗಶಯನಾ ।
ಕಶ್ಯಪ ವಸಿಷ್ಠಾದಿ ಸ್ಮರಣೆ ಮಾಳ್ಪವರಿಂಗೆ ।
ದೃಶ್ಯನಾಗಿಹ ಮುರಾರಿ ಶೌರಿ ೧

ನಂದಸುಕುಮಾರ ಸಿರಿನಾರಿಯ ।
ಸದ್ಭಕ್ತವೃಂದ ರಕ್ಷಕ ಭೂಧರಾ ।
ಇಂದಿರಾ ಭಾವನೆಯೂ ಪೂರಿತಿಕೇಳು ।
ಜಗವಂದ್ಯ ಮುಕುಂದ ಗರುಡರೂಢಾ ೨

ಚಕ್ರಕರ ಕಮಲಾಕ್ಷ ಚತುರಾಸ್ಯ ಜನಕ ಬಲಿ ।
ಚಕ್ರವರ್ತಿಗೆ ವರದನಾ ।
ಶಕ್ರನುತ ಮಹಿಪತಿ ಸ್ವಾಮಿ ಸುತ ಪ್ರೀಯಾ ।
ತ್ರಿವಿಕ್ರಮನೆ ಕೋಮಲಾಂಗಾ ರಂಗಾ ೩

## ೧೮೨

ಕಾಯೋ ಪರಮಾನಂದಾ ನಾರಾಯಣಾ ।
ತೋಯಜಾದಳ ನಯನ ಗರುಡ ಗಮನಾ ಪ

ಕರವರಗ ದುಷ್ಟ ಜಲಚರ ಬಂದು ಪಿಡಿಯಲ್ಕೆ ।
ಭರದಿಂದ ನಿನ್ನ ಸ್ಮರಣೆಯಾ ಮಾಡಲು ।
ತ್ವರಿತದಿಂದಲಿ ದೇವ ಬಂದು ಆತನ ಮಹಾ ।
ದುರಿತವನು ಪರಿಹರಿಸಿ ಕಾಯಿದೆ ಹರಿಯೇ ೧

ಅರಗಿನಾ ಮನಿಯೊಳುಪಾಂಡವರುಸಿಲುಕಿರಲು ।
ಹರಿ ನೀನೇ ಗತಿಯೆಂದು ಸುಮ್ಮನಿರಲು ।
ಸಿರಿಲೋಲ ಅದುಕೊಂದು ಪಾಯವನು ರಚಿಸಿದಾ ।
ವರಕಡಿಗೆ ಪೊರಮಡಿಸಿಕಾಯಿದೆ ಹರಿಯೇ ೨

ಶರಣ ಪ್ರಲ್ಹಾದಂಗ ದನುಜ ಪೀಡಿಸುತಿರಲು ।
ಕರುಣ ಸಾಗರ ನಿಮ್ಮ ಧ್ಯಾನಿಸಲ್ಕೆ ।
ಕರುಳ ಬಗೆದುಕಾಯಿದೆ ಹರಿಯೇ ।
ನರಹರಿಯ ರೂಪದಿಂದ ಸ್ಥಂಬದೊಳಗುದ್ಭವಿಸಿ ೩

ದ್ರುಪದ ತನು ಸಂಭವಿಯ ಸೀರೆಯನ್ನು ಸೆಳೆಯಲ್ಕೆ ।
ತ್ರಿಪುರಾರಿ ಸಖ ನಿಮಗೆ ಮೊರೆಯಿಡಲು ।
ಅಪರಿಮಿತ ವಸ್ತ್ರಗಳ ಪೂರೈಸಿ ರಕ್ಷಿಸಿದೆ
ಕಪಟನಾಟಕ ದಯಾನಂದ ಹರಿಯೆ ೪

ಈ ರೀತಿಯಲ್ಲಿ ಬಹು ಭಕ್ತರನು ಕಾಯಿದೆ ।
ಮುರಹರಿ ಧ್ಯಾನ ಸ್ಮರಣೆ ಯಂಬನದನು ।
ದಾರಿಯನು ಅರಿಯದ ಅಜ್ಞಾನಿಯ ಪರಾಧವನು
ಸೈ ರಿಸುದು ಮಹಿಪತಿ ಸುತ ಪ್ರಿಯನೇ ೫

## ೧೮೩

ಕಾಲಕಾಲದಿ ಕರುಣಿಗಳರಸನಾದ
ರಾಮಾ ಎನಬಾರದೇ । ಜಗ ।
ಪಾಲಕ ನಿನಗಿಹಪರಗಳ ನೀವಾ ಪ

ಪಂಚಾಗ್ನಿಯಲಿ ದೇಹ ಬಳಲಿಸುವದ್ಯಾತಕ ।
ರಾಮಾ ಎನಬಾರದೇ । ಪ್ರ ।
ಪಂಚ ತೊರೆದು ವನವಾಸ ಹಿಡವುದ್ಯಾಕ ।
ರಾಮಾ ಎನಬಾರದೇ ॥
ಒಂಟಿ ಕಾಲಿನ ಯೋಗಧಾರಣವ್ಯಾಕ ।
ರಾಮಾ ಎನಬಾರದೇ । ಪುಣ್ಯ ।
ಸಂಚಿಸೆ ಕೃಚ್ಛೆ ಚಾಂದ್ರಾಯಣಿ ವೃತವ್ಯಾಕ ।
ರಾಮಾ ಎನಬಾರದೇ ೧

ಮಂಡಿಸಿ ಪಶುವಧಯಾಗ ಮಾಡುವದ್ಯಾಕ
ರಾಮಾ ಎನಬಾರದೇ । ಅ।

ಖಂಡದಿ ಘಟಪಟ ಕರ್ತಬೋಧಗಳ್ಯಾಕ
ರಾಮಾ ಎನಬಾರದೇ ॥
ಮಂಡೆ ಬೋಳಿಸಿ ಭಿಕ್ಷಾನ್ನ ಬಯಸುವದ್ಯಾಕ ।
ರಾಮಾ ಎನಬಾರದೇ । ಜಗ ।
ಭಂಡರಂದದಿ ಬತ್ತಲೆ ತಿರುಗುವುದ್ಯಾಕ ।
ರಾಮಾ ಎನಬಾರದೇ ೨

ಉಂಬಾಗ ಉಡುವಾಗ ಕೊಂಬು ಕೊಡುವಾಗ ।
ರಾಮಾ ಎನಬಾರದೇ । ಸರ್ವಾ ।
ರಂಭದಿ ಸತಿಸುತಲಾಲನೆ ಮಾಳ್ಪಾಗ ।
ರಾಮಾ ಎನಬಾರದೇ ॥
ತಿಂಬು ತಾ ಕಳಿಸುತಾ ಎಡಹುತಾಣಕಿಸುತಾ
ರಾಮಾಎನಬಾರದೇ । ಇದು ।
ಸಂಭ್ರಮದಲಿ ಮಹಿಪತಿ ಸುತ ಸಾರಿದಾ
ರಾಮಾ ಎನಬಾರದೇ ೩

## ೧೮೪

ಕಾವದು ಎನ್ನನುದಿನಾ ರಂಗಾ।
ಕಾವದು ಕಾವದು ಎನ್ನನುದಿನಾ ।
ಭಾವಿಕ ಜನರ ನಿಧಾನಾ ಪ

ಜಲದಲಿ ಕರಿಯಾ ಪಿಡಿದ ಮಕರಿಯಾ ।
ಸೀಳಿದ ಯಾದವರಾಯಾ ।
ಇಳೆಯೊಳು ಗಿರಿಯಾ ಧರಿಸಿದೆ ಗರಿಯಾ ।
ಕುಲ ಅರಿನಂದನ ಪ್ರೀಯಾ ೧

ರಮಣನೆ ಸಿರಿಯಾ ಲಲನೆಗೆ ಸೀರಿಯಾ ।
ಸಮಯಕ ನಿತ್ತ ಅನೇಕ ।

ಕಮನೀಯ ಕಾಯಾ ದೇವ ನೀ ಕಾಯಾ ।
ಜನಕನೇ ವ್ಯಾಪ್ತ ತ್ರಿಲೋಕಾ ೨

ಸರಸಿಜನಯನಾ ಸಾಸಿರ ನಯನಾ ।
ಸೋದರ ದೇವ ದೇವೇಶಾ ।
ವರಸದ್ವದನಾ ಈ ರೆರಡೊದ ನಾ ।
ವಂದಿತ ಚರಣಾ ಶ್ರೀಯೀಶಾ ೩

ಭಕುತರಬಂಧು ಕೈರವ ಬಂಧು
ಶೇಖರಧೇಯ ಮುಕುಂದಾ ।
ಸಕಲಾಧಾರಾ ದಿನೊದ್ಧಾರಾ ।
ದೇವಕಿ ದೇವಿಯ ಕಂದಾ ೪

ಸುಜನರ ಪಕ್ಷಾ ಕುಜನ ವಿಪಕ್ಷಾ ।
ಶ್ರೀ ವತ್ಸಾಂಕಿತ ದೇವಾ ।
ಗಜವರ ವರದಾ ಯದುಕುಲ ವರದಾ ।
ನವಮರ್ಧನ ಜಗಜೀವಾ ೫

ಕಾಳಿಯ ಸರ್ಪಾ ಮದಹರ ಸರ್ಪಾ।
ಶನವಾಹನ ಗೋವಿಂದಾ ।
ಶ್ರೀ ಲಲನೀಯಾ ಸದ್ಭಾವನೀಯಾ ।
ಪೂರಿತ ಪರಮಾನಂದಾ ೬

ಕರುಣಾ ಸಿಂಧು ದುರಿತದ ಸಿಂಧು ।
ವಿಗಾಗಿಹೆ ಕುಂಭಜ ನೀನು ।
ಸಿರಿವರ ರಂಗಾಯ ಹರಣ ರಂಗಾ ।
ಧೀರನೇ ಭಜಕರ ಧೇನು ೭

ನವನೀತ ಚೋರಾ ನಿಗಮದ ಚೋರಾಂ ।
ತಕ ಗೋಕುಲ ವಿಹಾರಾ ।

ಭವ ಪರಿಹಾರಾ ಕೌಸ್ತುಭಧಾರಾ ।
ಮಹಿಪತಿಸುತ ಮನೋಹಾರಾ ೮

## ೧೮೫

ಕೇಳವ್ವ ಗೋಪಿ ನಿನ್ನ ಬಾಲನ ಮಾಡುವ ಆಟದ ಪರಿಯನು ಪ

ತುಡುಗಿಲಿ ಗೋರಸ ಕುಡಿವಾ । ಅವ ।
ಘಡಿಸಲು ಕಣ್ಣನೆ ಬಿಡುವಾ ।
ಹಿಡಿಯಲು ಬರೆ ಬೆನ್ಗೊಡುವ । ಅಡಿ ।
ಇಡುತಲಿ ತಿರುಗದೆ ಓಡುವನವ್ವಾ ೧

ಕೊಡಮಸರಿಗೆ ಬಾಯ್ದೆರೆವಾ । ತಾ ।
ಬೇಡುವ ಪಸರಿಸಿ ಕರವಾ ।
ಕೊಡಲಿ ದಣಿಯದೆ ಸುರಿವಾ । ನ ।
ಟ್ಟಡವಿಲಿ ನಿಂದು ಹೊರೆವನವ್ವಾ ೨

ಕೊಳಲನೂದಿ ಹೊಳೆವಾ । ಹೆಂ ।
ಗಳೆಯರ ಸನ್ಮತಿಗಳೆವಾ ।
ಅಳುಕದೆ ವಾಜಿಲಿ ನಲಿವಾ । ಇಳೆ ।
ಯೊಳು ಮಹಿಪತಿ ಸುತ ಪ್ರಭು ಲೀಲೆವ್ವಾ ೩

## ೧೮೬

ಕೇಳಿ ಬಂದೆ ಪ

ಕೇಳಿ ಬಂದೆ ನಿನ್ನ ಮೊರೆಹೊಕ್ಕವರ ಕೈಯ್ಯಾ ।
ಇಳೆಯೊಳಗ ಬಿಡನೆಂಬ ಬಿರುದವ ನಾ ೧

ಸುಗ್ರೀವ ತಾ ಮಗೆ ಒಡಲವನು ವಾಲಿಯನು ।
ನಿಗ್ರಹಿಸಿರಾಜ್ಯ ಪದವಿತ್ತನೆಂದು ೨

ಶರಧಿ ಧಡಿಯಲಿ ವಿಭೀಷಣನು ಶರಣವನು ।
ಬರಲು ಧೃಡ ಸಂಪತ್ತು ನಿತ್ತನೆಂದು ೩

ಖಂಡಿಸಿ ಕೌರವರ ಬಳಗವನು ಸೈನ್ಯವನು ।
ಪಾಂಡವರನು ಸ್ಥಾಪನೆ ಗೈದಾನೆಂದು ೪

ಏನ್ನನು ಪೇಕ್ಷಿಸದಿರು ನೀನು ಕಾರಣನು ।
ಸನ್ನುತ ಮಹಿಪತಿ ಸುತ ಜೀವನಾ ೫

## ೧೮೭

ಕೊಡು ಹರಿಯೇ ದಾಸರ ಸಂಗವನು ಪ

ತವ ಮಂಗಳ ಚರಿತಾಮೃತ ದಡಿಯಾ ।
ಶ್ರವಣದಿ ಸವಿಸವಿದುಂಬುವಿ ರಂಗಾ ೧

ಮೊಡವಿಲಿ ಭಜನಿಯ ದಾರಿಯ ದೋರೀ ।
ಬಿಡಿಸುವರು ಮುನ್ನಿನ ಮನದಂಗಾ ೨

ಗುರುಮಹಿಪತಿ ಪ್ರಭು ಧನ್ಯನಾಗುವೆನು ।
ಬೆರೆಸಲು ಸರಿ ತಾಗುವ ಪರಿ ರಂಗಾ ೩

## ೧೮೮

ಕೃಷ್ಣಾ ಬಿಡು ದಾರಿ ದಾರಿ ದಾರಿ ಪ

ನೀನೊಲಿದೆನ್ನಕೂಡ ಸರಸವ ನಾಡುವರೆ ।
ನಾನೆರೆ ಗಂಡುಳ್ಳ ನಾರಿ ನಾರಿ ನಾರಿ ನಾರಿ ೧

ಮಾರಲು ಬಂದಿಹ ನೆರೆದ ಗೊಲ್ಲತೆಯರಾ ।
ಗೋರಸ ಮಾಡದಿರು ಸೂರಿ ಸೂರಿ ಸೂರಿ ೨

ಗುರು ಮಹಿಪತಿ ಪ್ರಭು ಕಣ್ಣಿಲೆ ಕಂಡವರ ।
ಕರವ ಬಿಡವನಲ್ಲಾ ಜಾರಿ ಜಾರಿ ಜಾರಿ ಜಾರಿ ೩

## ೧೮೯

ಕೃಷ್ಣಾಕಾಯೋ ಕರುಣಾನಿಧಿಯೇ ಕಾಯೋ ಕಾರುಣ್ಯನಿಧಿಯೆ
ಯದು ಕುಲಾಂಬುನಿಧಿ ಪೀಯೂಷಕ್ಷಕರ
ಪಂಚಸಾಯಕಾನಂತ ಕಮನೀಯ ರೂಪಾ
ಕಮಲಾಯತಾಕ್ಷನೆ ಬ್ರಹ್ಮ, ವಾಯು, ಸುರಮುನಿ .
ಮುಖ್ಯಧ್ಯೇಯ ವಿಷ್ಣೋ ಪ

ಗೋತ್ರಾರಿ ಪುತ್ರನಿಜಮಿತ್ರ ಸುಪವಿತ್ರ ಚಾ
ರಿತ್ರ ಲೋಕತ್ರಯಾರ್ಚಿತ ಶ್ರೀ ಕಳತ್ರ ಶುಭಗಾತ್ರಗತಿ
ಸತ್ರತ್ರಿನೇತ್ರನುತ ಸಕಲಜಗ
ಸೂತ್ರ ನೋಟಕ ತೋತ್ರವೇತ್ರ ಪಾಣೆ ೧

ರಂಗ ಭವ ಭವ ಭಂಗ ವರಗೋಪಾಂಗನಾ ಅಂಗ
ಸಂಗಲೀಲಾರತ ಭುಜಂಗ ಪರಿಯಂಕ ಸುರ

ತುಂಗ ಗಂಗಾಜನಕ ಸರ್ವಾಂತರಂಗ ಹರಿ
ಮಂಗಳಾತ್ಮಕ ತಿರುವೆಂಗಳೇಶಾ ೨

ನಂದಕಂದ ಶ್ರೀ ಮುಕುಂದ ದುರಿತಾಂಧ ಅರ
ವಿಂದಭಾಂಧವ ದಿತಿ- ಜವೃಂದ ವ್ಯಾಳಖಗೇಂದ್ರ
ತಂದೆ ಮಹಿಪತಿ ನಂದನ ಪ್ರಿಯ ಗೋವಿಂದ ಆ
ನಂದ ಕಂದನೆ ಸಿಂಧುಶಯನ ದೇವಾ ೩

## ೧೯೦

ಕಂಡಿರೇನೇ ರಂಗನಾ ನಿಮ್ಮ ಮನೆಗಳಲ್ಲಿ
ಕಂಡರೆ ಹೇಳಿರಮ್ಮಾ ಒಂದು ಮಾತಿನಲಿ
ಬೆಂಡಾದೆನೇ ಅರಸುತ ನಾನಾದಾರಿಗಳಲ್ಲಿ
ಪುಂಡರೀಕಾಕ್ಷನು ದೋರನು ಎಲ್ಲಿ ಮಣಿ
ಕುಂಡಲ ಮಂಡಿತ ಗಂಡ ಕಪೋಲ ಪ್ರಚಂಡನ ಲೀಲೆ ೧

ಒಮ್ಮೆ ಭಾವಿಕ ಗೋವಳರಾ ಆಟ ಪಾಟದಲಿರುವಾ
ಒಮ್ಮೇ ಕಾಮುಖ ಗೊಲ್ಲತೇರಾ ಚಿತ್ತಕಾನಂದ ನೀವಾ
ಒಮ್ಮೆ ಯಜ್ಞ ಪತ್ನಿಯರಾ ಸವಿಯಾಟ ಕವಲಿವಾ
ಅಮ್ಮ ಒಂದೇ ಠಾರ್ವನೇ ಹೇಳುವಾ ಅವ ನಿಮ್ಮವನೇ
ತಮ್ಮನೇ ಸುಮ್ಮನೇ ತಿರುಗುತ ಘಮ್ಮನೇ ಝುಮ್ಮನೇ ಹೊಳೆವಾ ೨

ಮಲ್ಲ ನಾಭನ ಕಾಣದಿರೇ ಕಣ್ಣು ಕುರುಡವು ನಮ್ಮ
ಸೊಲ್ಲ ವಾಲಿಸದಿಹ ಹರಿಯಾ ಕಿವಿಬಧಿರವು ನಮ್ಮ
ಅಲ್ಲಿ ಮನುಜ ಮಹಿಪತಿಸುತ ಪ್ರಭು ಪರಬೊಮ್ಮ
ನಿಲದಪ್ಪಿ ಕೊಳಲು ಸಂಭ್ರಮಾ ಅವನೆಲ್ಲೆಲ್ಲ ನೋಡಲು
ಅಲ್ಲಲ್ಲಿ ನಿಂದಿಹ ಇಲ್ಲದ ಸ್ಥಳವಿಲ್ಲವಮ್ಮಾ ೩

## ೧೯೧

ಚದುರಂಗನಾಡುವ ನೋಡಿರೇ ।
ಮದನಮೋಹನ ಕೃಷ್ಣ ನಿಜ ಶಕ್ತಿಯೊಡನೆ ಪ

ಭೂಮಿಯ ಹಲಗಿಲಿ ಕಾಯದ ಮನೆಯೊಳು ।
ವ್ಯಾಮೊಹಿ ಜೀವನು ಅರಸನಿಲ್ಲಿ ।
ನೇಮದಿ ಪುಣ್ಯ ಪಾಪದ ಪಲಗಳಿಸುವ ।
ಈ ಮನೆವೆಂಬ ಪ್ರಧಾನಿಯನಿಟ್ಟು ೧

ಪ್ರಾಣಪಾನವೆಂಬ ಎರಡಾನೆ ನಿಲ್ಲಿಸಿ ।
ನಾನು ನನ್ನದು ಎಂಬ ಒಂಟೆಗಳ ।
ಜಾಣತನದ ಬುದ್ಧಿ ಚಿತ್ತದ ಕುದುರೆ । ನಿ
ಧಾನ ದಶೇಂದ್ರಿಯ ಕಾಲಾಳಿನಿಂದ ೨

ಕಾಲಸೂತ್ರದಿ ನಡಿಸ್ಯಾಡುತ ಕೃತಕರ್ಮ ।
ಮೂಲದಿ ಹಾನಿವೃದ್ಧಿಗಳಿಹವೋ ।
ಮೇಲೆ ಯಶಾಪಯಶ ಪಾಲಿಗೆ ತರುವ । ನೃ
ಪಾಲಕ ಮಹಿಪತಿನಂದನ ಜೀವನ ೩

## ೧೯೨

ಚರಣವದೋರಿ ಸಲಹೋ ಮುರಾರಿ ।
ಧರಿಯೊಳು ಸಾರಿದವರ ಸಹಕಾರಿ ಪ

ಸುರಧೇನು ನೀನು । ಕರೆದುಂಬೆ ನಾನು ।
ಸುರತರು ನೀನು । ಆಶ್ರಯಿಸುವೆ ನಾನು ೧

ಸುರಮಣಿ ನೀನು । ಅರ್ಥಾರ್ಥಿ ನಾನು ।
ದೊರೆಯನ್ನ ನೀನು । ಸುಖಿಸುವೆ ನಾನು ೨

ಗುರುಮಹಿಪತಿ ಪ್ರಭು । ಪರದೈವ ನೀನು ।
ಸ್ಮರಿಸುವ ನಿನ್ನ ದಾಸರಾದಾಸ ನಾನು

## ೧೯೩

ಚರಣಾರಾಧಿಸೋ ಚಾರುತರ ಭೂ
ವರಹ ವೇಂಕಟೇಶನಾ ಉರಗಾದ್ರಿವಾಸನಾ ವರ ಶ್ರೀನಿವಾಸನಾ ಪ

ದುರಿತಕೋಟಿಯ ಹರಿವ ಸ್ವಾಮಿ ಪು
ಷ್ಕರಿಣಿ ತೀರ ವಿಹಾರನಾ ಸಿರಿಮನೋಹರನಾ
ಪರಮ ಉದಾರನಾ ೧

ವಾಹನೋತ್ಸವದಲ್ಲಿ ಪರಿಪರಿ
ಮಹಿಮೆ ಜನರಿಗೆ ದೋರ್ವನಾ ಸಹಜದಿ ಮೆರೆವನಾ
ಬಹಳ ಪೂರ್ವನಾ ೨

ನಡೆದು ಯಾತ್ರೆಗೆ ಬರಲು ಹಯಮೇಧ
ಅಡಿಅಡಿಗೆ ಫಲ ನೀವನಾ ಬಿಡದೆವಾ ಕಾವನಾ
ಮೃಡಜರ ದೇವನಾ ೩

ಸಕಲರಿಗೆ ನೈವೇದ್ಯನುಣಿಸುವಿ
ಅಖಿಳ ಸಂಶಯ ಹಾರಸೀ ವೈಕುಂಠ ಸೇರಿಸೀ
ಸ್ವಕರದಿ ತೋರಿಸೀ ೪

ಇಂದು ನಮ್ಮನಿ ದೈವವಾಗಿಹ
ತಂದೆ ಮಹಿಪತಿ ಪ್ರೀಯನಾ ಸುಂದರ ಕಾಯನಾ
ವೃಂದಸುರ ಧ್ಯೇಯಾನಾ ೫

## ೧೯೪

ಜಗದ ಜೀವರನುದರದಲಿಟ್ಟು ಕರುಣಾಮೃತದಿ ।
ಬಗೆಬಗೆಲಿ ಸಲಹುಲೇಹ ತಾಯಿ ನೀನೇ ।
ಮಗುಳೆ ಮೂಲ ಪ್ರಕೃತಿಯಲಿ ಬೀಜವಿಟ್ಟು ಮೂ ।
ಜಗವ ಪುಟ್ಟಸುತಿಹ ತಂದೆ ನೀನೇ ।
ಮಿಗಿಲಾಗಿ ಬಂದ ದುರಿತಂಗಳ ನಿವಾರಿಸುವ ।
ಭಾಗವತರಿಗೆ ಅನಿಮಿತ್ತ ಬಂಧು ನೀನೇ ೧

ಸುಗಮದಧಿ ದೈವತಾ ರೂಪದಲ್ಲಿ ಕರಣೇಂದ್ರಿ–
ಮಗಳ ಚೇಷ್ಟಿಸಿ ಕಾವಬಳಗ ನೀನೇ।
ನಿಗಮಾಗ ಮಗಳಿಂದ ಸ್ತುತಿಸುತ ಸುಜ್ಞಾನ ।
ದುಗಮದಿರುವ ಗುರುರೂಪ ನೀನೇ ।
ಭಕುತಿಯಲಿ ವಿಧಿಮರುತ ಶಿವಗರುಡ ಫಣಿಪೇಂದ್ರಾ ।
ದಿಗಳು ಪೂಜಿಪ ಕುಲದೈವ ನೀನೇ ೨

ಹಲವು ಜನುಮದಿ ಸಂಗಡಿಗನಾಗಿ ಸಮತೆಯಲಿ ।
ಸಲಿಸಿ ಬಯಕೆಯ ಕಾವ ಗೆಳೆಯ ನೀನೇ ।
ಒಲಿದನ್ನ ವಸ್ತ್ರ ಸಂಪದ ಸಕಲವರ ಪುಣ್ಯ ।
ಫಲದಂತೆ ನೀಡುತಿಹ ಸ್ವಾಮಿನೀನೇ ।
ಜಲಜಾಕ್ಷ ಅದುಕಾರಣ ಎನಗೆ ಸಕಲವು ನೀನೇ ।
ಸಲಹು ಭಕುತಿಯನಿತ್ತು ಗುರು ಮಹಿಪತಿ ಪ್ರಭು ೩

## ೧೯೫

ಜೋಗಿ ಬಂದನೋಗೋವಿಂದಾ । ನಮ್ಮ ।
ಬಾಗಿಲಿಗೆ ನಡೆತಂದಾ ॥
ಬೇಗನೇ ಪವಡಿಸು ಕಂದಾ । ನಾನು ।
ಜೋಗುಳಪಾಡುವೆ ಛಂದಾ ॥

ಗೋಗಮನನಾಗಿ ಶ್ರೀ ಗಿರಿಜೆಯ ಕೂಡಿ ।
ಯೋಗಿಗಳರಸನು ಝುಗ ಝುಗಿಸುವ ಪ

ಜಡೆಯಲಿಗಂಗೆಯಧರಿಸಿ ಮುಂ । ಗುಡಿಯಲಿ ಚಂದ್ರನನಿಲಿಸಿ ।
ಕಿಡಿಗಣ್ಣಮೂರನೆವೆರೆಸಿ ಫಣಿ । ಮಿಡಿಗಳ ಕುಂಡಲ ವಿರಿಸಿ।
ಬಿಡದೆ ವಿಷವನುಂಡು ಕಡುಗಪ್ಪುಗೋರಳಲಿ ।
ಒಡನೆರುಂಡಮಾಲೆಯ ಗಡಬಡಿಸುವ ೧

ಇಟ್ಟವಿಭೂತಿಯತನುವಾ । ಶಿವ । ತೊಟ್ಟರುದ್ರಾಕ್ಷದಿ ಮೆರೆವಾ ।
ಸೃಷ್ಟಿಗೆ ಕೌತುಕನೆನುವಾ । ಬಿಗಿ ।
ದುಟ್ಟಿಹಹುಲಿಚರ್ಮಾಂಬರವಾ ।
ನೆಟ್ಟನೆ ಡವರವ । ಮುಟ್ಟಿ । ನುಡಿಸುತಲಿ ।
ಛಟ ಫಟ ಧ್ವನಿಯಾರ್ಭಟದ ವೈರಾಗಿ ೨

ಶ್ರೀ ರಾಮನಾಮವ ಬಲಿದು । ತಾನು ।
ಕರದಿಕಪಾಲವ ಪಿಡಿದು ।
ಧರೆಯೊಳುಭಿಕ್ಷನೆವದಿಂದು । ಹರ ।
ತಿರುಗುವ ವಿಜ್ಞಾನ ಸಿಂಧು ।
ಗುರುಮಹಿಪತಿ ಪ್ರಭು । ನರನಾಟಕದಲವತರಿಸಿಹ
ಗೋಕುಲದ ಶಿರಿನೋಡಲಾಗಿ ೩

## ೧೯೬

ಡಂಭಕ ಹರಿದೂರ ಪ್ರಾಣೀ ಪ

ಅಂಬುಜನಾಭನ ಇಂಬನ ಪಡಿಯದೇ।
ಡೊಂಬನ ಪರಿಯಾಚಾರ ಪ್ರಾಣೀ ಅ.ಪ

ಅಬ್ಧಿಶಯನ ಸಿರಿನಾಥನ ಒಲುಮೆಯ।
ಲಬ್ಧ ದೊರೆಯದೆ ವಿಚಾರಾ॥
ಲಬ್ಧನಾಗಿ ಧನ ಮಾನಕಬಿಟ್ಟಿನೀ।
ಶಬ್ದದಂಗಡಿ ಪ್ರಸರಾ।ಪ್ರಾಣೀ ೧

ಪೊಡವಿಯೊಳಗ ಉಗ್ರಸಾಧನದಿಂದಲಿ।
ಬಿಡದೆವೆ ತವಶರೀರಾ॥ಒಡನೆ ಮರೆದು ರಿದ್ಧಿಸಿದ್ಧಿಯ ಬಲದಲಿ।
ಹಿಡದಿ ಮನದಿ ಅಹಂಕಾರ।ಪ್ರಾಣೀ ೨

ಅದಿತತ್ವದಾಗಲೆ ಸಾಧಿಸೇನೆಂದರೆ।
ಸಾಧನ ಕೇಳು ಸುಸಾರಾ॥
ಭೇದಿಸು ಮಹಿಪತಿ ನಂದನ ಸಾರಿದ।
ಸಾಧು ರಾಶ್ರಯ ಮನೋಹರ।ಪ್ರಾಣೀ ೩

## ೧೯೭

ತಪ್ಪಗಳೆಣಿಸದೆ ಸಿದ್ದೇಶಾ ಯನ್ನಪ್ಪ ಶ್ರೀನಿವಾಸ
ಕಾಯೋ ಸಿದ್ದೇಶಾ ಪ

ಸಕ್ತನಾಗಿ ವಿಷಯದಿ ಸಿದ್ದೇಶಾ ಜ್ಞಾನ
ಯುಕ್ತಿಮತಿ ಹೊಂದಲಿಲ್ಲಾ
ಭಕ್ತಿಯ ಗುಣಂಗಳಿಲ್ಲಾ ವಿರಕ್ತಿಯ ಅಂಕುರವಿಲ್ಲಾ ೧

ಸಾಧು ಜನಸಂಗ ಮಾಡೀ ನಿಜ ಬೋಧಾಮೃತ ಸವಿಯಲಿಲ್ಲಾ
ವಾದ ಗುಣ ಹಿಂಗಲಿಲ್ಲಾ ಕಾಮ, ಕ್ರೋಧ ಸುಳಿಯಲಿ ಬಿದ್ದೆ ೨

ಪಂಥ ಪರಮಾರ್ಥದೋರೋ ಶ್ರೀ ಕಾಂತ ಗುರು ಮಹಿಪತಿ
ಶಾಂತಿ ಶಮದಮಕೊಟ್ಟುಸಿದ್ದೇಶಾ ವಿಶ್ರಾಂತಿ
ಸುಖವ ನೀಡಬೇಕು ಸಿದ್ದೇಶಾ ೩

## ೧೯೮

ತಪ್ಪು ಕ್ಷಮೆ ಮಾಡೋ ಕೃಪೆಯಿಂದ ನೋಡೋ ಪ

ನೀನೆದಯಾನಿಧಿ ನಾನು ಅಪರಾದಿ
ಖೂನದೋರೋ ಹಾದಿ ಸ್ಥಾನ ನಿಜಾನಾದಿ ೧

ಅನಾಥನೆಂದು ನೋಡಿ ಸನಾಥನೆನ್ನಮಾಡಿ
ಸ್ವಾನಂದ ಸುಖನೀಡಿ ಮನ್ನಾಥ ನಿಜಗೂಡಿ ೨

ಹೇಳಲಾರೆ ಬಹಳಾ ಕೇಳೋನೀದಯಾಳಾ
ತಾಳಿಯನ್ನ ತೋಲಾಬಾಲವಿಶ್ವಪಾಲಾ ೩

ಸೇವಿ ಇದೇನಮ್ಮ ಭಾವಿಸುದು ನಿಮ್ಮ
ಪಾವನ್ನಗೈಸು ವರ್ಮಾ ಸುನಿತ್ಯ ಪರಬ್ರಹ್ಮಾ ೪

ಬಂದ ಮ್ಯಾಲೆ ಶರಣಾ ಕುಂದವ್ಯಾಕೋ ಪೂರ್ಣ
ಕಂದ ಮಹಿಪತಿಗುಣಾ ಛಂದ ಮಾಡೋಕರುಣಾ ೫

## ೧೯೯

ತಾನೇ ತಾನು ಜಗದಂತರ್ಯಾಮಿ ವಿಶ್ವಂಭರಿತಾ
ತಾನೇ ತಾನು ಹರಿಧ್ಯಾನ ಧನ ದಾನ ಮಾನ
ಅಣುರೇಣುಗಳಲ್ಲಿ ಪ

ವಬ್ಬಸೂರ್ಯಜಗ ಸರ್ವ ಚಕ್ಷಗಳ
ಮಬ್ಬುಹಾರಿಸುವಂತೆ ಅ.ಪ

ಘಟ ಮಠಾದಿಗಳ ಚದುಳ ಬ್ರಹ್ಮಘಟಿ
ನೆಟಗೆ ವ್ಯಾಪ್ತ ನಿಚ್ಚಲ ಗಗನದಂತೆ ೧

ಕಂಭಸೂತ್ರದ ಬೊಂಬೆಯಾಟದಲಿ
ಇಂಬುಗೊಂಡ ಕುಳೆ ಬಿಂಬಿಸುವಂತೆ ೨

ಕಂದ ಕುಂದದಾನಂದ ಚಂದ ಘನ
ತಂದೆ ಮಹಿಪತಿ ನಂದನ ಪ್ರೀಯಾ ೩

## ೨೦೦

ತಾರಿಸಬೇಕೋ ಎನ್ನಾ।ಯಾದವ ರನ್ನಾ ಪ

ತಾರಿಸಬೇಕೋ ಎನ್ನಾ । ಯಾದವ ರನ್ನಾ।
ಸಾರಿದೆ ನಾನು ನಿನ್ನಾ।ಘೋರ ಭವಾಂಬುಧಿಯಾ।
ಪಾರಗಾಣೆನೋ ಜೀಯಾ । ವಾರೆ ಕಂಗಳೆನ್ನಾ ನೋಡಿ।
ದಯಮಾಡಿ ಒಡಮೂಡಿ ಅಭಯವ ನೀಡಿ ೧

ತಾನಾರೆಂಬುದು ನೋಡದೇ ತನುವಿನೊಳು।
ನಾ ನನ್ನದೆಂದು ಪಾಡಿದೇ।
ಶ್ರೀನಾಥ ನಿನ್ನ ನಾಮಾ।ನೆನೆಯದೆ ಮನದೊಳೊಮ್ಮಾ।
ನಾನಾ ವಿಷಯದೊಳು ಬೆರೆದು।ಮೈಮುರಿದು।
ಹಿತಜರಿದು ಕೆಡುವಾದೇನರಿದು ೨

ಶರಣರಾ ಸಂಗದೋರಿಸಿ।ಸ್ವರೂಪವಾ।
ಮರೆದ ವಿಭ್ರಮ ಹಾರಿಸೀ।
ಗುರುಮೂರ್ತಿ ಪ್ರಭು।ಅರಹು ನೀಡೋ ಭಕ್ತಿಯಾ।
ಸುರಸಾ ಸಾರಾಯದ।ಸುಖನುಂಬೆ।ಬಲಗೊಂಬೆ।
ನಮೋಯೆಂಬೆ ಎನ್ನಿಂಬ ಬಿಂಬವೇ ೩

## ೨೦೧

ತಾಳಲಾರೆನಮ್ಮಾ ಬಾಲಕನಟ್ಟುಳಿ ಗೋಪೀಘನವಮ್ಮ
ಕೇಳಿದುಳವಿಲ್ಲಾ ಕೇಳಿದುಳವಿಲ್ಲಾ
ಕಾಲಕಾಲದಲಿಟ್ಟ ಬೆಣ್ಣೆ ಮೂಲವಿರಲಿಕ್ಕಿಲ್ಲಾ ಪ

ಅತ್ತನೋಡ ಲಿಹಾ ಇತ್ತ ನೋಡಲಿಹಾ
ಸುತ್ತಸೂಸುತ ಬಾಲೆಯರಾ ಚಿತ್ತಮೋಹಿಸುತಿಹಾ ೧

ಹಿಡಿದೇನೆಂದರೆ ಸಿಕ್ಕಾ ತುಡುಗ ಬಲುದಕ್ಕಾ
ಹಿಡಿದು ನಿಲ್ಲಿಸುವರಿಲ್ಲಾ ಪೊಡವಿಲಿವನ ತುಕ್ಕಾ ೨

ಆರಿಗೇ ವಿಚಾರಾ ಸಾರಬೇಕು ದೂರಾ
ಸೂರೆಹೋಗುತಿದೆ ಸಂಸಾರಾ ಸುಖಸಾರ ೩

ತಂದೆಮಹಿಪತಿ ನಂದನ ಸಾರಥಿ
ಇಂದು ನಮ್ಮ ಕಾಡಿದರ ಮುಂದಾರುಗತಿ ೪

## ೨೦೨

ತಿಳಿಯದು ಅಟಾ ಶ್ರೀಹರಿ ನಿನ್ನಾ।
ನಳಿನ ಸಂಭವ ಮೊದಲಾದ ನಿರ್ಜರರಿಗೆ ಪ

ಮೊತ್ತವೆನಿಪ ಕ್ಷೀರ ಸಾಗರ ಮಧ್ಯಲಿ।
ಉತ್ತಂಗವಾದ ಶೇಷನ ಮಂಚದ ಮ್ಯಾಲೆ।
ಸುತ್ತಸನಕಾದಿ ಭಾಗವತರ ಸಂಗ।
ನಿತ್ಯವೆರಸಿ ಕ್ರೀಡಿಸುವದ ಬಿಟ್ಟು।
ಮತ್ತೆ ವನದೊಳಾಡುವರೇ ತೃಣಗಳ।
ಕಿತ್ತಿ ಹಾಸಿಕೆ ಮಾಡುವರೇ ಕಪಿಸಂಗ
ಅತ್ಯಂತ ದಲ್ಹಿಡುರೇ ಕುಬ್ಜಿಯಾ।
ವತ್ತಿನೀ ಅಳುವರೇ ೧

ಗಂಭೀರವಾದ ಸುರವರದಿಂದ ನಾರದ।
ತುಂಬುರ ಮಾಳ ಗೀತವ ಕೈಕೊಂಡು।
ಕಂಬು ಕಂದರದಲ್ಲಿ ಕೌಸ್ತುಭ ಮಾಲೆಯ ಹಾಕಿ।
ಪೊಂಬಟ್ಟೆಯನುಟ್ಟು ಗರುಡ ವಾಹನ ಬಿಟ್ಟು।
ಕೊಂಬು ಕೊಳನ ನೂದುರೇ ಗುಂಜಿಯಾ ವಣಿ
ಬಿಂಬಸರವ ಹಾಕುತೀ ಕಲಿಯಾದಾ।
ಕಂಬಳಿ ಯನುರೆ ಪೊದ್ದು ವಸ್ತ್ರದಿ ಮರ।
ಸಂಭ್ರಮ ವೇಸರೇ ೨

ನಯದಿಂದ ಸುಜನ ಸಮರ್ಪಿಪ ಊಟವ।
ದಯದಿಂದ ಕೈಕೊಂಡು ತೃಪ್ತನಾಗಿ।
ಶ್ರೀಯಾ ಕುಚ ಕೊಡಮ್ಯಾಲ ಕರವನಿಟ್ಟು।
ಜಯವಿಜಯ ವೆಂಬದ್ವಾರ ಪಾಲರಿರೆ।
ಗೋವಲ್ಲರೆಂಜಲ ತಿಂಬುದೇ ಸರಗಹಗ।
ಕೈಯ್ಯಲಿಂದ ತೊಳೆವರೇ ಮುದದಿ।
ಬಲಿಯ ಬಾಗಿಲ ಕಾವುರೇ ಮಹಿಪತಿ
ನಂದನ ಜೀವನ–ನೋ ೩

## ೨೦೩

ತಿಳಿಯದ್ಯೆ ಶ್ರೀ ಹರಿಯೆ ನಿನ್ನ ಮಹಿಮೆ
ನಳಿನ ಸಂಭವ ಮುಖ್ಯನಿಗಮನಾಗ ಮಂಗಳಿಗೆ ಪ

ಒಂದು ಯಜ್ಞಕ್ಕೆ ಪೋಗಿ ಇರುಳ್ಹಗಲು ಕಾಯ್ದಿ ಮ
ತ್ತೊಂದು ಯಜ್ಞಕ್ಕೆ ಕರ್ತನಾಗಿ ಮಾಡಿ
ಒಂದು ಯಜ್ಞಕ್ಕೇ ಪೋಗಿ ವಿಧ್ವಂಸ ಮಾಡಿ ಮ
ತ್ತೊಂದು ಯಜ್ಞವ ಕೆಡಸಿದನ ಮಿತ್ರನಾದೇ ೧

ಒಬ್ಬರಸನನ ಕುಲವ ಪರಿಪರಿ ಸಂಹರಿಸಿ
ಒಬ್ಬರಸನನ ನೆಲಿಗೆ ನಿಲಿಸಿದ್ಯೆಯ್ಯಾ
ಒಬ್ಬರಸನನ ಕರಗಸದಿ ಕೊಯಿದು ಪರೀಕ್ಷಿಸಿದೆ
ಒಬ್ಬರಸನನ ಸಭೆಯೊಳಗೆ ಶಿರವ ತರಿದೇ ೨

ಒಂದಾನೆ ಏರಿದನು ಪಾಯದಲ್ಲಿ ಮರ್ದಿಸಿದೆ
ಒಂದಾನೆ ಏರುವನ ಮಗನ ಕಾಯಿದೇ
ಒಂದಾನೆಯನುಕೊಂದು ರಜಕನಸುವನು ತೆಗೆದೆ
ಒಂದಾನೆಗೊಲಿದೆ ಮಹಿಪತಿನಂದ ನೋಡಿಯಾ ೩

## ೨೦೪

ತೋರವ್ವಾ ಕೇಳದೀ ಶ್ರೀನಿಧಿಯಾ।ಕಾರುಣ್ಯಂಬುಧಿಯಾ ಪ

ಹರಿಯಾ ಸಕಲ ಜಗಧೊರಿಯಾ॥
ಸುರಮನಿ ಜನಸಿರಿಯಾ।ಅನಂತಾನಂತ ಚರಿಯಾ।
ಕರುಣ ಹೊಕ್ಕಾಕರಿಯಾ।
ಕೇಳುತ ಘನ ಮೊರಿಯ ಬಂದೊದಗಿದಧೊರಿಯಾ ೧

ಸ್ಮರನಾ ಲಾವಣ್ಯಾ ಮಂದಿರನಾ।
ಸಿರಿದೇವಿ ಮನೋಹರನಾ ಪರಕ ಪರಾತ್ಪರನಾ।
ಶಂಖಚಕ್ರದ ಕರನಾ।
ಸಾರಥಿಯಾದಾ ನರನಾ।ಪೀತಾಂಬರ ಧರನಾ ೨

ನಂದಾನಂದನ ಶ್ರೀ ಮುಕುಂದಾ।
ದೀನವತ್ಸಲದಿಂದಾ।ಹೊರಿಯಲಯನ್ನದೊಂದಾ।
ನೋಡದೇ ಮುನ್ನಿನ ಕುಂದಾ।
ಗುರು ಮಹೀಪತಿ ಪ್ರಭುಬಂದಾ ನೀಡಿದಾನಂದಾ॥ ೩

## ೨೦೫

ತೋರವ್ವಾ ಗೆಳತಿ ಶ್ರೀರಂಗನ ಭವಭಂಗನಾ।
ತೋರೆ ಕೋಮಲಾಂಗನಾ ಪ

ಅನಾದಿ ಬಾಂದವನೆನುತಲಿ।ಶೃತಿ ಹೊಗಳಲಿ।
ಶರಣನೀಗ ಬಂದಾ।
ಶ್ರೀನಿಧಿ ತುಷ್ಟನು ಭಕ್ತಿಲಿ।ಯಂದು ಕೇಳಲಿ।
ಮುಂದ ಗಾಣದೆ ನಿಂದಾ ೧

ಜಗಗದಂತರ್ಯಾಮಿಯನಿಸುವ।ಮನೆಮುರಿಲಿಹ।
ಕಂಗಳಿಗೆ ದೋರನಮ್ಮಾ।
ಮುಗಧಿಯೊಡನೆ ಠಕ್ಕವಳಿಯಾ।ದೋರುವರೇಕೈಯ್ಯಾ।
ಬಿರುದಿಗೆ ಛಂದೇನಮ್ಮಾ ೨

ಹಂಬಲಿಸುತ ಕಾವನೆನೆಯಲುಛಂದಾ।ಸ್ವಾನುಭಾವದಿಂದ।
ಡಿಂಬಿನೊಳು ಒಡಮೂಡಿ।
ನಂಬಿದವರ ಕಾವಾ ಮಹಿಪತಿ ಸುತಸಾರಥಿ।
ಕೊಟ್ಟನಿಂಬವ ಕೂಡೀ ೩

## ೨೦೬

ದಯಮಾಡ್ಯೆ ಶ್ರೀ ಹರಿಯನಗಿಂದು
ದಯಮಾಡ್ಯೆ ಶ್ರೀಹರಿಯನಗಿಂದು ಪ

ನಿಗಮಾಗಮ ಪೌರಾಣದ ಕತೆಯಾ
ಬಗೆಯಲಿಯದ ಪಾಮರ ಪಾಥರಿಗೆ ೧

ವಿಷಯಾ ಸಕ್ತಿಲಿ ನೆನೆಯದೆ ಹಿತವಾ
ಪಶುಪಕ್ಷಿಯ ಪರಿ ದಿನಗಳಿದೀಗ ೨

ಗುರುಮಹಿಪತಿ ಪ್ರಭು ಬಂದೆನು ಶರಣಾ
ಬಿರುದವು ದೀನರ ಹೊರೆವುದು ನಿನಗೇ ೩

## ೨೦೭

ದಾರಿ ದೋರೆನಗ ಮುಕುಂದಾ ಪ

ದಾರಿ ತೋರೆನಗೆ ಶ್ರೀ ಹರಿ ನಿನ್ನ ಭಕುತಿಯಾ।
ಸಾರಿದೆ ನಿನ್ನವನಾನು ಮುಕುಂದಾ ಅ.ಪ

ಜನುಮಾನುಜನುಮದಲಿ।ನಾಮವಾ।
ನೆನೆಯದ ತಪ್ಪಿನಲಿ॥
ಜ್ಞಾನದೃಷ್ಟಿಯಲಂಧನಾದೆನು ಹರಿ ನಿಮ್ಮ।
ಕಾಣದ ಕಂಗಳನಾ ಮುಕುಂದಾ ೧

ಭ್ರಾಂತತನವ ಬಿಡಿಸಿ।ವಿವೇಕ।
ಶಾಂತಿಯ ನೆಲೆಗೊಳಿಸಿ।
ಅಂತರಂಗದ ನಿಜ ಸುಖವ ಸೂರ್‍ಯಾಡುವ।
ಸಂತರೊಳಗ ಕೂಡಿಸೋ ಮುಕುಂದಾ ೨

ಅರಹುನಯನ ದೆರಿಸಿ।ನಿಜರೂಪ।
ಗುರುತದ ನೆಲೆ ತೋರಿಸೀ।
ಗುರುವರ ಮಹಿಪತಿ ನಂದನ ಪ್ರಭು ನಂದನ ಪ್ರಭು ನಿಮ್ಮ।
ಸ್ಮರಣೆ ಪಡೆಯ ನಡಿಸೋ ಮುಕುಂದಾ ೩

## ೨೦೮

ದಾರೇನೆಂಬುರೈ।ಹರಿ ಭಕ್ತರಿಗೆ।ದಾರಲ್ಲವೆಂಬುರೈ ಪ

ಗುರುವಿನಂಘ್ರಿವಿಡಿದು।ಗುರುತುಕೀಲವರಿತು ನಿಜಾ।
ಪರಮಾನಂದ ಸುಖಾ।ಸುರಸನುಂಬುವರಿಗೇ ೧

ಕುತ್ಸಿತ ಮಾರ್ಗವನೆಲ್ಲಾ।ಕೊಚ್ಚಿಜರಿದು ಧರಿಯೊಳು।
ಅಚ್ಯುತ ಪರದೈವನೆಂದು।ನೆಚ್ಚಿದ ಮಹಿಮೆಗೆ ೨

ಮಾಧವ ಮುದ್ರೆಯಿಂದ।ದ್ವಾದಶ ನಾಮವನಿಟ್ಟು।
ಪದುಮಾ ತುಳಸೀಸರ।ಹೃದಯದಲ್ಲಿ ಮೆರೆವಂಗೆ ೩

ನಷ್ಟನೃಪರಾ ಮನೆಯಾ।ತನಿಷ್ಟೆಯೊಳು ಲೆಕ್ಕಿಸದೆ।
ಹುಟ್ಟಿದ ಲಾಭದಲ್ಲಿ।ತುಷ್ಟಿ ಬಟ್ಟಿರುವಂಗೆ ೪

ಅವರವರಂತೆ ಲೋಕ।ದವರಿಗೆ ತೋರುತಾ।
ವಿವರಿಸಿ ವಿವೇಕ ಹಾದಿ।ಭವದಾ ಬೇರಿಳಿದಂಗೆ ೫

ತಾಳದಂಗಡಿಗೆಯ ಸಿಡಿದು।ಮೇಳ ಭಾಗವತರೊಳು।
ಶ್ರೀಲೋಲನನು ಪಾಡಿ।ನಲಿದಾಡುತಿಹರಿಂಗೆ ೬

ತಂದೆ ಮಹಿಪತಿ ನಿಜಾ।ನಂದನ ಸಾರಿದ ನುಡಿ।
ಹೊಂದಿ ಭಾವಭಕ್ತಿಯಿಂದ।ಛಂದವಾಗಿಪ್ಪರಿಂಗೆ ೭

## ೨೦೯

ದಾಸನಾಗುವೆನು ಹರಿಯೇ ನಿಮ್ಮ ಪ

ದಂಡಿಗೆ ಹಿಡಿದು ಊರ್ಧ್ವ।
ಪೌಂಡ್ರ ತುಳಸೀಮಾಲೆಯಿಂದಾ
ಪುಂಡಲೀಕ ವರದ ಶ್ರೀ।
ಪಾಂಡುರಂಗ ವಿಠಲನೆಂಬಾ ೧

ಲಜ್ಜೆಯಳಿದು ನೃತ್ಯ।
ಹೆಜ್ಜೆಗೊಮ್ಮೆ ತೋರಿಸುತ।

ಗರ್ಜಿಸುತ ಹರಿನಾಮ।
ಸಜ್ಜನರ ಒಲಿಸುವಾ ೨

ಹಲವು ಪುಷ್ಪ ತುಲಸಿಯಿಂದಾ।
ನಳಿನಾಂಘ್ರಿಯಪೂಜೆಮಾಡಿ।
ನಲಿದು ನವವಿಧ ಭಕ್ತಿ।
ಕಲೆಗಳಾ ತೋರಿಸುವಾ ೩

ಎನ್ನ ತನುಮನಧನ–
ವನ್ನು ನಿನಗರ್ಪಿಸುತ।
ಅನ್ಯಯಾರ ಭಜಿಸಿದೆ।
ನಿನ್ನವನೆಂದೆನಿಸುವಾ ೪

ತಂದೆ ಮಹಿಪತಿ ನಿಜ।
ನಂದನ ಸಾರಥಿ ನಿನ್ನ।
ಹೊಂದಿದ ಭಕ್ತರ ಪುಣ್ಯ।
ಮಂದಿರದಿ ಜನಿಸುವಾ ೫

## ೨೧೦

ದೇವ ತನದ ಮಹಿಮೆಯಗಳೆದೇ
ಅವಲೀಲೆಯೋ ನರನಾಗಿ ಗೋಪಾಲಕೃಷ್ಣಾ ಪ

ಕುಂಡ ಗೋಳಕರರ ಸನ ಮನಿಯಲಿ ಜನ
ಉಂಡ ವೆಂಜಲ ಬಳಿದು
ಹಿಂಡ ರಾಯರ ಮುಂದ ಕುದುರೆಯ ತೊಳೆವುತ
ಭಂಡಿಯ ಹೊಡೆವುತ ಪಾರ್ಥನವಶವಾಗಿ ೧

ಗೊಲ್ಲತೆಯೊಬ್ಬಳು ನೀರಕೊಡುವ ಪೊತ್ತು
ನಿಲ್ಲದೇ ಮಾರ್ಗದಿ ಬರುತಿರಲು

ಮುಳ್ಳು ಮುರಿಯವಳ ಕಾಲವ ಹಿಡಿವುತ
ಹಲ್ಲಿಲಿ ತೆಗೆಯುತ ಸಂತೈಸಿ ಕಳುಹಿದ ೨

ಧರೆಯೊಳು ನೋಡಲು ಜಾರ ಚೋರನೆನಿಸಿ
ನಿರುತ ಗೋವಳರುಂಡನ್ನ ಸವಿದು
ಗುರುವರ ಮಹಿಪತಿ ಪ್ರಭು ಜನ್ಮರಹಿತನವ
ತರಿಸಿ ಯಶೋಧೆಯ ಮೊಲೆ ಪಾಲವನುಂಡು ೩

## ೨೧೧

ದೇವಾ ದೇವಾ ಸಾರಂಗ ಪಾಣಿ
ದೇವಾ ದೇವಾ ಸಾರಂಗ ಪಾಣೀ ಪ

ದೇವ ದೇವ ಘನ ಶ್ರೀ ವಧುವಲ್ಲಭ
ಸಾವಿರ ನಾಮದ ಪಾವನ ರೂಪಾ ೧

ಭುವನವ ಪಿಡಿದೊಯ್ದನುಜನ ಹರಿ
ದವನಾ ಸುತಗೊರದ ಪವನಜ ಪ್ರೀಯಾ ೨

ಕುಂಜರ ಧ್ವಜಜನ ರಂಜಿಪ ಕದಲಿಗೆ
ಅಂಜಿಕೆ ಹಾರಿಪ ಕುಂಜದ ಕರನೇ ೩

ಸುಮನದಿ ಧರೆಯೊಳು ನಮನ ಕೃತಕ ಭಯ
ಶಮನ ಉರಗರಿಪು ಗಮನ ಸುರೇಶಾ ೪

ಸುತನ ಧರಿಯ ಕೃತ ಮಥನ ವಿಧಿ ತ್ರಿಪುರ
ಮಥನ ವಿನುತ ಪದ ಮಿಥುನದಯಾಳಾ ೫

ಹರಿಯೆಂದೊದರಲು ಸರಿಯಾದಿಗಳಿಗೆ
ಅರಿಯ ದಂದದಿ ಬಂದು ಕರಿಯನು ಕಾಯ್ದೆ ೬

ನಂದನ ನಂದನ ಮಂದರಗಿರಿಧರಾ
ನಂದನೆ ಮಹಿಪತಿ ನಂದನ ಪ್ರೀಯಾ॥ ೭

## ೨೧೨

ದೇವ ದೇವ ದೇವ ದೇವ ದೇವಾದಿದೇವ।
ಶ್ರೀ ದೇವನೇ ದೇವಾ।ಸಲಹೆನ್ನ ಸದಾ ಪ

ವಸುಧಿಯ ತನುಭವ ತನುಗಿರಿ ಕುಲಿ।ಶಾ।
ಮರರಿಗಡಿಗಡಿಗೆ ನೀ ಸಲಹುವೆ ಕರುಣದಿ।
ಬಿಸರುಹ ಲೋಚನ ದೇವ ದೇವಾ।
ಪತಿ ಜನೋದ್ಧಾರ ದೇವಾ ಭಕ್ತರ ಸುರತರು ದೇವದೇವ ೧

ನಗವರಧರ ಮೃಗಕುಲದಧಿಪತಿ।
ವೈರಿಯ ಕುಲವರ ವರದನೇ ಕೇಶವಾ।
ಉಡಗಣ ಪತಿಯನ ಪಡೆದನ ತನುಜೆಯ।
ರಮಣನೆ ಮಹಿಪತಿ ನಂದನ ಜೀವನಾ।
ಪೊಡವಿ ಮನೋಹರ ದೇವ ದೇವಾ ೨

## ೨೧೩

ದೀನ ದಯಾಳು ಹರೀ ಕೃಪಾನಿಧಿ ಪ

ಜಲಚರ ಬಾಧೆಗೆ ನೆನೆಯಲು ನಾಮಾ।
ಸಲಹಿದೆ ರಾಜ ಕರಿ।ಕೃಪಾನಿಧಿ ೧

ನೊಂದು ಸಂಸಾರದಿ ಬರಲು ಸುದಾಮಾ
ಕುಂದದೆ ಕೊಟ್ಟೆ ಸಿರಿ ಕೃಪಾನಿಧಿ ೨

ಮಹಿಪತಿ ಪ್ರಭು ಕೈರವ ಶಾಮಾ।
ಇಹಪರನೀವ ದೊರೆ ಕೃಪಾನಿಧಿ ೩

## ೨೧೪

ಧ್ಯಾನ ಮೌನಗಳೆಂಬ ಜ್ಞಾನಸಾಧನಗಳನು।
ಏನು ಅರಿಯದತಿ ದೀನನಾಭವಕಂಜಿ।
ನಿನ್ನನೇ ಮೊರೆಯಹೋಕ್ಕಿಹನೋ॥
ನಿನ್ನ ನಂಬಿದ್ದವರ ಘನ್ನಭಯ ಹರಿವೆಂದು।
ನಿನ್ನನೇ ಮೊರೆಯಹೊಕ್ಕಿಹೆನೋ॥
ಜಲದೊಳಗೆ ಎದ್ದೆನ್ನ ಪಾಲೊಳಗೆದ್ದೆನ್ನ।
ತಿಳಿದಂತೆ ಮಾಡೋ ನೀ ಮಹಿಪತಿಸುತ ಪ್ರಾಣ॥
ನಿನ್ನನೇ ಮೊರೆಯ ಹೊಕ್ಕಿಹೆನೋ

## ೨೧೫

ಧೂಪಾರತಿಯ ನೋಡುವ ಬನ್ನಿರಯ್ಯಾ।
ಶ್ರೀ ಪರಬ್ರಹ್ಮ ಮೂರುತಿಯಾದ ಹರಿಯಾ ಪ

ವಿವೇಕದಾರತಿ ಜ್ಞಾನನಾಳದಲಿ।
ತೀವಿದಶಾಂಗದಿ ಪುಷ್ಟಗುಧಿಡುವಾ ೧

ತಾಳಕಂಸಾಳ ಝೇಂಗಟೆ ಶಂಖರವಗಳು।
ಮೇಲಾದ ಅನುಹಾತ ವಾದ್ಯ ಮಂಜುಳವಾ ೨

ಕರುಣತ್ರಿವಾರ್ತಿಯು ವಿಶ್ವಸದಾಜ್ಯದಿ।
ಮೆರೆವ ಚಿಜ್ಯೋತಿ ಏಕಾರತಿ ಹೊಳೆವಾ ೩

ಗುರು ಮಹಿಪತೀಸ್ವಾಮಿ ಚರಣಕಿರಣ ನೋಡಿ।
ಹರುಷದಿ ಪಾಡುತ ಸುಖವ ಸೂರ್‍ಯಾಡಿ ೪

## ೨೧೬

ನಡಿ ನೀರೇ ಪೋಪಾ ದೇವಿ ಇದ್ದೆಡೆಗೆ।
ಕಡು ಕೋಪವ್ಯಾಕ ಶ್ರೀರಮೆ ಕೂಡ ಎನಗೆ ಪ

ಫುಲ್ಲ ಲೋಚನೆ ಕುಂದರದನೆ ಸುಫಣಿ ವೇಣಿ।
ಮಲ್ಲಿಕಾ ಮಂದಸ್ಮಿತೆ ಚಲ್ವಕದಪು।
ಬಿಲ್ಲು ಕಾಮನ ಸೋಲಿಪ ಭ್ರೂಲತೆಯುಳ್ಳ।
ಸಲ್ಲಲಿತಾಂಗಿಯಾವಾಗ ಕಂಡೆಪೆನೆ ೧

ಹುಣ್ಣಿಮೆ ಚಂದ್ರನ ಮಂಡಲ ಪೋಳೆವಾ।ಪೊಂ।
ಬಣ್ಣವದನೆ ಮಹಾಸಿಂಹನ ಜರೆವಾ।
ಸಣ್ಣ ನಡುವಿನಿಂದೊಪ್ಪುವ ಸಿರಿಯನು।
ಕಣ್ಣಾರೆನೋಡಿ ಮತಾಡುವೆ–ನೇಳೆ ೨

ಬರಬಾರದು ದೇವಿಯಗಲಿ ಬಂದರ।
ಸ್ಥಿರವಾಗದು ಅರಘಳಿಗೆನ್ನ ಮನಸು।
ಗುರುಮಹಿಪತಿ ಸುತ ವರದ ದೇವತೆಯಾಗಿ।
ಧರೆಯೊಳು ಮೆರವಾ ಶ್ರೀ ಲಕ್ಷೀಯ ತೋರೆ ೩

## ೨೧೭

ನಮ್ಮ ರಂಗನ ಕಂಡಿರ್‍ಯಾ ಹೇಳಿರಿ ನೀವಮ್ಮಾ ಪ

ಅರಳೆಲೆ ಮಾಗಾಯಿ ಕಿರಿಗೂದಲು ಮುತ್ತಿನ।
ವರಮಕುಟ ಪದಕ ಕೊರಳಿನಾ ೧

ಹೊಳೆವ ಕುಂಡಲ ಕುಡಿ–ಗಂಗಳ ಬೆಳಗಿನ।
ಚೆಲುವ ಕದವು ಮುದ್ದು ಸೊಬಗಿನಾ ೨

ಬರಿಮುಗುಳ ನೆಗೆಯಾ ಸುದಂತ ಸಾಲಿನ
ಸಿರಿವತ್ಸಧರ ಹೇಮಚಸನನಾ ೩

ಧರೆಯೊಳು ಭಕ್ತರ ಮಾಡುವ ಪಾವನ।
ಮಿರುಪರನ್ನದಂಗುರ ಬೆರಳಿನಾ ೪

ಕೊಳಲನೂದಿ ಗೋಪ್ಯಾರ ಮೋಹಿಪ ಮನಸಿನಾ।
ಒಲಿದು ಪಾಲಿಪ ಮಹಿಪತಿಜನ ೫

## ೨೧೮

ನಮೋ ನಮೋ ನಮೋ ಎಂಬೆ ನಿನಗೆ ಸ್ವಾಮಿ ರಘುರಾಮಾ।
ಶಮಲ ಹಾರಿಸಿ ವಿಮಲ ಮತಿಯ ಕೊಡುವ ಪುಣ್ಯ ನಾಮ ಪ

ಮುನ್ನ ಮಾಡಿದ ಕೋಟಿ ಜನುಮದ ಪುಣ್ಯ ಒದಗಿತೆಂದು।
ನಿನ್ನ ಚರಣ ಕಮಲ ಕಂಡೆ ಧನ್ಯನಾದೆನಿಂದು ೧

ಪರಮ ಪುರುಷನೆಂಬುದರಿಯ ಮಾಡಿದಪರಾಧವ
ಕರುಣದಿಂದ ಕ್ಷಮಿಸಿ ಹೊರಿಯಬೇಕು ಪೂರ್ಣಬೋಧಾ ೨

ತಂದೆ ಮಹಿಪತಿ ಪ್ರಭು ಭಕ್ತವತ್ಸಲನೆಂದು
ಇಂದು ಮೊರೆಯಹೊಕ್ಕೆ ಸಲಹು ನಿಮ್ಮ ಸೇವೆಯಿಂದು ೩

## ೨೧೯

ನಮೋ ನಮೋ ವೆಂಕಟೇಶ ಪ

ವೈಕುಂಠ ಮಂದಿರವನು ಬಿಟ್ಟು ಶೇಷಾಚಲದಲಿ
ಬೇಕೆಂದು ಮಾಡಿದೆ ನೆಲೆವಾಸಾ ೧

ಶ್ರೀದೇವಿ ಸಂಗಡಸ್ವಾಮಿ ಪುಷ್ಕರಣಿ ತೀರದಲಿ
ಮೋದದಿ ಕ್ರೀಡಿಸುವ ವಿಲಾಸ ೨

ಗುರು ಮಹಿಪತಿಪ್ರಭು ಚರಣವ ನಂಬಿದವರ
ಧರೆಯೊಳು ಪೂರಿಪೆ ಮನದಾಶಾ ೩

## ೨೨೦

ನರನಾದ ಮ್ಯಾಲ ಹರಿನಾಮ ಜಿವ್ಹೆದಲಿರಬೇಕು ಪ

ಗುರುವಿನ ಚರಣಕ ನಂಬಿರಬೇಕು।
ತರಣೋಪಾಯವನರಿಯಲಿ ಬೇಕು।
ವಿರತಿಯ ಮಾರ್ಗದಿ ನಡೆಬೇಕು ೧

ಭೂತದಯಾ ಪರ ಬೇಕು।
ಪಾತಕ ತನವನು ಜರಿಯಲಿಬೇಕು।
ಮಾತು ಮಾತಿಗೆ ಹರಿಯೆನಬೇಕು ೨

ಶಾಂತಿಯ ಶಮೆದಮೆ ಹಿಡಿಯಲಿಬೇಕು।
ಭ್ರಾಂತಿಯ ಕ್ರೋಧವ ನಳಿಯಲಿಬೇಕು।
ಸಂತರ ಸಂಗದಲಿರಬೇಕು ೩

ತಂದೆ ಮಹಿಪತಿ ದಯ ಪಡಿಬೇಕು।
ಬಂದದನುಂಡು ಸುಖದಿರಬೇಕು।
ಎಂದೆಂದು ಭಕ್ತಿ ಬಲಿಬೇಕು ೪

## ೨೨೧

ನರ ಹರಿನಾಮವ ನೀ ನೆನೆದರೆ।
ಧರಿಯೊಳು ಸಾಲದೇ ಇಹಪರ ದೋರದೆ।
ಬರದೇ ಸಾಯಾಸ ಬಡುವರೇ ಪ

ಆದಿ ಯುಗಂಗಳಲಿ ತಾಪಸರು।
ಸಾದರ ಬಹುದಿನದಿಂದಾ।
ಸಾಧಿಸುವಗತಿ ಕೊಡುವ ನೊಂದೆ ಕ್ಷಣದಿ।
ಶ್ರೀಧರ ತಾ ದಯದಿಂದಾ ೧

ಸಂತರ ಸಂಗದಿ ಶ್ರವಣವ ಮಾಡಿ।
ಅಂತರ್ಭಾವನೆ ಬಲಿಸೀ।
ಭ್ರಾಂತ ನೀನಾಗದೆ ಅನ್ಯ ಸಾಧನದಲಿ।
ಸಂತತ ಕೀರ್ತನೆ ಬೆರೆಸೀ ೨

ಸಾವಿರಕೊಂದೆ ಈ ನುಡಿ ನಿಜವೆಂದು।
ಸಾವಧವನಾದವ ಮನುಜಾ।
ಭಾವಿಸು ಗುರುಮಹಿಪತಿ ಪ್ರಭುನುಡಿಸಿದ।
ಆವನಂಬವನೇ ದನುಜಾ ೩

## ೨೨೨

ನಾಮ ನೆನಯೋ ನೀಲಾಂಗನಾ ಪ

ನಾನಾ ಸಾಧನವ ಮಾಡಿ ಸಾಧಿಸುವದೇನು ಹೇಳಾ।
ಜ್ಞಾನ ಗುರುವಿನ ಕೇಳೋ ಕೀಲಾ ೧

ಕಾಶಿ ರಾಮೇಶ್ವರವಾದಾ ತೀರ್ಥದಲಿ ಮಿಂದ ಫಲಾ।
ಭಾಸುವದಾನಂದ ಘನ ನೀಲಾ ೨

ಗುರು ಮಹಿಪತಿ ಪ್ರಭು ಭಕ್ತಿಗೆ ಸುಲಭನಲಾ।
ಕರುಣದಲಿ ತಾರಿಸುವ ದಯಾಳು ೩

## ೨೨೩

ನಾರಾಯಣ ನರಹರಿ ಮಾಧವ ನಿಮ್ಮ ಪಾದಾ ದೋರೋ।
ಸಾರಭಕುತಜನ ಸುರತರುವಾಗಿಹ ಪಾದಾದೋರೋ ಪ

ಸಿರಿದೇವಿನಯನ ಚಕೋರ ಚಂದಿರವಾದ ಪಾದಾದೋರೋ।
ಗರುಡನಕರದ್ವಯ ಪಾವುಡ ಮಾಡಿದ ಪಾದ ದೋರೊ ೧

ಗೋಪಿಯ ಮುಂದೋಡಿಯಲಿ
ಕುಣಿದಾಡಿದ ಪಾದಾ ದೋರೋ।
ಆಫಣಿಯಂಗವ ನಿರ್ವಿಷ ಮಾಡಿದ ಪಾದಾ ದೋರೊ ೨

ಸರಸಿಜ ಭವಭವರೊಂದಿತ ಪಾವನ ಪಾದಾ ದೋರೋ।
ಗುರುಮಹಿಪತಿ ಪ್ರಭು ಕಂದಗೊಲಿದು ಬಂದು ಪಾದಾದೋರು ೩

## ೨೨೪

ನಿನಗೇನಾಯಚ್ಚರಿಲ್ಲೋ।ಕೇಳಾತ್ಮಾ।
ವನಜಾಂಬಕನ ಪಾದ ಭಕುತಿಯ ತೊರೆದಿ ಪ

ನಾನಾ ಯೋನಿಯಲಿ ತೊಳಲಿ । ಭವದುಃಖ ।
ಕಾನನದಲಿ ಬಳಲಿ ।
ಏನು ಪುಣ್ಯವೋ ಮುನ್ನ ಮಾಡಿದ ಫಲದಿಂದ
ಮಾನವ ಜನುಮ ಬಂದು ಹರಿ ಹರಿ ೧

ವಿಷಯ ಸುಖವ ಬೆರೆದು । ಬೇಕಾದ ।
ಸ್ವಸುಖವನೆಗಳದು ।
ಅಶನ ವ್ಯಸನದಲಿ ಪಶುವಿನ ಪರಿಯಲಿ ।
ನಿಶಿದಿನವನುಗಳೆದೇ ಹರಿ ಹರಿ ೨

ಸಾಧು ಸಂಗಕತ್ಯಗಳೀ । ಕುಜನರಾ ।
ಹಾದಿಯಿಂದಲಿ ಮರಳೀ ।
ಸಾದರ ವಿವೇಕ ದೀಪ ಮನೆಯೊಳಿಟ್ಟು ।
ಸಾಧಿಸೋ ನಿಜ ಘನವಾ ಹರಿ ಹರಿ ೩

ಅರಗಳಿಗೆಯ ನೋಡಲು ಶ್ರೀಹರಿ ।
ಸ್ಮರಿಸದೆ ತಾ ನಿರಲು ।
ಕರೆದು ವಡಿಯ ನಿನ್ನ ತನು ಲೇಶವ ಕೇಳಲು ।
ತೆರಗಾಣಿ ನುಡಿಗಳಿಗೇ ಹರಿ ಹರಿ ೪

ಹಿಂದಾದ ಮತಿಗಳಿಯೋ ಇನ್ನಾರೆ ।
ಮುಂದಣ ಪಥ ವರಿಯೋ ।
ತಂದೆ ಮಹಿಪತಿ ಬೋಧಾನಂದ ಪಡೆದು ಭವ ।
ಬಂದಗೆಲಿದು ಸುಖಿಸೋ ಹರಿ ಹರಿ ೫

## ೨೨೫

ನಿನ್ನ ನಗಲಿದಾ ಮೊದಲು ಪನ್ನಗ ವೇಣಿ । ನಿನ್ನ ನಗಲಿದಾ ।
ಮೊದಲಿನ್ನು ಕೋಮಲಾಂಗನಾ । ಮುನ್ನಿನೊಲುವ ನಾಕಾಣೆ ।
ಮಂದಗಮನೆ ಪ

ಕಂಗಳೆವಿಯಾ ಸಿಕ್ಕದೆ । ನಿನ್ನನೆನೆದು ।
ಅಂಗ ಕಳೆಗಳ ತೋರದೇ ।
ರಂಗ ನೆಡಬಲ ನೋಡಾ । ಇಂಗಿತ ಮಾನಿನಿಯರಾ ।
ಮುಂಗೋಪಿಯಾದಾ ಕೇಳಮ್ಮಾ ಹೇಳಲೇನಮ್ಮ ೧

ವಿರಹ ತಾಪವ ಬರೆದು ವಿರಕ್ತಿಯಿಂದಾ ।
ತಿರುಕರ ವೇಷ ತಳೆದು ಧರೆಯಾಧಾರೆಯೆರೆದು ।
ಅರಸುತನವ ಬಿಟ್ಟು । ಮರಳ ಗೋಲರಾ ಸೇರಿದಾ ।
ಮಾತು ಮೀರಿದಾ ೨

ವರದ ತಂದೆ ಮಹಿಪತಿ । ನಂದನ ಪ್ರಾಣಾ ।
ಶರಣ ಜನರಾ ಸಾರಥಿ । ಕರುಣಾಳು ಎಂಬುದಕೆ ।
ತುರುಗಾವನಾಗಿ ಬಂದ । ಹರಿಣಾಕ್ಷಿ ಏಳಾಲಿಂಗಿಸೇ ೩

## ೨೨೬

ನಿನ್ನನೇ ನಂಬಿದೆನಯ್ಯಾ ಪ

ನಿನ್ನನೇ ನಂಬಿದೆನಯ್ಯಾ । ಎನ್ನ ಬಿಡದಿರು ಕೈಯ್ಯಾ ।
ಇನ್ನು ನೋಡದೆ ನೆಲೆಯಾ । ಮನ್ನಿಸಿ
ಬೀರೆಲೋದಯಾ ೧

ತರಳ ತಾಯಿಯಲ್ಲದೆ । ನೆರೆಹೊರೆಯ ಬಲ್ಲದೇ ।
ಮರಳು ಮಂದನೆನ್ನದೆ । ಅರಹು ಕೂಡಿಸೋ ತಂದೆ ೨

ಹೋದೆಣಿಕೆಯ ಬಿಟ್ಟು । ಪಾದಸ್ಮರಣೆ ಕೊಟ್ಟು ।
ಸಾಧುಸಂಗದಲಿಟ್ಟು । ಬೋಧಾಮೃತವನಿಟ್ಟು ೩

ಜ್ಞಾನ ಭಕುತಿ ಇಲ್ಲಾ ಮೌನ ಸಾಧನವಿಲ್ಲಾ ।
ಏನೇನು ಸಾಧನವಿಲ್ಲಾ । ನೀನು ಪೇಕ್ಷಿಸುದಲ್ಲಾ ೪

ಗುರು ಮಹಿಪತಿ ಸ್ವಾಮೀ । ಶರಣರ ರಕ್ಷಕ ನೇಮಿ ।
ಸುರಮುನಿಜನ ಪ್ರೇಮಿ । ಹೊರಿಯೋ ಸಾಸಿರ ನಾಮಿ ೫

## ೨೨೭

ನಿನ್ನವ ನಾನೆಂದು ಸಿರಿನಲ್ಲಾ ರಕ್ಷಿಸೋ ।
ಎನ್ನವಗುಣಗಳ ಎಣಿಸದೆ ದಯದಿಂದ ಪ

ನಿನ್ನ ಚರಿತವ ಕಿವಿಯಲಿ ಕೇಳಿಸಿ ।
ನಿನ್ನ ಮೂರುತಿಯ ಬೆಳಗವದೋರಿಸಿ ।

ನಿನ್ನ ಪಾದಾಂಬುಜ ಪರಿಮಳ ಸುಳಿಸಿ ।
ನಿನ್ನ ನಾಮಾಮೃತ ಸವಿಸವಿ ಉಣಿಸಿ ೧

ನಿನ್ನ ಪೂಜಿಸಿಕೊಂಡು ಕರಗಳಿಂದ ।
ಚೆನ್ನಾಗಿ ಪ್ರದಕ್ಷಿಣೆಯಾ ಪಾದಗಳಿಂದ ।
ಧನ್ಯಗೈಸಿಯೆನ್ನ ಕಾಯ ನಮನದಿಂದ –
ಎನ್ನ ಮನವಿಟ್ಟು ನಿನ್ನ ನೆನುವಿನಿಂದಾ ೨

ಅನುದಿನ ಕೊಟ್ಟು ನಿನ್ನ ದಾಸರ ಸಂಗ ।
ಕೊನೆದೇಳದಿರಲೆನ್ನಾ ವಿಶ್ರಾಮದಂಗ ।
ನೀನಾಗಿರು ತುಂಬಿಯೆನ್ನಾ ಬಾಹ್ಯಾಂತರಂಗ ।
ಘನಗುರು ಮಹಿಪತಿ ಪ್ರಭುಶ್ರೀರಂಗ ೩

## ೨೨೮

ನಿನ್ನವನೆನಿಸಿದಾ ಮಾನವನಿಂಗೆ ಇನ್ನು ಭವಭಯ ಉಂಟೇ
ಭಕುತ ವತ್ಸಲ ಕೃಷ್ಣಾ ಪ

ಶ್ರವಣ ದರಹು ಇಲ್ಲಾ ನವವಿಧ ಭಜನಿಲ್ಲಾ
ಕವಿತದನುಡಿಯ ಚಾತುರ್ಯ್ಯವಿಲ್ಲಾ
ತವಚರಣವನಂಬಿ ಅವನಿಯೊಳಗನಿಶಿ
ದಿವಸದಿ ಅಚ್ಯುತಾನಂತ ಗೋವಿಂದ ಯನುತಲಿ ೧

ಘನ್ನ ವಿರಕ್ತಿಯಿಲ್ಲಾ ಮನ್ನಣೆಯ ತಪವಿಲ್ಲಾ
ಉನ್ನತ ದ ವ್ರತಶೀಲ ಕರ್ಮವಿಲ್ಲಾ
ಅನ್ಯದೈವ ಕೆರಗದೆ ನಿನ್ನ ನಾಮ ನಿನ್ನ ಮುದ್ರೆ
ನಿನ್ನವರಪರಿಚಾರ ತನದಲ್ಲಿ ರಮಿಸುತಾ ೨

ಮರೆದೊಮ್ಮೆನೆನೆದರೆ ಸರಿವದಘರಾಶಿ
ಅರಿದೊಮ್ಮೆನೆನೆಯಲು ಗತಿಸಂಪದಾ
ದೊರೆವುದೆನುತಶೃತಿ ನಿರುತ ಸಾರುತಲಿದೆ
ಗುರುಮಹಿಪತಿ ಪ್ರಭು ಎನ್ನನುದ್ಧರಿಸುದೈಯ್ಯಾ ೩

## ೨೨೯

ನಿನ್ನ ಹಿತವಾ ಪಡಿಯೋ ಹರಿಯ ಭಜಿಸಿ ಪ

ಸನಕ ಸನಂದನ ಮುನಿಜನರಾಡುವ ।
ಘನ ಸುಖ ಮಾರ್ಗದಿನಡಿಯೋ ಹರಿಯ ಭಜಿಸಿ ೧

ಕುಂಟಿಣಿ ಗಣಿಕಾ ಜ ಮೇಳ ರುದ್ಧರಿಸಿದಾ ।
ಕಂಠದಿ ನಾಮವ ಜಡಿಯೋ ಹರಿಯ ಭಜಿಸಿ ೨

ಗುರುವರ ಮಹಿಪತಿ ನಂದನು ಸಾರಿದಾ ।
ಶರಣರ ಸಂಗವ ವಿಡಿಯೋ ಹರಿಯ ಭಜಿಸಿ ೩

## ೨೩೦

ನಿಲ್ಲದೋ ನಿಲ್ಲದೋ ಮನವಿದು ಸಲ್ಲದೋ ಸಲ್ಲದೋ ಪ

ಸ್ನಾನ ಸಂಧ್ಯಾದಿ ಮೌನ ವಿಡದು ಅನು ।
ಷ್ಠಾನ ಜಪವ ಮಾಡಲಿ ಕುಳಿತರೆ ।
ತಾನಾಗ ಹೊರಡುತಲಿ ತಿರಗುತ ।
ನಾನಾ ದುರ್ವಿಷಯದಲಿ ತಂದು ಮಹಾನಿದ್ರೆ ಒಡ್ಡುತಲಿ ೧

ದೋಷ ಕರ್ಮಗಳಿಂದ ಘಾಸಿ ಬಡುವರೆಂಬ ।
ದೀ ಶಾಸ್ತ್ರಗಳ ಬಲ್ಲದು ಸದ್ಗುಣ ।
ಧ್ಯಾಸ ವೆಂದಿಗು ಮಾಡದು ದುರ್ವೃತ್ತಿ ।
ಹೇಸದಾ ಚರಿಸುವದು ೨

ಆವಗತಿಯೋ ಯೆನಗಾವ ಜನುಮವೋ ।
ಆವಬವಣೆಯಂಬುದು ತಿಳಿಯದು ।
ದೇವನೇ ಸಲಹುವದು ಮನ ।
ವಿವೇಕದಿ ತಿದ್ದುವದು ।
ಗುರು ಮಹಿಪತಿ ಸುತಗೊಲಿದು ೩

## ೨೩೧

ನಿಲಿಸಯ್ಯಾ ನಿಲಿಸೆನ್ನ ಮನವ ಶ್ರೀ ಹರಿಯೇ ನಿನ್ನಾ ।
ಹೊಳೆವ ಚರಣದಲ್ಲಿ ನೆಲೆಗೊಂಬುವಂದದಿ ಪ

ಯರಳಿಯು ಘಂಟಾನಾದಕೆ ಬಲೆ ಹೋಗುವಂತೆ ।
ಮರುಳಾಗಿ ತರಣಿಯರಾಳಾಪದಿ ।
ಭರದಿಂ ದೀವಿಗೆ ಕಂಡು ಪತಂಗ ಮಡಿವಂತೆ ।
ಹರಿದು ರೂಪ ವಿಷಯದಲಿ ಮುಗ್ಗುತಿಹುದೋ ೧

ಕರಿ ಅಂಗ ಸಂಗದೀ ಕುಣಿಯಾ ಬೀಳುವಂತೆ ।
ಸ್ಪರುಶ ವಿಕ್ಷಯದಲಿ ಮೈಮರೆದು ।
ಯರಗಿ ಮಾಂಸಕ ಗೋಣ ನೀವ ಮಚ್ಛದಂತೆ ।
ನಿರುತ ಜಿವ್ಹಾಸ್ವಾದಕ ತೊಳಲುತಲಿಹುದ್ಯೆಯ್ಯಾ ೨

ಪರಿಮಳಕಾಗಿ ಬ್ರಮರ ಸೆರೆ ಬಿದ್ದಂತೆ ।
ಹರುಷ ಪಡುತ ಭೋಗ ದ್ರವ್ಯದಲಿ ।

ತರುವರಿ ತನಲಿಂತು ಮಾಡಿ ವಿಷಯದಿ ಬಂದು ।
ದುರಿತ ಮೊನೆಗೆಯನ್ನ ಗುರಿ ಮಾಡಿತಿಹುದೈಯ್ಯಾ ೩

ಐದು ಮೋರೆಯಲಂತು ಹರಿಗುಡದೆವೆ ಮತ್ತ ।
ಐದು ಪರಿಯ ಕಾವಲಿಯ ನಿರಿಸೋ ।
ಮಾಧವ ನಿಮ್ಮ ಸತ್ಕಥೆಗಳ ಶ್ರವಣಕ ।
ಪಾದ ಧ್ಯಾನದಿ ಹಿಂಗದಂದದಿ ನಯನದಿ ೪

ನಿನ್ನ ದಾಸರ ಸಂಗ ವನುದಿನ ದೇಹಕ ।
ನಿನ್ನ ನಾಮಾಮೃತ ಜಿಹ್ವೆಯಲಿ ।
ನಿನ್ನ ನಿರ್ಮಾಲ್ಯ ತುಳಸಿಯಾ ಘ್ರಾಣಿಸುವ ತಾ ।
ಯನ್ನನುದ್ಧರಿಸು ಮಹಿಪತಿ ಸುತ ಪ್ರಭುವೆ ೫

## ೨೩೨

ನೀಡೆಲೋ ಶ್ರೀರಂಗಾ ನಿನ್ನ ದಾಸರ ಸಂಗಾ ಪ

ಕೂಡಿಸಿ ತವ ಚರಿತಾಮರ ಗಂಗಾ ।
ಮಾಡುವದು ಭವಭಂಗಾ ೧

ಮೂಡಲುದಯದಲಿ ಜ್ಞಾನಪತಂಗಾ ।
ಓಡುದು ತಮ ಅಂತರಂಗಾ ೨

ಸುಗಮದಿ ಗುರುಮಹಿಪತಿ ಪ್ರಭು ।
ಕಂಗಳಿಗೆ ದೋರುವುದು ಸುಖದಂಗಾ ೩

## ೨೩೩

ನೀರಜಗಂಧಿಯೇ ಹೇಳೇ ಸುಳಿದವರಾರಮ್ಮಾ ।
ನೀರಜ ಶರಪತಿ ಕಾಣಮ್ಮಾ ಪ

ಅರುಣನಖಾಂಗುಲಿ ಗುಲ್ಫ ಗೆಜ್ಜೆ ಕಾ–
ಪುರ ನೂಪುರದ ಲೊಪ್ಪುವನವದಾರಮ್ಮಾ ।
ಸರಸಿಯೊಳಗಪೊಕ್ಕು ತಮನಸುವ ಬಗೆದು ।
ವರಶೃತಿ ತಂದವ ಕಾಣಮ್ಮಾ ೧

ಕಲಿ ದಶನಂದದಿ ಜಂಘೆ ಪೊಂಬಾಳೆಯ ।
ಪರಿಯ ತೊಡೆಯುಳ್ಳುವ ದಾರಮ್ಮಾ ।
ಶರಧಿ ಮಥಿಸುವಂದುಗಿರಿನಿಲ್ಲದಿರೆ ಬಂದು ।
ಭರದಿ ಬೆನ್ನೆವಿತ್ತವ ಕಾಣಮ್ಮ ೨

ಕಾಂಚನ ವಸನನಿರಿಯ ಮ್ಯಾಲ ವಡ್ಯಾಣ
ಮಿಂಚಿನ ಘಂಟೆಯ ದಾರಮ್ಮಾ ।
ವಂಚಿಸಿ ಕ್ಷಿತಿ ವಯ್ದದನುಜನ ಶೀಳಿ ವಿ ।
ರಂಚಿ ಗುಳಹಿದವ ಕಾಣಮ್ಮಾ ೩

ಕಿರಿಡೋಳ್ಯಾತ್ರಿವಳಿಯ ನವರತ್ನ ಪದಕಿಹ ।
ಉರಸಿನ ವತ್ಸನವ ದಾರಮ್ಮಾ ।
ನರಹರಿ ರೂಪದಿ ಹಿರಣ್ಯಕನನು ಕೊಂದು ।
ಶರಣನ ಕಾಯ್ದವ ಕಾಣಮ್ಮಾ ೪

ಕೌಸ್ತುಭಹಾರ ಮೌಕ್ತಿಕದ ಕೊರಳಲಿಹ ।
ಹಸ್ತ ಕಡಗದವ ನಾರಮ್ಮಾ ।
ಸ್ವಸ್ತಿ ಎನುತ ಬಂದು ಬೇಡಿ ಬಲಿಯಾಗರ್ವ ।
ಸ್ವಸ್ತಿ ಮಾಡಿವನು ಕಾಣಮ್ಮಾ ೫

ತೋಳಬಂದಿ ಕೇಯೂರ ಶ್ರವಣ ಕುಂಡಲದ ಕ ।
ಪೋಲ ಹೊಳಹಿನವ ದಾರಮ್ಮಾ ।
ಏಳು ಮೂರು ಬಾರಿ ಕ್ಷತ್ರಿಯ ರಾಯರ
ಸೋಲಿಸಿ ಬಂದವ ಕಾಣಮ್ಮಾ ೬

ಕರ್ಪೂರ ಕರಡಿಗಿ ಬಾಯಿ ಸಂಪಿಗೆಯಂತೆ ।
ತೋರ್ಪ ನಾಶಿಕದವ ದಾರಮ್ಮಾ ।
ದರ್ಪ ಮುರಿದು ರಾವಣನ ತಲಿಯ ಧರೆ ।
ಗೊಟ್ಟಿಸಿದವ ನಿವ ಕಾಣಮ್ಮಾ ೭

ಕುಡಿಗಂಗಳ ಭ್ರೂಲತೆಯ ಪೆರೆನೆಣೆಸಲು ।
ನಡುವೆ ಕಸ್ತೂರಿ ರೇಖೆ ದಾರಮ್ಮಾ
ಪೊಡವಿಯೊಳಗ ನಂಬಿದ್ದ ಪಾಂಡವರನು ।
ಬಿಡದೆ ಸ್ಥಾಪಿಸಿದವ ಕಾಣಮ್ಮಾ ೮

ಕುರುಳು ಗೂದಲು ತಳಕದ ಮಾಲ್ಯ ಮೌಲಿಕ ।
ಧರಸಿದ ಮುಕುಟವ ದಾರಮ್ಮಾ ।
ತರಳನಾಗಿ ಮುಪ್ಪುರ ನಾರಿಯರ ವೃತ ।
ತ್ವರಿತದಿ ಅಳಿದವ ಕಾಣಮ್ಮಾ ೯

ನೋಡಲು ಮನಸಿಗೆ ಮೋಹನೆ ಮಾಡುವ ।
ಪ್ರೌಡದಿ ಮನವವ ದಾರಮ್ಮಾ ।
ರೂಢಿಲಿ ಕುದುರೆಯ ಏರಿ ಕಲಿಮಲವ ।
ಝಾಡಿಸಿದವನಿವ ಕಾಣಮ್ಮ ೧೦

ಸಹಜದಿ ಸವಿಸವಿ ಮಾತಲಿ ಸೋಲಿಸು ।
ತಿಹ ಸರ್ವರಿಗಿವ ದಾರಮ್ಮಾ ।
ಮಹಿಪತಿ ಸುತನ ಹೃದಯದಲಿ ನಿಂತು ತನ್ನ।
ಮಹಿಮೆ ಬೀರಿಸುವವ ಕಾಣಮ್ಮಾ ೧೧

## ೨೩೪

ನೀರೇ ಜಗದಾಧಾರನ ತೋರೆ । ಮೋಹನಕಾರೇ ಪ

ಸುರವರರರಿಯಾ ಅರಿಯಾ । ದೀನದಯಾಳು ಶ್ರೀ ಹರಿಯಾ ।
ವರನರ ಹರಿಯಾ ಕರಿಯಾ । ಮೊರೆಕೇಳಿದ ಯಾದವರ್ಧಿಲಿಯಾ ೧

ವನರುಹ ಸುತನಾನುತನಾ । ಪಾಂಡವಸ್ಥಾಪನ ಕೃತನಾ ।
ಅನಿರುದ್ಧನಪಿತನಾ ಪಿತನಾ । ರಜನೀಚರ ಕುಲಮಥನಾ ೨

ನರಕಾಸುರನಾ ಹರನಾ ಮಂದರ ಪರ್ವತಧರನಾ ।
ಗುರುವರ ಮಹಿಪತಿ ನಂದನ ಪ್ರಾಣಾ ।
ಸಿರಿಕೃಷ್ಣನಂದ ಕುವರನಾ ೩

## ೨೩೫

ನೀರೇ ತೋರೇ ಪಯೋನಿಧಿ ವಾಸನಾ।
ನೀರ ಜಾಸನಾನಂತ ಸರ್ವೇಶನಾ ಪ

ಹಸ್ತ ವರದನ ಹರಿಮಧುಸೂದನ।
ಹಸ್ತಿ ವಾಹಜನ ಸೂತಾದನಾ ೧

ಕರಿಯೇರಿದಾತನ ಶರಕುರುವಾತನ।
ಕರಿಹರ ಸಖ ಸನಾತನಾ ೨

ಅನಂತ ಮಹಿಮ ಕೇಶವ ಮುಕುಂದನ।
ಅನಂತ ಶಯನ ಗೋವಿಂದನಾ ೩

ಮಕರ ಧ್ವಜ ಪಿತನ ಪರಮಾನಂದನ।
ಮಕರ ಧ್ವಜ ಪಿತ ವಂದ್ಯನಾ ೪

ತಂದೆ ಮಹಿಪತಿ ನಂದನ ಜೀವನ।
ಹೊಂದಿದವರ ಕಾವಾ ದೇವನಾ ೫

## ೨೩೬

ನೀರೇ ನೀಕರೆ ತಾರೇ ಪ್ರಾಣದೊಲ್ಲಭನಾ।ಜಾಣ ಸುಜ್ಞಾನೇ ಪ

ಹೃದಯ ಮಂದಿರದೊಳು ಅರುಹುದೀಪವಹಚ್ಚಿ।
ಹಾಡಿ ನೋಡಲಿಹೆ ಮೈದೋರನ್ಯಾಕ।ಮೈದೋರ ನ್ಯಾಕ ೧

ಧ್ಯಾಸಮಂಚದಿ ಭಕುತಿ ಹಾಸಿಕೆಯು ಸು।
ವಾಸನೆಪುಣ್ಯಕ ವಲಿದು ಬಾರನೇ।ವಲಿದು ಬಾರನೇ ೨

ಸಕಲ ನುಕೂಲಿರಲು ಕ್ರೀಡೆಗೆ ಇನಿಯನು
ಪುಕಟ ದೊಲಿಯಭಾಗ್ಯ ಮಂದಳು ಕಾಣೇ।ಮಂದಳು ಕಾಣೇ ೩

ಅರಿದವಳು ಎಂದು ಅರಿತು ಕೈಯ್ಯವಿಡಿದು।
ಮರಳೆನ್ನ ಅಂತ ನೊಡುವರೇನೇ ನೋಡುವರೇನೇ ೪

ಧರೆಯೊಳು ಭೋಗಪದಾರ್ಥವು ಸರ್ಪದ।
ಸರಸದ ಓಲಾಯಿತು ಅಗಲಿರಲಾರೇ।ಅಗಲಿರಲಾರೇ ೫

ಬಂದರೊಂದಿನ ನಿಶೆದಲಿ ಕಳೆಗೂಡದೇ।
ಒಂದು ಜಾವ ವ್ಯರ್ಥಿಹೋಯಿತಲ್ಲಮ್ಮಾ।ಹೋಯಿತಲ್ಲಮ್ಮಾ ೬

ಗುರುವರ ಮಹಿಪತಿ ನಂದನ ಪ್ರಭುವಿನ।
ಚರಣವಗಾಣದೇ ಜೀವಿಸಲಾರೆ।ಜೀವಿಸಲಾರೆ ೭

## ೨೩೭

ನೀರೆ ತೋರೆಲೆ ಜಗಪಾಲ ಮುಕುಂದನಾ।
ಶೂಲಧರನ ಮಿತ್ರನಾ ಪ

ಪಾಂಡವರಕ್ಷಕನಾ।ಪುಂಡಲೀಕಾಕ್ಷನಾ।
ಚಂಡಕೋಟಿ ಪ್ರಕಾಶನಾ॥
ಕುಂಡಲ ವಿಭೂಷಿತ ಗಂಡಸತ್ಕಪೋಲನಾ।
ಪುಂಡಲೀಕಗತಿವರದನ ನಂದಕಿಶೋರನ ೧

ಪರಮ ವರಪುರಾಣ ಪುರುಷೋತ್ತಮನಾ।
ಕಂಸಾಸುರ ಮರ್ದನ ಗೋಪಾಲನಾ॥
ಉರಗಾರಿ ಗಮನನಾ ನಿರುಪಮ ಚರಿತನಾ।
ಸುರವರಾಗ್ರಜನಾದ ವಾಸುದೇವ ಮುಕುಂದನಾ ೨

ಸನಕ ಸನಂದನಮುನಿ ಮಾನಸ ಹಂಸನಾ।
ಅನುಪಮ್ಯನಂತ ಮಹಿಮಾ॥
ವನರುಹ ಯೋನಿವಂದ್ಯನ ಮಧು ಸೂಧನ।
ಘನಗುರು ಮಹಿಪತಿ ಸುತಪ್ರಭು ಶ್ರೀ ಕೃಷ್ಣನಾ ೩

## ೨೩೮

ನೀ ಯನ್ನ ಸಲಹುತಿಹೆ ಜನುಮ ಜನುಮಗಳಲ್ಲಿ।
ದಾನವಾರಿಯೆ ಉರಗಶಯನ ಸಿರಿರಂಗರೇಯಾ ಪ

ಮುದದಿಂದ ತನ್ನ ಮಕ್ಕಳನು ತಾ ನೆನಿಯಲಿಕೆ।
ಅದರಿಂದ ಪದಳಿಸುವ ಕಮಠದಂತೆ।
ಉದರದಲಿ ನವಮಾಸ ವಾಸಾಗಿ ಬೆಳೆಯುತಿರೆ।
ಪದುನಾಭನೆ ನಿಮ್ಮದಯದಿ ವರ್ಧಿಸಿದೆನಯ್ಯಾ ೧

ಜಲಧಿಯೊಳಗ ತನ್ನ ನೋಟದಿ ನೋಡಲಾಕ್ಷಣ ದಿ।
ಎಳೆಮೀನಗಳು ಬಹಳ ಸುಖಿಸುವಂತೆ।

ಇಳೆಯೊಳಗ ಜನಿಸಿದ ಬಳಿಕ ಕರುಣ ನೋಟದಾ।
ಒಲುಮಿಂದ ಸಕಲ ಸೌಖ್ಯದಲಿರುತಿಹೆನಯ್ಯಾ ೨

ನಂದನನು ಪೋಷಿಸುವ ಮಾತೆಯಂದದದಿ ದುರಿತ।
ಬಂದಡರೆ ಅಡಿಗಡಿಗೆ ಪರಿಹರಿಸುತಾ।
ಕುಂದ ದಾವಾಗ ರಕ್ಷಿಪೆ ತಂದೆ ಮಹಿಪತಿ ಕಂದ ನೊಡಿಯನೇ
ಚಿದಾನಂದ ಮೂರುತಿ ದೇವಾ ೩

## ೨೩೯

ನುಡಿ ಎನ್ನಪ್ರಿಯನಾ ನೀತಂದು ತೋರೆ ಸುಜ್ಞಾನೇ ಪ

ಕನಸಿನೊಳಗ ಕಂಡ ಪರಿಯಾ ರೂಪವ ದೋರಿ।
ನೆನವಿನೊಳಗಿಟ್ಟು ಮಯವಾದನೇ ೧

ಅಂಗಯ್ಯ ಲಿಂಗದಂತೆ ಸುಲಭವಾಗಿ ನಮ್ಮ।
ಸಂಗ ಸುಖವ ಬೀರಿದನೇನೇ ೨

ಗುರುಮಹೀಪತಿ ಸುತಪ್ರಭು ಕರುಣಾಮೂರ್ತಿ।
ತರಳೆಯ ತಪ್ಪ ನೋಡಬಹುದೇನೇ ೩

## ೨೪೦

ನೆನಿ ಮನವೇ ನೀ ಮುಕುಂದನ ಪ

ನೆನಿ ಮನವೇ ನೀ ಮುಕುಂದನಾ।
ಆನಂದನ ಅಜ ವಂದ್ಯನಾ ೧

ಸಿರಿಲಕ್ಷುಮಿ ಮನೋಹರನಾ।
ಸುರಾಧಾರನಾ ಯದುವೀರನಾ ೨

ಶರಣರ ದುರಿತ ನಿವಾರಿಯಾ।
ವರ ಶೌರಿಯಾ ಮುರವೈರಿಯಾ ೩

ಮನೋಹರ ಮೂರುತಿ ರಾಮನಾ।
ಘನ ಶ್ಯಾಮನಾನಂತ ನಾಮನಾ ೪

ಗುರು ಮಹಿಪತಿ ಸುತ ಪ್ರೀಯನಾ।
ಸ್ಮರ ನೈಯನಾ ಕೃಷ್ಣರೇಯನಾ ೫

## ೨೪೧

ನೆನೆಯೋ ನೀ ಎನ್ನ ಮನವೇ।
ಅನುಪಮ್ಯ ಶ್ರೀ ಮುಕುಂದನಾ।
ಅನಾಥ ಜನ ಚಕೋರ ಸುನಕ್ಷತ್ರೇಶ ಗೋಪಾಲನಾ।
ಶ್ರೀಲೊಲನಾ ನಂದಬಾಲನಾ ಪ

ವರಭಕ್ತ ಧೃವಗ ಸ್ಥಿರಪದ ವಿತ್ತನಾ।
ಧರಣಿಯ ಭಯಹರ ಪುರುಷೋತ್ತಮನಾ।
ಉರಗಾರಿ ಗಮನನಾ ಉರಗ ತುಳಿದವನಾ।
ಉರಗಶಯನುರಗಾ ಭರಣನ ಸಖನಾ।
ಸುನಖನ ಅಬ್ಬ ಮುಖನಾ ೧

ಶರಣ ರಕ್ಷಕನಾ ದುರಿತ ನಿವಾರಕನಾ।
ಕರುಣಾದೀ ಅಹಲ್ಯಯ ನುದ್ಧರಿಸಿದನಾ
ಸರಸಿಜ ಸಮಪದ ಸರಸಿಜನಾಭನಾ।
ಸರಿಸಿಜ ಪಾಣಿಯ ಸರಸಿಜ ನೇತ್ರನಾ ೨

ಸುಚರಿತ್ರನಾ ಮುನಿಸ್ತೋತ್ರನಾ।
ಗುರುವರ ಮಹಿಪತಿ ನಂದನ ಜೀವನಾ।
ಗಿರಿವರಧಾರನಾ ಕಂಸಾಸುರ ಮರ್ಧನಾ।
ಕರಿವ ವರದನಾ ಶರಧಿ ನಿವಾಸನಾ।
ಹರಿಶತ ಕಿರಣ ಹರಿಸುತ ಪ್ರೀಯನಾ।
ಸ್ಮರಸೈಯ್ಯನಾ ಕೃಷ್ಣರೇಯನಾ ೩

## ೨೪೨

ನೆನೆವೆನಾ ನೆನೆವರಿಗೊಲಿವನಾ ಅನುದಿನಾ ನೆನೆವನಾ।
ಕಾವನಾ ಪಾವನಾ ದೇವನಾ ಪ

ಗಜರಾಜ ಧ್ರುವ ಪ್ರಲ್ಹಾದಂಬರೀಷನ।
ಅಜಮಿಳ ವಿಭೀಷಣ ರುಕ್ಮಾಂಗದರ್ಜುನ।
ಸುಜನ ಭೀಷ್ಮ ವಿದುರನ।
ನಿಜವ ದೋರಿಧನ್ಯ ಗೈಸಿದವನಾ ೧

ಮುರಾರಿ ವಾರಿಜಾರಿ ವಂಶ ವೀರಧೀರನಾ
ಪಾರ ವಾರನಾ ಸುರ ಸಹಕಾರನಾ
ಕರುಣಾಳು ಮೂರುತಿ ಪರಮೋದಾರನ
ಗುರು ಮಹಿಪತಿಜ ಮನೋಹರನಾ ೨

## ೨೪೩

ನೋಡಮ್ಮಮ್ಮಾ ಎಂಥವನಿವಾ ಚೆನ್ನನೆ।
ಗೋಪಿಯ ಕಂದಾ ಅಂತವ ದೋರಗುಡನೆ ಪ

ಸಗಟನ ಮುರಿದೊತ್ತಿದಾಮೊಲೆಯ ಕೊಟ್ಟ।
ಮುಗುದೆಯ ಪ್ರಾಣ ಹೀರಿದಾ ೧

ವಿಷಮಡು ಕಲಕಿದನೆ।ಕಾಳಿಂಗನಾ।
ವಸುಧೆಗೆ ಎಳೆತಂದನೆ ೨

ಪಶುಪಕ್ಷಿ ಮೃಗಾಂಗನೇರು।ಕೊಳಲಧ್ವನಿಗೆ।
ನಿಸಿದಿನಿ ಮರುಳಹರು ೩

ತಿನಬ್ಯಾಡಮಣ್ಣವೆಂದರೆ।ಬಾಯೊಳು ಜಗವ।
ದೋರಿದ ಜನ ಬೆದರೆ ೪

ತಂದೆ ಮಹಿಪತಿ ಸ್ವಾಮಿಯ।ಹೇಳಲಿ ನಾನು
ಒಂದೆರಡೆಂದು ಲೀಲೆಯ ೫

## ೨೪೪

ನೋಡಮ್ಮಾ ಶ್ರೀ ವಾಸುದೇವನಾ ನಮ್ಮ
ಬೇಡಿದಿಷ್ಟಾರ್ಥವ ನೀವನಾ ಪ

ಗೂಢಪರಾತ್ಪರ ಗೂಢನಾ ಪರ ಬ್ರಹ್ಮ
ರೂಢಿಗೆ ನರಲೀಲೆಯಾಡುವ ಬಗೆಯಾ ಅ.ಪ

ದೇವರ ಅನುಮತ ನೋಡಿದಾ ಅಂವ
ದೇವಕಿ ಉದರದಿ ಮೂಡಿದಾ
ಪಾವನ ಗೋಕುಲ ಮಾಡಿದಾ ಸುಖ
ದೇವಿ ಯಶೋದೆಗೆ ನೀಡಿದಾ
ಆವಾವ ಪರಿಯಲಿ ನೋವ ಬಗೆಯ ಬಂದು
ಗಾಲಿಲ ಅಸುರರ ಜೀವನ ವಳಿದಾ ೧

ಗೊಲ್ಲತೆಯರ ಮನಮೋಹಿಸಿ ಕದ್ದು
ಅಲ್ಲಿಹ ಪಾಲ್ಬಣ್ಣೆ ಸೇವಿಸಿ
ಬಿಲ್ಲ ಹಬ್ಬದ ನೆವತೋರಿಸಿ ಪೋಗಿ
ಮಲ್ಲಚಾಣರರಾ ಭಂಗಿಸೀ
ಬಲ್ಲಿದ ಕಂಸನ ಮಲ್ಲಯದ್ಧಗಳಿಂದ
ಘಲ್ಲಿಸಿದನು ಜನಚಲ್ಲಿ ಬಡಿದನಾ ೨

ನೀರೊಳು ಕಟ್ಟಿಸಿ ಮನೆಯನು
ಬಂಗಾರದ ದ್ವಾರಕಾ ಪುರವನು
ಸೇರಿಸಿ ಯದುಕುಲದವರನು ರುಕ್ಮಿ
ಣೀ ರಮಣಲ್ಲಿಗೆ ಮರೆದನು
ಸಾರಿದ ಶರಣರಾ ತಾರಿಸಿ
ಹೋದನು ಮಹಿಪತಿ ನಂದನ ಪ್ರೀಯನಾ ೩

## ೨೪೫

ನೋಡಿರೇ ನಂದ ಕಂದನಾ
ನೋಡಲು ಕಣ್ಣಿನ ಪಾರಣೆ ಮಾಡುವಾ ಪ

ಸೂರಿಯಾ ನಿಳಿಯಲು ಅಪರದ ಜಾವಕ
ಸಾರಿಸಿ ಗೋಧನ ತಿರುಗಿಸುತಾ
ವಾರಿಗ ರೆಲ್ಲರು ವಂದಾಗಿ ಹರುಷದಿ
ಧೀರನು ದಾರನು ಆಡೂತ ಬರುವಾ ೧

ಚಂಡು ಬಗರಿ ಚಿಣಿ ಕೋಲು ಚಪ್ಪಳಿಕೈಯ್ಯಾ
ಹಿಂಡ ನೆರೆದು ಹಂಬಲಿ ಹಾಕುತಾ

ಮಂಡಳದೊಳಗುಳ್ಳ ಆಟವ ನಾಡುತ
ಪಂಡರಿ ಕಾಕ್ಷನು ಲೀಲೆಯ ನಲುವಾ ೨

ಗೋಧೂಳಿ ತುಂಬಿದ ಗುಂಗುರ ಗೂದಲು
ಉದಿಸಿದ ಹಣೆಯಲಿ ಕಿರಿ ಬೆವರು
ಬೆರಿಸಿ ಪರಿಪರಿ ಸ್ವರದಲ್ಲಿ ಕೊಳಲವ
ನೂದುತ ಕುಣಿಯುತ ನಗೆವುತ ಬರುವಾ ೩

ಅಲವುತ ಕುಂಡಲ ಹೊಳೆಯುತ ಕಣ್ಣಿನ
ಚಲುವಿನ ಕಸ್ತೂರಿ ರೇಖೆಯಲಿ
ನೌಲಗರಿಯ ವಾರಿ ದುರುಬವ ಕಟ್ಟಿಸಿ
ನೀಲಮಣಿಯ ಮ್ಯಾಲ ಪುತ್ಥಳಿ ಬರುವಾ ೪

ಪೇಂದ್ಯ ಉದ್ದದ ಬಲರಾಯ ಸುಧಾಮರ
ವೃಂದದಿ ಮಹಿಪತಿ ಸುತ ಪ್ರೀಯನು
ಇಂದು ವದನೆಯರು ಆರುತಿ ಕೊಳುತಲಿ
ವಂದದಿ ಮಧ್ಯ ನಾಯಕನಾಗಿ ಬರುವಾ ೫

## ೨೪೬

ನೋಡಿರೆ ನೋಡಿರೆ ನಂದನ ಕಂದನ।
ಆಡುವ ಆಟದ ಘನ ಮಹಿಮೆಯನು।
ರೂಢಿಲಿ ಶಿಶುವೆಂದವರ ನುಡಿ ಮಾಡುವ ಬಲುಕುಂದಾ ಪ

ದುರುಳತನವ ಬಲು ಮಾಡಲ್ಕೈಶೋಧೆಯು।
ತರಳನ ಚರಣವ ನೆರೆ ಕಟ್ಟಿದರೆ।
ಒರಳವ ನೆಳೆದೊಯ್ದಾ ಭರದಲಿ ಮರಗಳ ನಡ ಮುರಿದಾ ೧

ಸಿಕ್ಕಿದ ಗೋವಳನೆನುತಲಿ ಬಾಲೇರು।
ಅಕ್ಕರದಲಿ ಹಿಡಿದೆಳೆತರಲವರಾ।
ಮಕ್ಕಳ ರೂಪವನು ಆಗುತೆ ಠಕ್ಕಿಸಿ ಹೋಗುವನು ೨

ತಂದೆ ಮಹಿಪತಿ ನಂದನ ಪ್ರಭುವಿನಾ।
ನಂದನ ಲೀಲೆಯ ಹೇಳಲೆನ್ನಳವೇ।
ಒಂದಲ್ಲ ಎರಡಲ್ಲ ನೆಲೆಯನು ಇಂದುಧರನೇ ಬಲ್ಲ ೩

## ೨೪೭

ನೋಡುವರೇ ಅಂತವಾ।ನೋಡುವರೇ।
ಮೂಢ ಪಾಮರನೆಂದುದ್ಧರಿಸದೇ ಸುಮ್ಮನೇ ತಾಕೂಡುವುದೇ ಪ

ಜ್ಞಾನ ಧ್ಯಾನ ಮೌನವರಿಯೆ।ಪೂಜೆಯ ನಾ ಮಾಡುವರೇ।
ಗಾನ ಮಾನ ಏನೂ ಅರಿಯೆ।ಸ್ತುತಿ ಸ್ತವನ ಪಾಡುವರೇ? ೧

ಚತುರ ಉತ್ತರ ಮಾತುಗಳರಿಯೆ।ಸತ್ಸಂಗದಿ ಕೂಡುವರೇ।
ಇತರ ಯಾತರ ಆತುರನರಿಯೆ।ವರಗಳನಾ ಬೇಡುವರೇ ೨

ಹಾವ ಭಾವ ಭಕ್ತಿಗಳರಿಯೇ।ಛಲ ಬಿಂಕವ ಹಿಡಿವರೇ।
ದೇವಕಾವುದು ಮಹಿಪತಿ ಸುತ ಪ್ರಭುತವ ದಾಸನ ಮಾಡುವರೇ ೩

## ೨೪೮

ನಂದಕಂದನ ನೋಡಿರೇ।
ಅಂದದಿ ಛಂದದಿ ಪಾಡಿರೇ ಪ

ದುಡುದುಡುಕೆಂದು ಕಡೆಯಲು ಗೋಪಿ।
ಒಡನೊಡನಾಲಿಸಿ ಶಬ್ದವಾ॥
ದುಡುದುಡು ಬಂದ ಕಡಗೋಲ ಪಿಡಿದು
ಬಿಡದೆವೆ ಬೆಣ್ಣೆಯ ಬೇಡುವಾ ೧

ಝಳಝಳಿಸುವ ಅಂದುಗೆ ಗೆಜ್ಜೆಗಳಾ।
ಘಿಲು ಘಿಲುಕೆಂದು ನುಡಿಸುವಾ।
ಎಳೆಯಳೆಗೆಳೆರ ಮೇಳದಲಾಡಿ।
ನಲಿನಲಿದಾಡುತಲೊಪ್ಪುವಾ ೨

ಅಚ್ಚರಿ ಬಗೆಯಲಿ ಗುರುಮಹಿಪತಿ ಪ್ರಭು
ಸಚ್ಚರಿತಾಮೃತ ಬೀರುವಾ॥
ಪಟ್ಟದ ಬೊಂಬೆಯ ನಿಚ್ಚಳ ಭಾಸುವ।
ಅಚ್ಯುತನಾಕೃತಿ ದೋರುವಾ ೩

## ೨೪೯

ನಂದ ಕಂದನೇ ಇವಸುರವೃಂದ ವಂದ್ಯನೇ
ಧರೆಯ ಮರೆಗಿಂದು ಬಂದನೇ
ಹಿಂದೆವೇದವನೆ ರಕ್ಷಿಸಿದವನೇ ಮಂದರಗಿರಿ ಪೊತ್ತವನೇ
ಸುಂದರಿ ಶರಯನೆ ಬಿಡಿಸಿದ ದೇವನೇ
ಛಂದದಿ ಮಗು ಕಾಯ್ದವನೇ ೧

ನಾನಾ ರೂಪನೇ ಧರಿಸಿ ಧರ್ಮವನೆ ಸ್ಥಾಪನೇ
ಮಾಡುವದುಷ್ಟ ಜನ ಲೋಪನೇ
ತುನಾಭಿಲಾಷನೇ ನೆಗೆಹಿದ ಪರುಷನೇ

ಮಾನಿನೀ ಕೃತ್ಕೂಲುಷನೇ ಮಾನಿನೀ ಹೃತ್ಕಲುಷನೇ
ಬಾನುಜೆ ತೋಷನೇ ಬುದ್ಧ ಕಲ್ಕೇಶನೇ
ದಾನವ ಜಗದಂಕುಶನೇ ೨

ಮಾನುವೆನ್ನಲೆ ಗಿರಿಯ ಪೊತ್ತದೇನು ಕಣ್ಣಿಲೇ
ಕಾಣದೇ ಜನ ತಾನು ತನ್ನಲೇ
ಸ್ವಾನಂದ ಲೀಲೆ ದೋರಲು ಬಾಲೇ
ನಿಜಗುಣ ಮಾತೇ ಮಹಿಪತಿಜ ಪ್ರಿಯನ ಬಲೆ ೩

## ೨೫೦

ನಂದನಂದನ ಪದ್ಮಾನಂದನ ವಂದ್ಯನೇ।
ತಂದೆ ಮಹಿಪತಿಸುತ ಪ್ರಭುವೇ ಮುಕುಂದ ಕೃಷ್ಣ ಪ

ಸಿರಿಯಾ ಸೌಖ್ಯ ದಿಂದುಬ್ಬಿ ಮದದಿಂದ।
ಸರಿಯನಗಾರು ಇಲ್ಲೆಂಬ ತಾಮಸದಿಂದ।
ಮರದೆನೋ ಹರಿನಿಮ್ಮಾ ಸ್ಮರಣೆಯಾ ಮರವಿಂದ।
ತಿರುಗಿ ದಣಿದೆ ನಾನು ನಾನಾಯೋನಿಗಳಿಂದ।
ತರಹರಿಸಲಾರೆ ತಾಪತ್ರಯದುಃಖಗಳಿಂದ।
ಶಿರಿಕೃಷ್ಣ ಸಲಹೆನ್ನ ಪರಮ ಕರುಣದಿ। ೧

ಮುನ್ನ ಮಾಡಿದಪರಾಧ ಸಕಲವ ನೀನು ಕ್ಷಮೆಯನುಮಾಡಿ
ಚೆನ್ನ ಕಿಂಕರನೆಂದು ದಯದಲಿ ಅಭಯಕರವನು ನೀಡಿ
ನಿನ್ನ ಸ್ಮರಣೆಯಕೊಟ್ಟು ಕರುಣ ಕಟಾಕ್ಷದಿಂದಲಿ ನೋಡಿ
ಚೆನ್ನ ಶ್ರೀಕೃಷ್ಣ ಭವದಿಂದುದ್ಧರಿಸಯ್ಯಾ ತಾರಿಸಯ್ಯಾ ನೀನು ೨

ಪತಿತ ಪಾವನ ನೆಂಬಾಬಿರುದು ಸಾರುತಿದೆ
ಗತಿಗೆಟ್ಟ ಅಜಮಿಳನ ತಾರಿಸಲಿಲ್ಲವೇ

ಸತಿಯಾದಾ ಪಾಷಾಣ ಉದ್ಧರಿಸಲಿಲ್ಲವೇ
ಕ್ಷಿತಿಯೊಳೆನ್ನ ತಾರಿಸುವದೊಂದರಿದೇ ಶ್ರೀಕೃಷ್ಣಾ ೩

ಕರಿರಾಜನಂದದಿ ಹರಿತವಸ್ಮರಣೆ ಮಾಡಲರಿಯೇ
ಶರಣ ಪ್ರಲ್ಹಾದನಂತೆ ಕರೆಯ ಬರಿಯೇ
ನರೆನಂತೆ ನಾನಿನ್ನ ವಲಿಸಿಕೊಳ್ಳಲರಿಯೇ
ತರಳ ಧ್ರುವನಂತೆ ಧ್ಯಾನಿಸಲರಿಯೇ
ಶಿರಿಕೃಷ್ಣಾ ಗತಿಯಂಬದುವಿನಾ ಮತ್ತೊಂದರಿಯೇ ೪

ನಿನ್ನ ನಾಮವನು ಕೊಂಡಾಡುವೆ ಪೊಗಳುವೆ
ಚನ್ನಾಗ್ಯನುದಿನದಲನವರತಾ
ತನ್ನಯಕರುವಿಗೆ ಕರುಣಿಪಗೋಪಂತೆ
ಎನ್ನ ನೀಸಲಹುದು ಶಿರಿಕೃಷ್ಣರೇಯಾ ೫

## ೨೫೧

ನಂಬಬೇಕು ಹರಿಯ ನಾಮಾ ಪ

ನಾಮವೇ ಸ್ನಾನವು ನಾಮವೇ ಸಂಧ್ಯಾನವು।
ನಾಮವೇ ಜಪ ತಪ ನಾಮವೇ ಮೊನವು।
ನಾಮವೇ ಜ್ಞಾನಾ ನಾಮವೇ ಧ್ಯಾನಾ।
ನಾಮವೇ ಧಾರಣ ನಾಮ ನಿಧಾನಾ ೧

ನಾನಾ ಸಾಧನ ಕಾನನ ಮಾರ್ಗದಿ।
ಗುಣದ ಪಶುಪರಿ ಕಾಣದೇ ತಿರುಗುವಿ।
ಏನು ಪಲವೋ ಮತಿ ಹೀನ ಗುರು।
ಜ್ಞಾನದ ಮನಿ ನಿಧಾನದಿ ಕೇಳು ೨

ಪೋಡವಿಲಿ ಗಂಗೆಯ ತಡಿಯೋಳು ಕುಳಿತಿರೆ।
ಕುಡಿಯಲು ಜಲವನು ಹುಡುಕುವ ಭಾವಿಯ।

ನಡತಿದು ಛಂದವೆ ಬಿಡು ಬಿಡು ಸಂಶಯ।
ಹಿಡಿಗುರು ಮಹಿಪತಿ ಒಡಿಯನ ಬೋಧಾ ೩

## ೨೫೨

ನಂಬಿ ನೆನೆಯೋ ಹರಿಯನಾಮ।ವಿಡಿದು ಘನ ಪ್ರೇಮಾ।
ಭಾವಿಸಲೋ ನಿಷ್ಕಾಮಾ।
ಇಂಬಾಗಿ ಹೊರೆವನು ನೇಮಾ ಮಂಗಳ ಧಾಮಾ ಪ

ಹೆಸರಿಟ್ಟು ಹೋಲಿಸಿ ಕರೆದಾಜಮಿಳಗ ವರದಾ।
ನೋಡೆಲೋ ಹರಿ ಬಿರುದಾ।
ವಸುಧಿಲಿ ಭಕುತಿಂದ ಬೆರೆದಾವಗೆ ನೆರದಾ ೧

ಸಕಲಧರ್ಮಗಳಿಂದವ ಜಾರಿ ಯನ್ನ ಚರಣವ ಸಾರಿ।
ಭಜಿಸೆಂದು ಉದಾರಿ।
ಪ್ರಗಟದಿ ಅರ್ಜುನಗ ಸಾರಿದನೋ ಮುರಾರಿ ೨

ಇನ್ನೊಂದು ಸಾಧನವು ಸಲ್ಲಾ ಇದರಿಂದಧಿಕಿಲ್ಲಾ।
ತಂದೆ ಮಹಿಪತಿ ಸೊಲ್ಲಾ।
ಮನ್ನಿಸಿ ನಡೆಯಲು ಸುಲಭ ಕೈವಲ್ಯಾ ೩

## ೨೫೩

ನಂಬಿ ಭಜಿಸಿರ್ರೈಯ್ಯಾ ಶರಣರು ಪ

ನಂಬಿ ಭಜಿಸಿರ್ರೈಯ್ಯಾ ಶರಣರು।ಅಂಬುಧಿವಾಸ ಶ್ರೀ ದೇವನಾ।
ಹಂಬಲ ಬಿಡಿ ಅನ್ಯ ಮಾರ್ಗದಾ।
ಅಂಬುಜಾಂಬಕ ಪರದೈವನು ಗಡಾ। ೧

ತ್ರಿಮೂರ್ತಿಯೊಳು ಮಿಗಿಲಾರೆಂದು ನೋಡಾ।
ಲಾ ಮುನಿಯಮರರು ಕಳುಹಲು।

ಪ್ರೇಮದಿ ಭಾರ್ಗವರಿತು ಬಂದುತ್ರಿಧಾಮನೇ
ಪರದೈವವೆಂದನು ಗಡಾ। ೨

ನೆರೆದಿಹ ಶರಧಿಹ ಮಥನದಲ್ಲಿ
ದೇವಾಸುರರೆಲ್ಲ ತವಕದಿ ಕುಳಿತಿರೇ।
ಜರಿದು ಸರ್ವರ ನೋಡಿ ಇಂದಿರೆ ಬಂದುಹರಿಗೆ
ಮಾಲೆಯ ಹಾಕಿದಳು ಗಡಾ ೩

ಒಡಿಯನೆಂದಜಕರ ಪಾತ್ರದಿ ಜಲವಿಡಿದು
ಶ್ರೀ ಚರಣವ ತೊಳೆಯಲು।
ವಡನೆ ತೀರಥವಾಗಿ ಸುರನದಿ ಬರೆ।
ಮೃಢ ಶಿರಸದಿ ಧರಿಸಿದ ಗಡಾ ೪

ಮೂರಕ ಮೂರ ಮೂರುತಿಯಾಗಿ ಗುಣ।
ಮೂರಕದೂರವದೆನಿಸುವಾ।
ಸಾರಿದವರಾ ಕಾವಾ ಮಹಿಪತಿಸುತ।
ಸಾರಥಿಯಾಗಿ ರಕ್ಷಾಪ ಗಡಾ ೫

## ೨೫೪

ನಂಬಿ ಭಜಿಸು ಹರಿಯಾ।
ಅಂಬುಜನಾಭನ ಹಂಬಲದಿಂದಾ ಪ

ಶ್ರವಣ ಕೀರ್ತನ ಮೊದಲಾಗಿಹ ನವವಿಧ।
ಹವಣದ ಭಕುತಿಯ ಸವಿಸವಿಯಿಂದಾ ೧

ಏನೂ ಇಲ್ಲದ ಮೂರು ದಿನದ ಸಂಸಾರಕ।
ನಾ ನನ್ನದು ಯಂದೆನುತಲಿ ಶ್ರಮಿಸದೆ ೨

ಶರೀರಿಂದ್ರಿಯಗಳು ಸ್ಥಿರವಿದ್ದ ಕೈಯಲಿ।
ಜರೆ ಬಂದೆರಗುತ ಮರೆಸದೆ ಮುನ್ನಾ ೩

ಕೇಳೀಕೋ ಗುರುವಿನಾ ತಿಳಿಯದಿದ್ದರೆ ಕೀಲರಿ।
ಹೇಳುವ ಸ್ವಹಿತವ ಜಾಳಿಸಿ ಸಂಶಯ ೪

ಹೊಂದಿದವರ ಕೈಯ್ಯಾ ಎಂದೆಂದು ಬಿಡನೆಂದು।
ತಂದೆ ಮಹಿಪತಿ ಕಂದಗ ಸಾರಿದ ೫

## ೨೫೫

ನಂಬುಗೆ ಪಡಿಯಿರೋ ದೇವರ ದೇವನಾ ಪ

ರಾಮಸಾಸಿರ ನಾಮ ಸದ್ಗುಣ ಧಾಮ ಸಾರ್ವಭೌಮ
ತಾಮರಸ ಸಖ ಆ ಮಹಾಕುಲೋದ್ದಾಮ ಆಹವ ಭೀಮ।
ಸ್ವಾಮಿ ಸಕಲರ ಕಾಮಿತಾರ್ಥವ ನೇನಿ ಮುನಿಜನ ಪ್ರೇಮಿ।
ಭೂಮಿ ಅಹಿತಳ ವ್ಯೋಮ ಜಗದಂತರ್ಯಾಮಿ
ಚರಿತ ನಿಸ್ಸೀಮಿಯಾ ೧

ಧಾಟಿಯಲಿ ನರನಾಟಕ ವಿಡಿದ ಆಟವಾಡಲು ನೀಟಾ।
ಕೋಟಿ ಕೋಟಿ ನಿಶಾಟ ದರ್ಪೋಚ್ಚಾಟ ಮಾಡಿದ ಸ್ಫೋಟಾ।
ನೀಟ ಶರಣ ಮುಕುಟಿಗಿತ್ತನು ಪೀಠಾ।
ಧೀಟ ಶ್ರೀ ಜಟೆ ಜೂಟ ವಂದಿತ ಪಾಟರಹಿತ ಸ್ವರಾಟನಾ ೨

ಅಂದು ಇಂದೇ-ನೆಂದಿಗಾದರ ವಂದೇ ದಯದಿಂದ।
ಛಂದ ಛಂದದ-ಲಿಂದ ಭೋಕ್ತರ ಬಂಧು ಭಕ್ತರ ವೃಂದ।
ಸುಂದರಾನನ ಕುಂದರದನ ಸುಮಂದ ಹಾಸಾನಂದ।
ಇಂದಿರೈರಸ ತಂದೆ ಮಹಿಪತಿ ಕಂದ ಪ್ರೀಯ ಮುಕುಂದನಾ ೩

## ೨೫೬

ನಂಬು ದಯಾನಿಧಿ ರಾಮನಾ ಪ

ಶಬರಿಯ ಭಾವಕೆ ಮೆಚ್ಚಿ ಉಂಡನು ಬದರಿ ಫಲಾ।
ವಿಭು ನೀಡಿದನು ಪದಾಚಲಾ ೧

ತೃಣ ಪಶು ಪಿಪ್ಪೀಲಿಕಾ ನಗಾದಿಗಳಾ।
ಸುಗತಿಗೆ ವೈದನು ಘನ ನೀಲಾ ೨

ಗುರು ಮಹಿಪತಿ ಪ್ರಭು ನೀರೊಳು ತಾರಿಸಿದ ಶಿಲಾ।
ಚರಿತವ ದೋರಿದ ಸಿರಿಲೋಲಾ ೩

## ೨೫೭

ನಂಬಿದವರ ಇಂಬಾದಾ ಕಮ
ಲಾಂಬಕನೇ ನಿನ್ನ ನಾಮ ಮಹಿಮೆಯಂತೋ ಪ

ಪಾತ–ಕವ ಮಾಡಿಯಮ ದೂತರೆಳೆತರುತಿರಲು
ಧಾತುಗಂದಿ ಅಜಮಿಳ ಭೀತಿಯಲಿ
ಸುತನಾರಾಯಣ ನೆನಲು ಬಂದು
ಖ್ಯಾತಿ–ನಾಮ ಹರಿಯಿತೋ ನೀಹೊರೆದೆಯೋ ೧

ಪ್ರೇಮದಿಂದೋದಿ ಪಗಿಳಿಯಾ ವ್ಯಾಮೋಹ ಅಂತ್ಯದಲಿ
ಕಾಮಿನಿ ಗಣಿಕೆ ದೇಹ ಬಿಡಲಾರದೇ
ರಾಮರಾಮಾ ಮಾತಾಡೋಯನ್ನೆ
ನಾಮವೇ ಗತಿ ನಿಡಿತೋ ನೀನೀಡಿದೆಯೋ ೨

ಅಂದಿಗಿಂದಿಗ್ಯಾದ ಭಕ್ತ ವೃಂದ ದವಸರದಲ್ಲಿ
ಛಂದದಿಂದ ಬಂದು ಕಾಮ್ಯ ಪೂರಿಸುವ

ತಂದೆ ಮಹಿಪತಿ ಸ್ವಾಮಿ ನಾಮಾ
ನಂದಬಲ್ಲ ನಲ್ಲದೇ ನಿನ್ನಾರು ಬಲ್ಲರೋ॥ ೩

## ೨೫೮

ನಂಬು ನರಮೃಗನಾ।ಮನುಜಾ।
ಅಂಬುಧಿವಾಸ ಶ್ರೀ ದೇವನಾ ಪ

ಕುಟಿಲ ಶಠಸುರನುಪಟಳ।ಘಟಿಸೆ
ಖಟಿಮ ನವ್ಯಾಟಪ್ತ ಬಾಯೆನೆ ಶರಣಾ।
ಖಟಖಟಾನೆಂದು ವಿಸ್ಫುಟವಾಗಿ।ಸ್ತಂಬ।
ಛಟಛಟಾನೆನೆ ಬ್ರಮ್ಹಾಂಡ ।
ಘಟಪಟುವಂತೆ ಯಾರ್ಭಟದಿಂದಲೊಗೆದನಾ ೧

ಅರಿಯನರದವನ ಕರಳು ಸರಧರಿಸಿ।
ಭರದಿ ಪೊರೆದೆ ಡಂಗುರನಾ ಹರನಾ
ಗುರುಮಹೀಪತಿ ಪ್ರಭು ಚರಣಚರನೆನಿಸಿದ।
ಸ್ಮರಹರ ಅಜಸುರ ಪರರೊಡೆಯನಾ ೨

## ೨೫೯

ನಂಬು ಮನವೆ ರಾಮಚಂದ್ರನಾ ದ ।
ಯಾಂಬು ನಿಧಿ ಸದ್ಗುಣ ಸಾಂದ್ರನಾ॥
ನಂಬಿದ ಭಕ್ತ ಕುಟುಂಬಿಯೆನಿಸುವ।
ಅಂಬುಜನಾಭನ ಹಂಬಲವಿಡಿದು ಪ

ದಶರಥ ಕೌಸಲ್ಯ ಬಸುರಿಲಿ ಬಂದು।
ಋಷಿಮಖ ರಕ್ಷಿಸಿ ಶರದಿ॥

ಅಸುರೆಯ ಭಂಗಿರಿಸಿ ನಡೆಯಲಿ।ಮುನಿ।
ಅಸಿಯಳುದ್ದರಿಸಿ ಉಂಗುಟದಲಿ।
ಅಸಮ ಧನುವೆತ್ತಿ ವಸುಧಿಯ ಮಗಳ ವ
ರಿಸಿಕೊಂಡು ಬಂದನು ಕುಶಲವಿಕ್ರಮನಾ ೧

ಜನಕನ ವಚನಕ ಮನ್ನಿಸಿ।ಸತಿ।
ಅನುಜನೊಡನೆ ವಿಹರಿಸಿ।
ವನಚರ ಭೂಚರ ನೆರಹಿಸಿ।ದಾಟಿ।
ವನಧಿಯೊಳಗ ಗಿರಿಬಂಧಿಸಿ॥
ಮುನಿದು ಮರ್ದಿಸಿ ದಶಾನನ ಮುಖ್ಯ।
ದನುಜರಾ ವನಸಿರಿ ಪದವಿ ವಿಭೀಷಣಗ ನೀಡಿದಾ ೨

ಸುರರಿಗೆ ನೀಡಿದಾನಂದನು।ಸೀತೆ।
ವರಿಸಿ ಅಯೋಧ್ಯಕ ಬಂದನು।
ಧರಿಸಿ ಸಾಮ್ರಾಜ್ಯದಿ ಹೊರೆದನು।ಗುರು।
ವರ ಮಹಿಪತಿ ನಂದನೊಡೆಯನು॥
ಅರಿತು ಸದ್ಭಾವತಿ ಸರಿಸಲಿ ಸದ್ಗತಿ।
ಶೆರೆವಿಡಿದೆಳೆತಹದರಿಯಲೋ ನಾಮಾ ೩

## ೨೬೦

ನಂಬು ಹರಿಯ ಎನ್ನ ಮನವೇ ಪ

ಸುರಪತಿ ಮುಳಿಯಲು ಸಕಲ ಗೋವಳರನು।
ಹೊರೆದನು ಕರದೆತ್ತಿ ಗಿರಿಯಾ ೧

ಭಕುತಿಲಿ ಶರಣು ಬರಲು ಸುದಾಮನು।
ಸಕಲ ಸುಖವನಿತ್ತಾ ದೊರೆಯಾ ೨

ಗುರುಮಹಿಪತಿ ದೀನೋದ್ಧಾರನು।
ಕರುಣಾಸಾಗರ ಮುರ ಅರಿಯಾ ೩

## ೨೬೧

ಪಾದಾನಂಬು ಮನವೇ।ಶ್ರೀರಂಗಯ್ಯನ।
ಪಾದಾನಂಬು ಮನವೇ ವೇದಕಗೋಚರವಾದಾ ಪ

ಹೆಜ್ಜೆಯರಡರೊಳು ಮೂಜಗವಡಗಿಸಿ।
ಸಜ್ಜನರಿಗೊಸುಗ ನಿರ್ಜರ ನದಿಯ ಪಡೆದಾ ೧

ಬಿಸಜಾಸಖಾ–ತನುಜ ಎಸಿಯೇ ವಾಸು ಕೇಶರಾ।
ವಸುಧೆಯನ್ನು ತೆಗ್ಗಿಸಿ ವಾಸವ ಜನ ಕಾಯ್ದಾ ೨

ಪಲವು ಕಾಲದಿ ಮುನಿ ಮುಳಿದ ಕಾರಣದಿಂದ
ನೆಲದೊಳು ಶಿಲೆಯಾದ ಲಲನೆಯ ನುದ್ಧರಿಸಿದ ೩

ಮದವೇರಿ ಕುರುರಾಯ ಮೊದಲೇ ತಾಏಳದಿರೆ।
ಬುಧಜನ ನೋಡಲಾಗ ವದಗ ದುರುಳಿಸಿದಾ ೪

ಇಂದು ಧರಜರಕೈಯ್ಯಾ ಮದನೆಯನು ಕೊಳುವಾ।
ತಂದೆ ಮಹಿಪತಿ ಸ್ವಾಮಿ ನಂದನ ಜೀವನವಾದಾ ೫

## ೨೬೨

ಪಾಲಯಾನಂತ ಶಯನಾ।
ಶ್ರೀ ಲೋಲಂಬುಜ ನಯನಾ ಪ

ಸರಸಿಜಾಸನ ಜನಕಾ
ವರ ಯದುಕುಲ ತಿಲಕಾ।
ಸುರಮುನಿಜನ ಪ್ರೀಯ ಪಾಂಡವ ರಕ್ಷಕ।
ಶರಣಾಗತ ವತ್ಸಲಾ ವಿಶ್ವವ್ಯಾಪಕಾ ೧

ಪರಿಹೃತ ಭವ ಪಾಶಾ।
ಮುರಹರ ಸರ್ವೇಶಾ।
ಕರುಣಾ ಸಾಗರ।
ಮುಕುಂದ ಹೃಷಿಕೇಶಾ।
ಸರಸಿರುಹ ಸಖ।
ಕೋಟಿ ಪ್ರಕಾಶ ೨

ಹರಿ ನವನೀತ ಚೋರಾ।
ಗಿರಿವೈರಿ ಸೋದರಾ।
ದುರಿತ ನಿವಾರಣ।
ಪೀತಾಂಬರ ಧರಾ।
ಗುರುವರ ಮಹಿಪತಿ।
ಸುತ ಮನೋಹರಾ ೩

## ೨೬೩

ಪಾಲಿಸಯ್ಯ ಎನ್ನ ಪಾದಪದ್ಮದೋರಿ ನೀ।
ಬಾಲಲೀಲೆ ದೋರ್ವ ಗೋಪಾಲ ಬಾಲರನ್ನನೇ ಪ

ನಂದ ನಂದ ನಂದು ಓಡಿ ನಂದನೆಯಾ ಭಾವಕಾಗಿ।
ಬಂದ ಬಂದು ದುರಿತವನು ಬಂದು ಬಂದು ಹರಿಸಿ।
ಛಂದ ಛಂದದಿಂದ ಭಕ್ತರೈವರನು ಕಾಯ್ವೆ ಮು
ಕುಂದ ಕುಂದರದನ ದಯಸಿಂಧು ಸಿಂಧು ವಾಸನೆ ೧

ನಾಗನಾಗ ಶಯನ ಯನ್ನ ರಕ್ಷಿಸೆಂದು ಕರೆಯ ಕೇಳಿ।
ನಾಗ ನಾಗದವನ ಬಿಟ್ಟು ಓರ್ವನೇ ಮಾರುತಿಯಾ।
ವೇಗ ವೇಗದಿಂದ ಬಂದು ಪ್ರಾಣನುಳಹಿದೇ ನಿಗ।
ಮಾಗ–ಮಾಗೋಚರ ಭೋಗ ಭೋಗಗನ ವ್ಯಾಪ್ತನೇ ೨

ಸುಂದ್ರ ಇಂದ್ರ ಚಾಪದಂತೆ ಪೊಳೆವ ಭ್ರೂಲತೆಯು॥
ಪೇಂದ್ರ ಚಂದ್ರ ಧರನುತ ಮಂದ್ರಗಿರಿಧರ ಗುಣ।
ಸಾಂದ್ರ ಚಂದ್ರಕುಲ ಸಿರೋಮಣೀ ವಾರಜಾಕ್ಷಯಾದ।
ವೇಂದ್ರ ಇಂದ್ರನುತ ಮಹಿಪತಿ ನಂದ ನೋಡೆಯನೇ ೩

## ೨೬೪

ಪಾಲಿಸೆನ್ನಾ ದೀನ ದಯಾಳಾ ಪ

ಪಾಲಿಸೆನ್ನ ಸಂವಿಶಾಲ ನಯನಾ।
ಶ್ರೀಲತಾಂಗಿಯ ಲೋಲ ಮುಕುಂದಾ ೧

ಅಂಬುರುಹ ಪಾಣ್ಯಾಂಬುಜ ಭವನುತ।
ಕುಂಭಿನಿ ಭಯಹರ ಅಂಬುಧಿವಾಸ ೨

ನಂದ ನಂದನಾನಂದ ಸ್ವರೂಪಾ।
ನಂದಿವಾಹನಾ ವಂದ್ಯನೆ ಕೃಷ್ಣಾ ೩

## ೨೬೫

ಪಾಲಿಸೋ ಎನ್ನ ನೀ ಘನಕರುಣದಲಿ ಗೋ।
ಪಾಲ ಭಕ್ತಜನ ಜಾತಕ ಮುದಿರಾ ಪ

ಅಚ್ಯುತಾನಂತ ಮಹಿಮ ಸರ್ವಾಧಾರಾ।
ಇಚ್ಛಾಪೂರಿತ ಮಾಡುವೆ ಸುರಜನರಾ।
ನಿಚ್ಚಟ ಹೃತಯರಿಗೊಲಿವೆ ಸತ್ವರಾ।
ಸಚ್ಚಿದಾನಂದನೆ ಮಾ ಮನೋಹರಾ ೧

ಸುರನದಿ ಪಿತ ವಸುದೇವ ಕುಮಾರಾ।
ಸರಸಿಜ ಪಾಣಿ ಗೋವರ್ಧನೋದ್ಧಾರಾ।
ಉರಗಾಂತಕಾರೂಢ ದುರಿತ ನಿವಾರಾ।
ವರ ಚತುರ್ಭುಜ ನರಕಾಸುರ ಹರಾ ೨

ವಿಷ್ಣು ನಾರಾಯಣಾಂಬುಜ ನಯನಾ।
ವಾರ್ಷ್ಣೇಯಾ ಪರಮಪಾವನ ಮೂರ್ತಿದೇವಾ।
ಜಿಷ್ಣುನಾತನು ಸಂಭವನ ರಥಬೋವಾ।
ಕೃಷ್ಣ ಗುರು ಮಹಿಪತಿ ನಂದನ ಜೀವನಾ ೩

## ೨೬೬

ಪಾಲಿಸೋ ರಘುರಾಯಾ ಪ

ಜಾನಕಿ ಮನೋಹರಾ।
ಇನಕುಲ ಶೇಖರಾ ೧

ಭರತಾಗ್ರಜವರ।
ಸುರಸಂಕಟ ಹರ ೨

ದಶರಥ ನಂದನ।
ಋಷಿಮುಖ ಪಾಲನಾ ೩

ಪ್ರಮಥಾಧೀಪ ಧ್ಯೇಯ।
ವಿಮಲ ಗುಣಾಲಯಾ ೪

ತಂದೆ ಮಹಿಪತಿ।
ನಂದನ ಸಾರಥಿ ೫

## ೨೬೭

ಪೂಜೆಯ ನಾನೇನ ಮಾಡುವೆ।ಮಹಾ
ರಾಜರಾಜ ಕರುಣಾನಂದ ಮೂರುತಿ ಹರಿಯೇ ಪ

ಧ್ಯಾನಧಾರಣ ಮಂಗಳ ಮೂರ್ತಿಯ ಮಾಡುವೆನೆಂದರೆ।
ನಿನ್ನ ಸುಖದ ನೆಲೆಯ ಇಂದಿರಾ ದೇವಿಯರಿಯಳು ಹರಿಯೇ ೧

ಶಂಖೋದಕದಿ ಅಭಿಷೇಕ ಮಾಡುವನೆಂದರೆ।ನಿನ್ನಪದ
ಪಂಕಜದಲಿ ಭಾಗಿರಥಿ ಬಂದಳೂ ಹರಿಯೇ ೨

ವಸ್ತ್ರವನುಡಿಸುವೆನೆಂದರೆ ದ್ರೌಪದಿಯವಸರದಿ।ನಿನ್ನಯ
ವಸ್ತ್ರದಿಂಡಿನ ಎಣಿಕೆಯ ದೋರದೆನಗೆ ಹರಿಯೇ ೩

ಗಂಧಪುಷ್ಪವನೀವೆನೆಂದರೆ ನಿನ್ನ ಚರಣಾಬ್ಜದಾ।ಮಕ
ರಂದಕೆ ಭ್ರಮರ ಅಜಭವರಾದರು ಹರಿಯೇ ೪

ಆರೋಗಣೆಯ ಮಾಡಿಸುವೆನೆಂದರೆ ನಿನ್ನಕೈಯದಿ।ಸುರರು
ಆರೋಗಣೆಯ ಮಾಡಿ ಅಮರರಾದರು ಹರಿಯೇ ೫

ನೀರಾಂಜನ ಮಾಡುವನೆಂದರೆ ಕೋಟಿ ಸೂರ್ಯಪ್ರಭೆಯತೇಜ।
ಮೀರಿತು ಸ್ತುತಿಗಿನ್ನು ಶ್ರುತಿಗಳು ನಿಂತವು ಹರಿಯೇ ೬

ಗುರುವರ ಮಹೀಪತಿನಂದನ ಸಾರಥಿ।ನಿನ್ನ
ಸ್ಮರಣೆಯ ಕೊಟ್ಟನುದಿನದಿ ರಕ್ಷಿಸುಹರಿಯೇ ೭

## ೨೬೮

ಫಲಹಾರವ ಮಾಡೋ ಪದುಮಲೋಚನನೆ।
ಒಲಿದು ಶ್ರೀ ಭೂದೇವಿ ಅರಸಿಯರೊಡನೆ ಪ

ಕದಳೀ ಕಪಿತ್ಥಶರ್ಕರ ಮೋದದಿಂದಲೀ।
ಒದಗಿ ಬೆಂಡುಖರ್ಜೂರಿ ಘೃತಮೋಪ್ತದಿಂದಲಿ ೧

ಕಳೆದ ಸಿಗುರಿಯಾ ಕಬ್ಬಿನ ಪೇರು ಬದರಿಯಾ।
ಬಲಿದ ಪರಿಮಳ ರುಚಿಗಳ ಒಪ್ಪನಿಂದಾ ೨

ವಸುಧೆಯೊಳುಳ್ಳ ಸಕಲ ಫಲಸಾರವಾ।
ಬಿಸಿಯಾದ ಪಲ್ಗನೆಯ ಮಧುಸಹಿತಾ ೩

ಗುರುಮಹೀಪತಿಸ್ವಾಮಿ ಶರಣ ರಕ್ಷಕನೇಮಿ।
ಸುರರಿಗಮೃತವೆರೆದಾನಂದ ಕರದಲಿ ೪

## ೨೬೯

ಬರದು ಬಂದು ದೂರಬ್ಯಾಡರೇ ನೀವೆಲ್ಲಾ
ಧರಿಯೊಳಾಡುವ ನುಡಿಗಳೊಪ್ಪುವದಿಲ್ಲಾ
ಹರಿಯಾ ನೆಲೆ ತಿಳಿಯಲು ಅಳವಲ್ಲಾ
ದುರಳತನ ನಡಿಗೆಂದು ಇವಸಲ್ಲಾ ೧

ಮುನಿನೆಂದು ಗುರುತ ವಿಡ ಬ್ಯಾಡಿರಮ್ಮಾ
ಮನುಜರಂತೆ ಲೀಲೆ ದೋರುವ ರೀಗಮ್ಮಾ
ಮುನಿಮನೋಹರ ದಾಯಕ ಪರಬೊಮ್ಮ
ಘನ ಪುಣ್ಯದಿಂದ ಶಿಶು ವಾದನಮ್ಮ ೨

ಹುಟ್ಟುತಲಿ ಸ್ವಹಿತದ ನುಡಿಯಾಡಿ
ನೆಟ್ಟ ನೆವೆಯ ಮುನಿಗೆ ಹಾದಿಬೇಡಿ
ಮುಟ್ಟಿ ಗೋಕುಲಕ ಬಂದದಯ ಮಾಡಿ
ಇಷ್ಟರೊಳು ತಿಳಿಯ ಬಾರದಿನ್ನು ನೋಡಿ ೩

ಚಿಕ್ಕತನದಲಿ ಮೊಲೆಗುಡ ಬಂದಾ
ರಕ್ಕಸಿಯ ಅಸು ಹೀರಿದಾವ ಕೊಂಡಾ
ಕಕ್ಕಸದ ಕಾಳಿಂಗ ನೆಳೆದು ತಂದಾ
ಮಕ್ಕೊಳಾಟಿಕೆ ಇದೇನು ನೋಡಿಭಂದಾ ೪

ನಿರುತ ತಮ್ಮಾ ತಮ್ಮ ಮನಿಯೊಳಿಹನೆಂದು
ಹರಿಯಗುಣ ಹೇಳುವಿರಿ ಎಲ್ಲ ಬಂದು
ಅರಿತು ನೋಡಲು ಒಬ್ಬ ಬಹುರೂಪ ವಿಡಿದು
ಚರಿಪಗುರು ಮಹಿಪತಿಸ್ವಾಮಿಯಿಂದ ೫

## ೨೭೦

ಬರಹೇಳಮ್ಮಾ ಭಾವೇ ಮನೆಗೆ ಬಿರದಂಕ ಹರಿಯಾ।
ಚರಣವನ್ನು ಗಾಣದೆನ್ನ ಚಿತ್ರನೆಲೆ ಗೊಳ್ಳದಮ್ಮಾ ಪ

ಬಾಲಕೇಳೆ ಕುಂತಳೆ ಬೇಸರ ವಿದೇನೇ।
ಪಾಲಗಡಲ ಮನೆಯಾ ಬಿಟ್ಟು ಪವನಾಹಾರನ ಪರ್ಯಂಕವನು।
ಜಾಳಿಸಿ ತಾನ್ಯಾಕ ಪೋದನೇ ಜಲರುಹ ನಾಭ।
ಕಾಲಿಲಲ್ಲದವನಾಗಿ ಕೊಂದು ತಮನನೀಗಿ।
ಮ್ಯಾಲಗಿರಿಯ ಪೊತ್ತ ಮರರಿಗ ಮೃತವಿತ್ತಾ।
ಭೂಲಲನೆ ಬಡಿಸಿ ಭೂವರಾಹೆನಿಸಿ।
ಬಾಲಕರಿಯಲು ರೂಪ ಬೆಡಗಾ ವಿಡಿಸು ೧

ಉಡುರಾಜದವನೆ ಕೆಳದೀ ಉನ್ನತಿಯ ನೋಡೇ।
ಷಡ್ಗುಣೈಶ್ವರ್ಯವುಳ್ಳಾ ಸುರಮುನಿಸೇವಿತ ಪಾದಾ।

ಬೇಡಿ ಭಾಗ್ಯವ ನೀಡುವ ಬಲುದೊರೆ ತಾನಾಗಿ।
ಬಡಹಾರುವನಂತೆ ಭೂಮಿ ಬೇಡಿದನಂತೆ।
ಕೊಡಲಿಪಿಡಿದರೆ ಸಕುಲ ಮಾಡಿದ ನಾಶಾ
ವಡನೆ ವಾನರ ಸಂಗ ವಿರಹರಿಸಿ ಸುರತುಂಗಾ।
ತುಡುಗತನದಿ ಬೆಣ್ಣೆತಿನ್ನುವರೆ ರನ್ನೆ ೨

ಕರಿರಾಜ ಗಾಮಿನೀ ಕಿರೀಟ ಕುಂಡಲದಾ ಶಿವತ್ವಕುಂಡಲದಿಂದಾ।
ಪರಮಪುರಷದೇವನು ಪೀತಾಂಬರಧಾರೀ।
ಬರಿಯ ಬತ್ತಲೆಯಾಡಿ ಬೌದ್ಯರೋಳಗ ಕೂಡೀ।
ತುರಗೀರಿಯ ವನರ ತುಳಿಸುತ ಸುರವರ
ಮೊರೆಗೇಳಿ ಬಂದನು ಮನದೊಳು ನಿಂದನು।
ಗುರು ಮಹಿಪತಿ ಪ್ರೀಯಾ ಗುಣಗಣನಿಲಯಾ ೩

## ೨೭೧

ಬಾರಸ್ನಾತಕ ಯದು ವೀರಾ।ಪದಾಂಬು ಜವದೋರಾ।
ದಯರಸವಾಬೀರಾ।
ಸಾರಿದವರಿಗಿನ್ನುದರಾವಾಗಿರಾ ಧೀರಾ ಪ

ಮಂದ ಮುಗುದೆಯು ನಾನೆಂದು ಅರಿತು ಮೊದಲಿಂದು।
ಕೈಯ್ಯ ಪಿಡಿದು ಬಂದು।
ಕುಂದಾಲಿಸುವ ದಯಸಿಂಧು।ಉಚಿತ ವೇನಿಂದು ೧

ಎನ್ನ ಬಿನ್ನಹ ಹೇಳಲೇ ಜಾಣೇ। ತಾಪಕೌಷಧಕಾಣೆ।
ಕ್ಷಣಯುಗವ ನಿನ್ನಾಣೆ।
ಮನ್ನಿಸಿ ತಂದು ತೋರಿನ್ನೆನೆ ಬಾರೇ ಪ್ರವೀಣೇ ೨

ಶರಣ ಹೊಕ್ಕವರೆಂದು ಮರೆಯಾ।ನೆಂಬ ಮಾತಿದು ಖರೆಯಾ
ಬಂದು ಕೂಡಿದ ತ್ವರಿಯಾ।
ಗುರು ಮಹಿಪತಿ ಸ್ವಾಮಿಚರಿಯಾ ಬೊಮ್ಮತಾನರಿಯಾ ೩

## ೨೭೨

ಬಾಲನೇ ಗೋಪಿ ಬಾಲನೇ ಪ

ಮುದ್ದು ಕುಂಡಲಧರ ಮಿದ್ದು ಚಪ್ಪಿರವನು ೧

ಎತ್ತಿಕೊಳಲು ಉಗುರೊತ್ತುವ ನೆದಿಯಲಿ ೨

ಗುರುಮಹಿಪತಿ ಪ್ರಭು ಚರಿತವ ತಿಳಿಯದು ೩

## ೨೭೩

ಬಾರೆನ್ನ ಸಖಿಯೇ ಕರೆದು ತೋರಿಸೇ ಪ

ಕರೆದು ತೋರಿಸೇ ಕಂಜನಯ್ಯಾನಾ।
ಕರಿವರ ದಾಯಕ ಕರುಣಾ ಸಾಗರನಾ ೧

ಸರಸಿಜ ಲೋಚನ ಮುಕುಟ ಕುಂಡಲನಾ।
ಸಿರಿವತ್ಸ ಕೌಸ್ತುಭ ಕೇಯೂರ ಧರನಾ ೨

ಮದನ ಶರಕ ಗುರು ಮಾಡುವರೇನೇ।
ಮಧುಹರ ಮುನಿವದು ಉಚಿತ ವೇನೇ ೩

ಒಂದರಗಳಿಗೆಯ ಮರೆದಿರ ಲಾರೆ।
ಇಂದು ನೀ ಧನ್ಯಳ ಮಾಡಲೆ ನೀರೆ ೪

ಬೆರೆದು ಬಿಡುವನಲ್ಲಾ ಸಕಲಂತರ್ಯಾಮಿ।
ನೆರೆದನು ಗುರು ಮಹಿಪತಿ ಸುತಸ್ವಾಮಿ ೫

## ೨೭೪

ಬಾರೋ ಬಾರೋ ಕೋಪವಿನ್ಯಾತಕೆನ್ನ ಕೂಡಾ ರಂಗರಾಯಾ।
ಸಾರಿದ ನಿನ್ನರಸಿಯ ತಪ್ಪನೊಳ್ಪರೇ ರಂಗರಾಯಾ ಪ

ಚಲ್ವ ಕಣ್ದೆರೆವುತ ಮೊಗವತಿರಹುವರೇ ರಂಗರಾಯಾ।
ಹಲ್ಲವ ಮಸೆಯುತ ಘುಡುಘುಡಿಸುವರೇ ರಂಗರಾಯಾ ೧

ಭೀಕರಾಕೃತಿಯಾಗಿ ಕೊಡಲಿಯ ಪಿಡವರೇ ರಂಗರಾಯಾ।
ಏಕಾಂಕಿಯಾಗಿ ಕದ್ದು ತಿರುಗುವರೇ ರಂಗರಾಯಾ ೨

ಆಗೋಚರವಾಗದೇ ತುರಗೇರಿ ತ್ವರಿತದಿ ರಂಗರಾಯಾ।
ಸುಮದಿ ಬಾ ಮಹಿಪತಿ ಸುತ ಜೀವನ ರಂಗರಾಯಾ ೩

## ೨೭೫

ಬಾಲಲೀಲ ಲೋಲ ಕೃಷ್ಣನನೆನೆವೆನಾ।
ಬಾಲಲೀಲ ಲೋಲ ಕೃಷ್ಣ ಈ ಲೋಕಾಳಿ ಪಾಲಿಪಾ।ವಿ-
ಶಾಲ ಬಾಲ ನೀಲಗಾತ್ರನಾ।ನೆನೆವೆನಾ ಪ

ಪಡುಲ ಕರಿಯಕಣ್ಣಲಿಟ್ಟರು।ಒಡನೆ ಕೇಳಿ ಕರ್ತನೃಪನ।
ಮಡದಿ ಜನಕನಹಿತ ಸರಿಕನಾ।ವೈರಿಯ
ಒಡಲಲುದಿಸಿದಾತ್ಮಭವನ।ಸಡಗರದಿ ಕಿರಿಯ ತಮ್ಮನ
ಪಡೆದ ಜನನಿಯಣ್ಣ ಕಂದನಾ।।ನೆನೆವನಾ ೧

ಮುದದಲಿಂದ ಮಸುಧೆಯನ್ನು।ಎದೆಯಲೊತ್ತಿ ನಡೆವನಿಂದ।
ಒದಗಿ ತನ್ನ ಶರೀರ ತೊರೆದನಾ।ತಂದೆಯಾ

ವಿದಿತ ಮುತ್ತೈಯ್ಯನ ಮಗನ।ಚದುರತಮ್ಮನರಸಿ ಪಡೆದ
ಉರದಿ ಮಗಳ ಪ್ರಾಣದರಸನಾ॥ನೆನೆವೆನಾ ೨

ನೃಪನಬಿಂಕ ಶಿಷ್ಯರಿಂದ।ಅಪಹರಿಸಿದವನ ಮಗನ।
ಚಪಲ ಬಾಣ ಬರಲು ಸ್ಥಳವನು।ತಪ್ಪಿಸಿ
ವಿಷದ ಹರಿಸಿ ಕಾಯ್ದೆನೈವರ।ನಿಪುಣ ಮಹೀಪತಿನಂದನ।
ಕೃಪೆಲಿ ಪೊರೆವ ಉತ್ತುಮೊತ್ತಮನಾ॥ನೆನೆವೆನಾ ೩

## ೨೭೬

ಬಿಡೆ ಬಿಡೆನೋ ನಿನ್ನಾ।ಅಡಿಗಳ ಯುಗಳನ್ನಾ ಪ

ಬಿಡೆ ಬಿಡೆನೋ ನಿನ್ನಾ।ಅಡಿಗಳ ಯುಗಳನ್ನಾ
ಬಿಡದಿಹ ಪಾವನ್ನಾ।
ಪೊಡವಿಯೊಳಗೆ।ಮೃಡ ಅಜರಿಗೆ ವಡಿಯ ನೀನೀಗ।
ಒಡಲ ಹೊಕ್ಕೆನು ಕರುಣಾ ನಿನಗ ೧

ಹಲವು ಜನ್ಮಂಗಳನು।ಬಲುತೆರ ಸೂಸಿದೆನು।
ನೆಲೆಗಾಆಣದೆ ನಾನು॥
ಕೆಲವು ಮಾಡಿದಾ ಸಲೆ ಸುಕೃತವಾ।ಫಳದಿ ಶ್ರೀಪಾದಾ
ಸುಲಭದಿ ದೊರೆಕಿತು ದೀನೊದ್ಧರನೆ ೨

ಮುನ್ನ ಮಾಡಿದ ಪರಿ।ಬನ್ನ ಬಡಿಸದೆ ಸಾರಿ।
ಚನ್ನಾಗೊಲಿಹರಿ।
ಯನ್ನ ಹೃದಯದಲಿ ಇನ್ನು ನಿಶಿದಿನಲಿ।ನೆನೆವ ಭಕುತಿಲಿ।
ಸನ್ನುತ ಮಹಿಪತಿ ನಂದನ ಪ್ರಭುವೇ ೩

## ೨೭೭

ಬೆಳಗುವಾರತಿ ಬನ್ನಿ ಲಲನೆಯರೆಲ್ಲರು।
ಸುಲಭಾ ಭಕ್ತರಿಗಾದಾ ಚೆಲುವ ಶ್ರೀಕೃಷ್ಣಗ ಪ

ಮಲ್ಲಯುದ್ಧವನೆ ಮಾಡಿ ಮಾವ ಕಂಸನ ಕೊಂದು
ಇಳೆಯೊಳು ಜಯವರಿಸಲು ನಡೆತಂಡನು ೧

ದುಷ್ಟಬುದ್ಧಿಯನ್ನುಳ್ಳ ಜಟ್ಟೇರ ಮಡಹಿಸಿ।
ಸೃಷ್ಟಿಯ ಭಾರನಿಳಹಿಸಿ ಶಿಷ್ಟರ ಕಾಯ್ದನು ೨

ಗಂಡರ ಗಂಡ ಪ್ರಚಂಡನಾಗಿ ಮೆರೆದನು।
ಕುಂಡಲ ಭೂಷಿತ ಗಂಡ ಕಪೋಲಾ ೩

ವರ ಉಗ್ರಸೇನಗ ಅರಸುತನವನಿತ್ತಾ।
ಗುರು ಮಹಿಪತಿ ಸುತ ಪೊರೆವ ಶ್ರೀ ಅರಸಗೆ ೪

## ೨೭೮

ಬಂದ ಜನ್ಮ ಬರಲಂಜಲ್ಯಾತ ಕಗೋ
ವಿಂದ ನಿನ್ನೆಚ್ಚೆರ ವೆನಗಿದ್ದರ ಸಾಕು ಗೋವಿಂದ ಗೋವಿಂದ ಪ

ಒಂದೆರಡಲ್ಲಾ ಶತ ಸಹಸ್ರವಾಗಲಿ
ಛಂದದಿನಿನ್ನ ನಾಮಾ ಜಿಹ್ವೆಯ ಲಿರಲಿ ೧

ಹರಿಪರಂದೈವೆಂದು ಅರುಹಿನಾ ಮನೆಲಿದ್ದು
ಹರಿಯದಿರಲಿ ಮನ ವಿಷಯಕ ಬಿದ್ದು ೨

ಮುಕುತಿಗಿ ಕುತಿಯಂಬಾ ಹಂಗಿನ ನೆಲೆಯಾಕ
ಭಕುತಿ–ಯನಿ ಪನಿಜ ಸುಖವಿರಲಿಕ್ಕೆ ೩

ಗುರುಮಹಿಪತಿ ಸ್ವಾಮಿ ನಿನ್ನ ಶರಣರಾ
ಕರದೊಳಾಡುವ ಬಗೆ ಮೃಗ ಪಶುವಾ ೪

## ೨೭೯

ಬಂದನಮ್ಮಾ ಬಂದನಮ್ಮಾ ನಮ್ಮ ರಂಗನು।
ಇಂದು ನಮ್ಮ ಪೂರ್ವಾರ್ಜಿತಫಲ ವದಗಿ ಬಂದಿತೆಂದು ಪ

ಬಿಸಜಾಸಖ ಶತಕೋಟಕಿ ಸಮತೇಜ ದೊಪ್ಪತಿಹನಖವು।
ಯೆಶೆವ ಅಂದುಗೆ ಗೆಜ್ಜೆಯಿಂದ ಘಲುಘಲುಕೆನುತಾ ೧

ಉಟ್ಟ ಪೀತಾಂಬರದ ಮ್ಯಾಲ ವಡ್ಯಾಣವನಿಟ್ಟುಕೊಂಡು।
ಕಟ್ಟಿದ ಸು ಕಿಂಕಿಣಿಗಳಿಂದ ಝುಣ ಝುಣ ಕೆನುತಾ ೨

ಕರ ಕಡಿಗ ವಂಕಿ ತೋಳ ತಾಯಿತ ಕೇಯೂರವನು।
ಕೊರಳ ಕೌಸ್ತುಭ ವನಮಾಲೆಯಿಂದ ಪೊಳವುತಾ ೩

ಥಳ ಥಳ ಹೊಳೆವಾ ಕುಂಡಲ ಕದಪು ಚಲ್ವಿನಿಂದಾ।
ದಾಳಿಂಬ ದಶನಾ ಸುನಶಿಕದೆಸಳು ಕಣ್ಣಿಂದಾ ೪

ಸ್ಮರನಾಥನು ಸೋಲಿಪ ಭ್ರೂಲತೆಯು ಫಣೆಯಲ್ಲಿಕ।
ಸ್ತೂರಿಯನಿಟ್ಟು ಹರಿಮಯ ಕಿರೀಟಕಾವಳಿಮ್ಯಾಲಿರಿಸಿಕೊಂಡು ೫

ಬೆರಳುಂಗುರ ಕೈಯಿಂದಾ ಕೊಳಲ
ಪಿಡಿದು ಬಿಂಬಾಧರಕತಂದು।
ಪರಿ ಪರಿಯಲೂದುತಾ ಮಹಿಪತಿ ನಂದನ್ನ ಪ್ರೀಯನಾ ೬

## ೨೮೦

ಬಂದಾನಲ್ಲೆವೆ ಮನೆಗಿಂದು ಕೇಳವ್ವಾ ರಂಗ ಪ

ಬಂದಾ ಮನೆಗಿಂದು।ಮುಕುಂದ ದಯಾಸಿಂಧು।ಆ
ನಂದವನೆ ತಂದು।ಸಂಧಿಸಿಕೊಟ್ಟಾ ದೀನಬಂಧು ೧

ನಂಬಿದವರ ಕಾವಾ।ಅಂಬುಜಾಕ್ಷದೇವಾ।
ನೆಂಬ ಬಿರದವಾ।ರಂಬಿ ತೋರಿದಾ ಜೀವರಜೀವಾ ೨

ತಂದೆ ಮಹಿಪತಿ।ನಂದನ ಸಾರಥಿ।
ಬಂದು ನೆರದಾರಥಿ।ಛಂದವಾಯಿತು ಜನ್ಮಕಥೆ ೩

## ೨೮೧

ಬಂದನೇಳೆ ದೇವಿ ರಂಗ ಮನೆಗೇ।
ಇಂದು ಮುಖಿ ನಿನ್ನ ಮನದಾ ನಂದ ಕೊಡಲು ಪ

ಮುಕ್ತಿ ಮಂಟಪದಲ್ಲಿ ಭಾಗವತ ರೊಡಗೂಡಿ।
ಭಕ್ತಿರಂಗದೊಳಾಡಿ ಸುಖವ ಸೂರ್‍ಯಾಡಿ ೧

ಗರುಡವಾಹನ ಪರಾಕೆಂಬ ಶ್ರುತಿ ಭಟರು।
ಮೂರಾರು ಸಾಲ ಪಂಜಿನ ಬೆಳಗಿನಿಂದ ೨

ಸಕಲ ಸುಂದರ ರಾಶಿಯೆ ಎನಿಪ ಮೋಹನರೂಪ।
ಅಕಳಂತಕ ಬ್ರಹ್ಮಾದಿ ಸುರರೊಡೆಯಾ ೩

ಶರಣ ವತ್ಸಲ ದಯಾನಿಧಿ ದುರಿತ ಹರನೆಂಬ।
ಬಿರದ ಜಾಂಗಟೆ ಶಂಖ ಕೌಸಾಳರವದಿ ೪

ತನ್ನ ಭೃತ್ಯರ, ಭೃತ ಭೃತ್ಯನ ಕರೆದು।
ಮನ್ನಿಸುವ ಮಹಿಪತಿ ಸುತಪ್ರಾಣ ಪದಕಾ ೫

## ೨೮೨

ಬಂದವನಾರಯ್ಯ ನೀನು

ಒಂದಿನ ರಾತ್ರಿಲಿ ನಂದನಂದನು।
ಹೊರಗಿಂದಲಿ ಬರಲು।
ಚೆಂದದಿ ರುಕ್ಷಿಣಿ ಮನದೊಳರಿತು ನುಡಿ।
ಎಂದಳು ಸರಸದಲಿ ಈಗ।ನೀನು– ಪ

ಇರುಳುಮಧ್ಯದಲಿ ಧೀರತನದಲಿ।
ಸಾರಿಸಾರಿಕದನೋತ್ತುತಲಿ।
ಧ್ವನಿಯ ದೋರದೆ ಗುರುತವ ಮರೆಯಿಸಿ।
ದ್ವಾರದಿಸುಳಿವವನು।ನೀನು ೧

ಅಡಿಯಿಡದೆವೆ ಮೈ ಅಡಗಿಸಿಕೊಂಡು।
ದೃಢದಲಿ ಅಬಲೆಯಕಂಡು।
ಎಡಬಲನೊಡದೆ ಬಾಯ್ದೆರೆದು ಬೇಡುವ।
ಪೊಡವಿಹಾರುವನೇನೋ।ನೀನು..... ೨

ಕೊರಳಗೊಯ್ಕನೋ ವನಚಾರಕನೋ।
ತುರುಗಳ ಕಾಯ್ವವನೋ।
ಮರುಳು ಮಾಡಿ ನಾರಿಯರ ಠಕ್ಕಿಸಿ।
ದುರುಳವಾಜಿಯನೇರಿಪನೋ।ನೀನು.... ೩

ಎಂದಮಾನಿನಿ ನುಡಿ ಬೆಡುಗವ ಕೇಳಿ।
ನಿಂದಹರುಷ ತಾಳಿ।
ಬಂದೆನಾ ಗುರುಮಹಿಪತಿ ಪ್ರಭು ಎನಲೋಡಿ।
ಬಂದೆರಗಿದಳೀಗ।ನೀನು...... ೪

## ೨೮೩

ಭಕುತಿಯಲಿ ಭಜಿಸಿ ಹರಿಯ ಸುಖಿಸಬಾರದೇ ಪ

ಪ್ರಕಟದಿ ಸಜ್ಜನ ನಿಕಟದಿ ತಾಮಸ।
ಶಕಟ ಮುರಿದ ಸುರ ಮುಕುಟ ಮಣಿಯಾ ಅ.ಪ

ತರಣೀಯಾ ಕೋಟಿ ಪ್ರಕಾಶದಿ ಧರಣಿಯಾ ರಮಣನ ನಾಮ।
ಸ್ಮರಣೀಯಾ ಮಾಡಲು ಕರುಣೀಯಾ ಕರಿ ಕಿರಿಯನೆ ಶಿರಿ।
ಗರುಡಗರಿಯದೇ ಭರದಿ ತಾ ಬರುತದೆ ಶರಣರಾ ಹೊರೆದ ೧

ಮರುವಿನ ಕತ್ತಲೆ ನೂಕುವ ಚರಣವ ಅರವಿನ ದೀಪವ ಹಚ್ಚಿ।
ಕುರುವಿನಾ ಚಿನ್ಮಯ ನೋಡಲು ಗುರುವಿನಾ।
ಚರಣವ ಪೂಜಿಸಿ ಕರುಣವ ಸಾಧಿಸಿ
ತರುಣೋಪಾಯದ ಚರಣವ ಬಲಿಯೋ ೨

ಮನವಧಾನದಿ ನಿಲಿಸಿ ತನುವನಾ ಸೇವೆಗರ್ಪಿಸಿ।
ಘನವನು ಮಾಡುತಾ ಸುಜನರಾ ಅನುವನು ಕನಸಿಲೇ।
ಘನ ಗುರು ಮಹಿಪತಿ–ಜನ ಪ್ರಭುವಿನ ಅನುದಿನದಲಿ ಪಾಡಿ ೩

## ೨೮೪

ಭಜಿಸು ಮನವೆ ಶ್ರೀ ರಂಗಯ್ಯನಾ ಪ

ಇಂದಿರಾ ನನರವಿಂದ ಭ್ರಮರನಾ।
ಮಂದರ ನಗಧರ ನಂದ ನಂದನನಾ ೧

ಫುಲ್ಲನಯನ ಸಿರಿವಲ್ಲಭ ದೇವನಾ।
ಮಲ್ಲ ಚಾಣೂರರಿಪು ಸಲ್ಲಲಿತಾಂಗನಾ ೨

ರನ್ನ ಕೇಯೂರಧರ ಪನ್ನಗ ಶಯನಾ।
ಸನ್ನುತ ಮಹಿಪತಿ ಚಿನ್ನನೊಡೆಯನಾ ೩

## ೨೮೫

ಭಾವ ಭಕುತಿಗೆ ವಲಿವ ನೋಡಿರೋ।
ದೇವ ದೇವ ಮುಕುಂದನು।
ಆವನಾಗಲಿ ತನ್ನ ನಂಬಿದ।
ಸೇವಕರನು ಧ್ವರಿಸಿ ಪೊರೆವನು ಪ

ಆಚರಣೆ ನೋಡಿದನೆ ವ್ಯಾಧನ।
ನೀಚನೆಂದನೆ ವಿದುರನ।
ಯೋಚಿಸಿದನೇ ಧ್ರುವನ ವಯಸನು।
ನಾಚಿದನೇ ಕುಬ್ಜೆಯನು ಕೂಡಲು ೧

ಏನು ವಿದ್ಯೆ ಗಜೇಂದ್ರದೋರಿದ।
ಏನು ಕೊಟ್ಟ ಸುಧಾಮನು।
ಏನು ಪೌರುಷ ಉಗ್ರಸೇನನ।
ಏನುಣಿಸಿದಳು ಹರಿಗೆ ದ್ರೌಪದಿ ೨

ಆವಶೇವೆಯೋ ನರನ ಬಂಡಿಯ।
ಬೋವತನವನು ಮಾಡಲು।
ಭಾವಿಸಲು ಗುರುಮಹಿಪತಿ ಪ್ರಭು।
ಕಾವಕರುಣಿಯೋ ಮಹಿಮೆ ತಿಳಿಯದು ೩

## ೨೮೬

ಮತ್ತೆ ನಾನೇನೆಂದೆ ಮದನ ಜನಕ ಪುರು।
ಷೋತ್ತಮ ಪರತರ ಶೇಷಗಿರಿವಾಸಾ। ಪ

ಕರುಣ ನೋಟದಿ ಸರ್ವಜೀವನುಳಹಿ ಕೊಂಡು।
ಸುರರಿಗೆ ಅಮೃತ ನುಣಿಸಿದನು।
ಧರಣಿಯ ಮೋಹಿಸಿ ಬಿಗಿದಪ್ಪಿ ತರಳನು।
ಹರಣಗಾಯ್ವ ದೇವ ಶರಣೆಂದೆನಲ್ಲದೆ।
ತೆರೆಗಣ್ಣಿನವನೇಂದೆನೇ ಉಬ್ಬಿಗೊಂಡ।
ಬಿರುಸು ಮೈಯ್ಯವನೆಂದನೇ ದಾಡಿಲಿಂದ।
ಸುರಿವ ಜೊಲ್ಲುವನೆಂದನೇ ಬ್ರಹ್ಮಾದಿಗ।
ಳರಸ ಉಗ್ರಾವ ತಾರೀ ಬಾಯೆಂದೆನಲ್ಲದೆ ೧

ಚಿಕ್ಕಮಾಟದಿ ಬಹು ಚಲುವ ಭೂಸುರರುಗೆ
ಪುಕ್ಕಟೆ ಅರಸು ತನವ ಕೊಟ್ಟನು।
ಸಿಕ್ಕಿದ ದೇವರ ಸೆರೆಬಿಡಿಸಿದ ಕುಂತೀ।
ಮಕ್ಕಳ ಸಾರಥಿ ಶರಣೆಂದೆನಲ್ಲದೇ।
ಕಕ್ಕು ಲಾತೆವನೆಂದೆನೇ ಕೊಡಲಿಹೊತ್ತ।
ನಿಕ್ಕರುಣಿಕನೆಂದನೇ ವಾನರ ಕೂಡಾ।
ಹೊಕ್ಕವನನೆಂದೆನೇ ಕೌರವರ।
ಸೊಕ್ಕು ಮುರಿದ ಸ್ವಾಮಿ ಬಾಯೆಂದೆನಲ್ಲದೆ ೨

ನೊಸಲಗಣ್ಣಿನವನ ಸಾಹ್ಯಕ ಶರವಾಗಿ।
ಯಶೆವ ಮುಪ್ಪುರವನು ಧರೆಗಿಳುಹೀ।
ವಸುಧಿಲಿ ಕಲಿಮಲ ಬಿಡಿಸಿ ಸಜ್ಜನರಪಾ।
ಲಿಸಿದ ಮಹಿಪತಿ ಸುತಪ್ರಭು ಎಂದೆನಲ್ಲದೆ
ಹುಸಿನುಡಿಯುವ ನೆಂದನೇ ಯವನರ।
ದೆಸಿಗೆಡಿಸಿದ ನೆಂದನೇ ಆರಿಗೆ ನೆಲೆ।

ತುಸುಗುಡದವ ನೆಂದನೇ ಜಗದೊಳು।
ದಶ ಅವತಾರನೇ ನಮೋ ಎಂದೆ ನಲ್ಲದೆ. ೩

## ೨೮೭

ಮದ್ದಾನೆ ಗತಿ ಸಖಿ ಬಾರಮ್ಮಾ॥
ಮುದ್ದು ಮೊಗದ ರಂಗನ ತಂದು ತೋರಮ್ಮಾ ೧

ಇಂದು ಎನ್ನ ಚಿತ್ತ ಸ್ವಸ್ಥವಾಗದೇ।
ಒಂದುಗಳಿಗಿ ಕ್ರಮಣವಾಗಿ ಹೋಗದೇ ೨

ಬಿಗಿದವೇನೆ ಮಾಯಿ ಫಣಿಗಳು।
ವೇಗದಿಂದ ಬರುತಿದೇ ತಂಗಾಳಿಗಳು ೩

ಮಂದರಧರನು ಯಾಕೆ ಬಾರನೇ।
ಚಂದ್ರ ಕಿರಣ ಝಳಕ ನಿಲ್ಲಲಾರೆನೇ ೪

ಮುನಿದನ್ಯಾತಕ ತಾನು ಹೇಳಮ್ಮಾ
ಮೊದಲೆನ್ನ ಬಿನ್ನಹವ ಹೋಗಿ ನೀನು ಹೇಳಮ್ಮಾ ೫

ಮೊದಲೆನ್ನ ಕೈಯ್ಯಾ ತಾ ಹಿಡುವರೇ।
ತದನಂತರದಿ ತಪ್ಪ ನೋಡುವರೇ ೬

ಆರಿಸಿಬ್ಯಾಡೆಂದು ಹೇಳಿ ಕುಂದೆನ್ನಾ।
ಕರೆತಾರೆ ಮಹಿಪತಿ ಸುತ ಜೀವನಾ ೭

## ೨೮೮

ಮರುಳು ಮಾಡಿದನಲ್ಲೇ ಏಣಾಕ್ಷಿ ಪ

ಘವ ಘವಿಸುವಾಯವಿಯಾ ನೋಟದಿ ನೋಡಿ॥
ಸವಿಸವಿಯಾದಾ ಮಾತನಾಡೀ ೧

ಚಿತ್ತರ ಮಿಸುವಂತೆ ರೂಪವ ದೋರಿ।
ಅತ್ತಿತ್ತಗಲದ್ಹಾಂಗ ನಿಜ ಬೀರಿ ೨

ಗುರುವರ ಮಹಿಪತಿ ನಂದ ನೊಡೆಯನಾ।
ಅರಘಳಿಗಿರಲಾರೆ ಅಗಲಿನಾ ೩

## ೨೮೯

ಮಾಡು ಸಂತರ ಬಳಿಕೀ ಏ ಮಾನವಾ ಪ

ದೊರಕಿಸು ವಿಶ್ರಾಂತಿಯ ಪಡೆವಂತೆ।
ಹರಿನಾಮದ ಘಳಕೀ ೧

ಕೇಳಲು ಸ್ವಾನುಭವದ ನುಡಿಗಳನ್ನು।
ಬೀಳದು ಯಮ ಮಲಕೀ ೨

ತಂದೆ ಮಹಿಪತಿ ಪ್ರಭು ದಯದಿಂದಲಿ।
ಮುಂದ ನೀ ಭವಕಳು ಕೀ ೩

## ೨೯೦

ಮಾಡಲೋ ಹರಿಪಾದ ಭಜನಿ। ಮನವೇ ನೀ।
ಕೂಡಿದ ಪಾತಕ ಓಡಿಸಿ ಕಳೆವದು।
ಕಾಡಿಗೆ ಕೊಂಡಾ ವಾಡಬನಂತೆ ಪ

ಸಿಕ್ಕದು ನರದೇಹಲಿಂದು।ಜನಿಸಿ ಬಂದು।
ಪುಕ್ಕಟೆ ನೀಗುವದು ಕುಂದು।
ಅಕ್ಕರದಲಿ ವಿಷಯಕ್ಕೆಳಿಸುತಾ।ಭವ।
ದಿಕ್ಕಲು ಸಾರುತ ಠಕ್ಕಿಸಿ ಕೊಂಬರೆ ೧

ಸಂತರ ಸಹವಾಸ ಮಾಡೀ।ಕರುಣ ಬೇಡಿ।
ಅಂತರ ಸುಖವನು ಕೂಡಿ।
ತಂತು ವಿಡಿದು ನಿಶ್ಚಿಂತದಿ ಘನಾವಿ।
ಶ್ರಾಂತಿ ಪಡೆದು ಅನಂತನ ಪಾಡುತ ೨

ಭಕುತಿಯ ಸವಿಸಾರವೆಲ್ಲಾ।ಬಲ್ಲವನೇ ಬಲ್ಲಾ।
ಮುಕುತಿಯೊಳಗೆ ಸುಖವಲ್ಲಾ।
ಪ್ರಕಟದಿ ಮಹಿಪತಿ ಮಗುವಿಗೆ ಭೋಧಿಸಿ।
ತಗಬಗಿ ಬಿಡಿಸಿದ ನಗೆ ಮೊಗದಿಂದ ೩

## ೨೯೧

ಮಾತನಾಡಲೆ ಜಾಣೆ ಮೋಹನಿಭಿ ಮದಯಾನೆ।
ರೀತಿ ನಿನಗುಚಿತವೇನೇ।ಯಾತಕಿದು ಮನ ಮುನಿಸು।
ಎನ್ನೊಳು ಸುಖಬೆರೆಸು ಪ್ರೀತಿ ರತಿಸೊಬಗು ದೊರೆನಾರೀ ಪ

ತಿಂಗಳಾನನೆ ನಿನ್ನ ತೋಳಿಂಬವಿಲ್ಲದಿರೆ।
ಕಂಗಳಿವೆ ಗೊಡವಲ್ಲೆ ನಲ್ಲೆ।
ಅಂಗ ದವಯವವು ತಮ್ಮ ಅರ್ಥಿಯನೆ ಜರಿದವಾ।
ಲಿಂಗನವ ಬಯಸಿ ನೋಡೆ ನೀಡೇ ೧

ಮುಂದಕಡಿಯಿಡಲಾರೆ ಮನಸೋತವಗೆ ದಯ।
ದಿಂದಕರ ಪಲ್ಲವಾರೆ ದೋರೆ।
ಬಂದ ನಿನ್ನಯ ವಿರಹ ಬಹಳ ತಾಪಕ ಸರಸಾ।
ನಂದ ಮಳೆಯಗರಿಯೇ ವೆರಿಯೇ ೨

ಏಣಾಕ್ಷಿ ಕೇಳಿನ್ನಯ ದೇವನೀಗ ಯಾಚಕನು।
ತಾನಾಗಿಬಂದೆನಲ್ಲೆ ನಿಲ್ಲೆ।
ತಾ ನೊಲಿದು ಅಧರಾಮೃತ ಫಲವೇ ಸೂರೆಯನು।
ಮೌನದಲಿ ಕೊಡಲಿಬಾರೇ ನೀರೇ ೩

ಕಾಂತೆ ನಿನ್ನ ವಿಯೋಗ ಕೇಳು ಜನವನ ವಾಗೆ।
ಎಂತಶನ ಶುಚಿ ಹೇಳೆ ಕೇಳೆ।
ಕಂತುವಿನ ಶರಗಳರಕಂ ಮಡುವಂ ಪೊಕ್ಕೆಗುಣ।
ವಂತೆ ಫಣೀ ವೇಣಿ ಪಿಡಿಯೇ ಜಡಿಯೆ ೪

ಮಂದಗಮನೆ ಬುದ್ಧಿಮೋಹಿಸುವದೇನು।ನಿಜ।
ಛಂದ ವಾಜಿಯಲಿ ಕೂಡೆ ನೋಡೇ।
ಎಂದ ವಚನನಲಿದು ಎರಗಿ ಗಿರಿ ಮಹಿಪತಿ।
ನಂದ ನೊಡೆಯನ ನೆರದಳೇ ತರಳೇ ೫

## ೨೯೨

ಮಾಧವಾ ನಿಮ್ಮ ನಾಮ ಸಾಲದೇ ಪ

ಪರಗತಿ ಸುಖವನು ಸ್ಮರಿಸಲು ನಿನ್ನನಾ॥
ಪರಿಪರಿ ತಪದಿಂದಾ ಚರಿಸುವ ದ್ಯಾತಕೆ ನಾ ೧

ಕರಿಕಿರಿಯನ್ನಲು ಶರೆಯನು ಬಿಡಿಸಿದ।
ಶರಣ ಪ್ರಹ್ಲಾದನ ದುರಿತದಿ ಕಾಯ್ದ ೨

ದ್ರೌಪದಿ ಸ್ಮರಿಸಲು ಆಪತ್ತ ಹರಿಸಿದ।
ಆ ಪತಿತ–ಜಮಿಳ ಪಾಪದಿ ತರಿಸಿದ ೩

ನೆನೆಯಲು ಪಿಂಗಳಾ ಕ್ಷಣದಿ ಗತಿಯ ಕೊಟ್ಟಾ।
ಬಿನುಗು ಮಂಡೂಕನ ವಿಮಾನದಿ ಮೆರೆಸಿದಾ ೪

ದುರುಳನ ಕೈಯಿಂದ ಹರಣಿಯ ಕಾಯಿದಾ।
ಗುರಿಯಾ ತಪ್ಪಿಸಿ ಸೆರೆ ಹೊರೆದ ಕಪೋತಕ ೫

ಹಲವು ಸಾಧನದಿಂದ ಬಳಲುವ-ದ್ಯಾತಕ।
ತಿಳಿದವ ಬೇಡಿದ ಫಲವನೇ ಕೊಡುತಿಹ ೬

ತಂದೆ ಮಹಿಪತಿ ನಂದನ ಸಾರಥಿ।
ಎಂದೆಂದು ನನಗಿದೆ ಛಂರದಿ ಕುಡು ಕಂಡ್ಯಾ ೭

## ೨೯೩

ಮಾಧವಾ ರಕ್ಷಿಸೆನ್ನಾ ಮೋಹನಾ।ನಿನ್ನಾ।
ಪಾದವೆ ಗತಿಯೆಂದು ಶರಣು ಬಂದೆ ನಾ
ನಂದನಂದನಾ ಪ

ತನ್ನ ತಾನುದ್ಧರಿಸಿ ಕೊಳ್ಳಲರಿಯದೆ । ಸಲೆ ।
ಮುನ್ನಿನಾ ದುರ್ಗುಣವನು ಜರಿಯದೆ ರಂಗಾ ।
ನಿನ್ನ ನಿಜ ಭಕ್ತಿಯೊಳು ಬೆರಿಯದೇ ವ್ಯರ್ಥ ।
ಮಾನ್ನ ನಾದೆನು ನಾಮಾಮೃತವ ಸುರಿಯದೇ ।
ಭವ ತೊರಿಯದೇ ೧

ಮಾಯಾ ಮೋಹ ಪಾಶಕ ಅನುಗೊಡುತಾ । ವಿ ।
ಷಯ ದಾಶೆಗೆ ಬಿದ್ದು ಬಾಯಿ ಬಿಡುತಾ । ಎನ್ನ ।
ಕಾಯದ ಸುಖಸಾಧನ ನೋಡು । ವ್ಯರ್ಥ ।
ಅಯುಷ್ಯ ಕಳೆದೇ ಐವರೊಳಾಡುತಾ ।
ದು:ಖ ಪಡುತಾ ೨

ಸುಖವಾದರೆ ಮನದೊಳುಬ್ಬುಗೊಂಬೆನಾ । ಬಲು ।
ದು:ಖವಾದರೆ ಹರಿ ಮಾಡಿದ ಎಂಬೆನಾ । ನೆರೆ ।
ಲೆಖ್ಖವಿಲ್ಲದ ಲ್ಯಾಡು ಮಾತಿನನ ಡೊಂಬನಾ । ಇಂದು ।
ಘಕ್ಕನೇ ಗುರು ಮಹಿಪತಿ ಪ್ರಭು ನಂಬಿ ನಾ ।
ಬಲಗೊಂಬೆನಾ ೩

## ೨೯೪

ಮಾಮನೋಹರಾ ಮುರಾರಿ ಬಾರೋ ಪ

ಕರಿವರದಾಯಕ ಮರಚಮುಸ್ಥಾಪನ ।
ಶರಣಾಗತ ಸಹಕಾರಿ ಬಾರೋ ।
ಸರಸಿಜಾಸನ ವಂದಿತಾಂಘ್ರಿ । ದುರಿ ।
ತಾಚಲ ವಜ್ರಧಾರಿ ಬಾರೋ ೧

ಮನೋಜನಿತ ಜನಕರವಿಂದ ಲೋಚನ ।
ಮುನಿಜನ ಹೃದಯ ವಿಹಾರಿ ಬಾರೊ।
ಘನಮಹಿಮ ಸುದಾಮ ರಕ್ಷಕಕ ।
ದನುಜಾವಳಿ ಮದಹಾರಿ ಬಾರೋ ೨

ಇಂದು ಕುಲಮಣಿ ಕಾಲ ಪಯೋಧರ ।
ಮಂದರೋದ್ಧಾರಿ ಬಾರೋ ।
ನಂದನಾತ್ಮಜ ದೇವ ಮಹಿಪತಿ ।
ನಂದನ ಪ್ರಭು ಉದಾರಿ ಬಾರೋ ೩

## ೨೯೫

ಮುಕುತಿಗೆ ಹೊಣೆಯಿದಕೋ ಭಕುತಿ ಪ

ಹರಿಭಕುತಿಯ ಗುರು ಮೂರ್ತಿಲಿ ತಂದು ।
ಬೆರೆವದು ತನುಮನವಚನದಲೀ ೧

ಆಚಾರ್ಯಮಾಂವಿಧಿ ಎಂದುದ್ಧವಗೇ ।
ಸೂಚಿಸಿ ಹೇಳಿದ ಯದುವರನೀಗ ೨

ಸರ್ವಂ ವಾಸುದೇವೆನುತಿರಲಿಕ್ಕೆ ।
ಗುರ್ವಿನೊಳಗ ಅನುಮಾನವು ಬೇಕ ೩

ಬಲ್ಲವ ಬಲ್ಲವನೀ ಮಾತಿನ ಖೂನಾ ।
ಎಲ್ಲರಿಗಿದು ಅಗಮ್ಯದ ಸ್ಥಾನಾ ೪

ತಂದೆ ಮಹೀಪತಿ ಪ್ರಭು ದಯದಿಂದಾ ।
ಕಂದಗೆಚ್ಚರಿಸಿದ ಸುಖಸ್ವಾನಂದ ೫

## ೨೯೬

ಮುದ್ದು ತಾರೋ ರಂಗಾ ಮುದ್ದು ತಾರೋ ಕೃಷ್ಣಾ
ಸಿದ್ಧ ವೇದಾ ಗಮಾ ಭೇದ್ಯ ಮೋಹನ್ನಾ ಪ

ಕಾಣಲಿಕ್ಕೆ ಹಸಿವೆ ತೃಷೆಗಳೇ ಮರೆವದು
ಏಣಾಂಕ ಬಿಂಬ ಮೊದಾ ಬಾಯಿಂದಾ ೧

ಕರ್ಪುರವಾ ಕರಡಿಗಿಯಂತೆ ಹೊಳೆವುತಾ
ವಪ್ಪುತಿಹ ಚಲ್ವ ಪುಟ್ಟ ಬಾಯಿಂದಾ ೨

ಅಮ್ಮ ತಾರಮ್ಮ ನಾನುಂಡೆನೆಂದು ಕೈಯ ಬೀಸಿ
ಝುಮ್ಮನೇ ತೊಡಲು ನುಡಿ ಬಾಯಿಂದಾ ೩

ತಪ್ಪ ಹೆಜ್ಜೆಯನಿಟ್ಟು ಘಲಘಲನೆ ನಡೆವುತ
ಧಪ್ಪನೆ ಬೀಳುತ್ತಾ ಬಿರಿವ ಬಾಯಿಂದಾ ೪

ಹಣೆಯ ಅರಳೆಲೆ ಮಾಗಾಯಿಗಳಲ್ಲಾ ಆಡಿಸುತಾ
ಕುಣಿದು ಬೆಣ್ಣೆಯ ಬೇಡುವ ಬಾಯಿಂದಾ ೫

ಕೋರಳಿಗೆ ಅಂಟಹಾಕಿ ಕೈಗಳಿಂದಾ ಬಿಗಿದಪ್ಪಿ
ಗುರು ಮಹಿಪತಿ ನಂದನ ಜೀವನ್ನಾ ೬

## ೨೯೭

ಮುನಿದಳ್ಯಾತಕ ನೀರೇ ಪಾರ್ವತಿ ಮಾಡಸವರತಿ ಪ

ಹಿಡಿಯಲು ವಿಷವನು ಕೊರಳಲಿ । ತಾಪ ಮಿಡಿಯಲಿ
ದೇಹ ಕೆಡುವ ದಿದೆಂದು ।
ಜಡಿಯಲ್ಲಿ ಗಂಗೆಯ ಭರಿಸಿದ । ನಾರು ಧರಿಸಿದ
ಈ ದುಗುಡ ತಪ್ಪೇನಿಂದು ೧

ಇಂದು ವದನೆಯನ್ನಾ ಪದಕನು । ಅದಾಶೇಷನು
ಅವನ ಮುಂದಲೆಯೊಳು ।
ಛಂದ ಮಾಣಿಕ ತಾನು ನೋಡಲಿ । ರೂಹು ಕಾಣಲೀ
ತಾನೊಂದು ಬಗೆದಳು । ೨

ಎನಗೆ ನಿನಗೆ ಎರಡ್ಯಾಕೆಂದು । ಆಲಿಂಗನಲಿಂದು ।
ಅರ್ಧ ತನುವನೆ ನೀಡಿ ।
ಆನಂದವನೆ ಕೊಟ್ಟು ಮಹಿಪತಿ । ಸುತ ಸಾರಥಿ
ಘನ ಕರುಣವ ಮಾಡೀ । ೩

## ೨೯೮

ಮೊರೆಯ ಹೊಕ್ಕೆನು ನಿನ್ನಾ । ಚರಣ ಕಮಲಕ
ಸಿರಿಪತಿ ಭವರೋಗ ವೈದ್ಯ ನೆಂಬದು ಕೇಳಿ ಪ

ಅನ್ಯವಾರ್ತೆಯ ಕೇಳಿ ಕಿವಿಬಧಿರಾಗದೆ
ನಿನ್ನ ಕಥಾಶ್ರವಣದ ರಸದೀ
ಇನ್ನು ಕೇಳುವ ಪರಿಮಾಡೋ ಅವಿದ್ಯದಾ
ಕಣ್ಣಿನ ಪರಿಗೆ ಜ್ಞಾನಾಂಜನವಿಡೋದೇವಾ ೧

ವಿಷಯನಂಜಲಿ ತಾಪವೆಡಗೋಂಡದೇಹಕೆ
ಅಸಮಸತ್ಸಂಗ ಕಷಾಯಕೊಟ್ಟು
ಹುಸಿ ನುಡಿ ಪರನಿಂದೆಯಾಡಿದ ರೋಗದಿ
ಹಸಗೆಟ್ಟ ನಾಲಿಗೆ ನಾಮಾಮೃತವ ನೀಡೋ ೨

ನಾಸಿಕ ಕೊರಡಾಯಿತಿಭೋಗ ದ್ರವ್ಯದಿ
ವಾಸನೆ ಕೊಡು ತುಳಸಿಯಾರ್ಪಿತವಾ
ಧ್ಯಾಸತೈಲದಿ ಮನಸಿನ ಕರ್ಮವಾತವಾ
ದೋಷಬಿಡಿಸಿ ಕಾಯೋ ಗುರು ಮಹಿಪತಿ ಸ್ವಾಮಿ ೩

## ೨೯೯

ಯಾಕೆಲೋ ರಂಗಾ । ನಿನ್ನರಸಿಯೊಳುಮುನಿದಿರುವೆ ।
ಲೋಕವೀರೇಳು ರಕ್ಷಿಪ ಮುದ್ದು ರಂಗಾ ಪ

ನಾಲ್ಕನೆಯ ಅವತಾರದಲಿ ಉಗ್ರವಾಗಿರೆ ।
ಆ ಕಮಲಜ ಮುಖ್ಯ ಬೆದರುತಿರಲು ।
ಲಕುಮಿ ತಾಕಂಡು ತೊಡೆಮೇಲೆ ಕುಳ್ಳಿರಲು ।
ಈ ಲೋಕದೊಳು ಶಾಂತನೆನಿಸಿದಳೊ ನಿನ್ನರಿಸಿ ೧

ಗುಂಜೆಯಮಾಲೆ ಕೊರಳಿಗೆ ಹಾಕಿ ಗೋವಳರ ।
ಎಂಜಲ ತಿನುತ ಗೋಗಳ ಕಾಯುತಿರಲು ।
ಕಂಜನಯನೆಯು ಬಂದು ಸಕಲ ಶಿರಿಯಿಂದಲಿ ।
ರಂಜಿಸಿದಳೊ ಜಗದೊಳಗೆ ನಿನ್ನ ಅರಿಸಿ ೨

ಇಂತರಿದು ನಾನಾಪರಿಯಿಂದ ನಿನ್ನ ಮೇಲೇ ।
ಸಂತತ ಉಪಕಾರ ಮಾಡಿರೆ ನೀನು ।
ಕಂತುಮಾತೆಯ ತಪ್ಪು ನೋಡುವರೇನೋ । ಆ-
ನಂತನೇ ಏಳು ಮಹೀಪತಿನಂದನೊಡೆಯಾ ೩

## ೩೦೦

ಯಾಕೆ ರಂಗ ನಿನಗೆ ಮಾಕಾಂತೆಯೊಳು ಗರ್ವ ।
ಲೋಕದೊಳು ಅಬಲೆಯೇನೋ ಕೇಳಯ್ಯಾ ನೀನು ಪ

ಮೀನಾವತಾರವ ನೀನಂದು ವಿಡಿದರೆ ।
ಮೀನಾಂಬಕಿ ತಾನಾದಳೋ ೧

ಬೆಟ್ಟವ ಬೆನ್ನಿಲಿ ಕಷ್ಟದಿ ನೆಗೆದರೆ ।
ಬಟ್ಟ ಕುಚಗಳ ಹೊತ್ತಳೋ ೨

ಧರೆಯ ಭಾರವ ತಾಳಿದರ ನಿನ್ನಾಭಾರವನು ।
ಧರಿಸಿದಳಂದಗಲದಲೆ ೩

ಸಿಂಹಾನನನಾಗಿ ಮಹಿಮೆ ದೋರಿಸಿದರೆ ।
ಸಿಂಹದಂತೆ ನಡು ನಡುವಾದಳೋ ೪

ಬಲಿ ಬಾಗಿಲಕಾಯಿದರೆ ನೆಲೆಸಿಹಳವಳಲ್ಲಿ ।
ಬಲಿಯಾ ಭಾಗ್ಯ ರೂಪವಾಗಿ ೫

ಸುರರ ಹೊರಿಯಲಿಕ್ಕೆ ಪರಶವ ಪಿಡಿದರೆ ।
ಪರಸಗೈಯ್ಯ ತಾನಾದಳೋ ೬

ಹರನಾ ಚಾಪವನೆಗೆದರೆ ಅದನೆವೆ ಮುನ್ನೆ ।
ಕರೆದಲೆ ತ್ಯಾಡಿದಳೊ ೭

ಸೆರೆಹರಿದು ಸ್ತ್ರೀಯರಾ ತಂದರೆ ನಾರದರಿಂದ ।
ಸೆರೆವಿಡಿಸೆ ಕೊಂಡಳೋ ೮

ಮುಪ್ಪರ ಹೊಕ್ಕರೆ ನೀವಪ್ಪುತಲಿ ಹನಿನ್ನಾ ।
ಮುಪ್ಪುರದಲಿ ಮೆರೆದಳೋ ೯

ತುರುಗವ ಏರಿಕೊಂಡು ತಿರುಗಲು ನಿನ್ನಾಕೂಡ ।
ತುರಗಮನಿ ತಾನಾದಳೋ ೧೦

ಕಡೆಯಕಾಲಕ ನೀರೊಳೊಡಗೂಡಿ ಮಲಗಲು ।
ಒಡನೆ ವಟದೆಲೆ ಯಾದಳೋ ೧೧

ಗುರು ಮಹಿಪತಿ ಪ್ರಭು ಚರಿತೆಯಾ ನಿಮ್ಮೀರ್ವರ ।
ಭರದಿ ಹೇಳಲೆನ್ನಳವೇ ೧೨

## ೩೦೧

ಯಾಕ ವದಗಲೊಲ್ಲೆಯನ್ನಯ ಬಿನ್ನಹಕ
ಲೋಕ ರಕ್ಷಕ ಬಂದು ಯನ್ನ ನುದ್ಧರಿಸಯ್ಯಾ ಪ

ಅರಿಯದ ಶಿಶು ಮಹಾನದಿ ಜಲದೊಳು ಪೋಕ್ಕು
ತರಿಸಲರಿಯದಸು ದೊರೆಯುತಿದೆ
ಇರಲು ತಾರಕದಡಿಯಲಿ ಸುಮ್ಮನೇದಯಾ
ಜರಿದು ನೆಲಿಯಾ ನೋಡುತಹುದೇನಯ್ಯಾ ೧

ಅರಿಗಳು ಪಟಳದಿಂದೋರ್ವ ಮನುಜಾ
ಅರತು ನೃಪರಬೆನ್ನಬೀಳಲು
ಭರದಿಂದಾ ಪಡಿತಂದವರಾಕೈಯ್ಯಲಿಕುಡೆ
ಧರೆಯೊಳುಸಕಲ ಜನರು ಏನೆಂಬು ವರ್‍ಯೈಯ್ಯಾ ೨

ಪತಿತರ ಪಾವನ ಮಾಡುವಾಧೊರಿಯೆಂದು
ಶೃತಿ ನಾಲ್ಕರಲಿ ಕೊಂಡಾಡುತಿರೆ
ಮತಿಹೀನ ನೆಂದು ಕೈಯ್ಯಾ ಬಿಡದಿರೋ ಮಹೀ ।
ಮತಿ ಸುತಪ್ರಭು ಪರಿಚರೆನಿಸುವ ಬಳಿಕಾ ೩

## ೩೦೨

ರಘುನಾಥ ದೀನಾನಾಥ ಸದ್ಗತಿದಾತ ನೋಡಿರ್‍ಯೋ
ಭವ ಭಿತರಾ ಪತಿತರಾ ಪುನಿತ ಮಾಡುವ ನೀತನೇ ಪ

ಹವಣದಿ ತಾನರೆ ಸವಿದ್ಧಣ್ಣುಗಳನು ತವಕದಿ
ಜಾನಕಿ ಧವಗರ್ಪಿತವೆನೆ
ಅವನಿಯೊಳಗೆ ಶಬರಿ ಘವಘವಿಸುತಿಹ
ಅವಿರಳ ಪದದನುಭವ ನೀಡಿದಾ ೧

ದಾವನು ಶೃತಿಗಳು ಭಾವಿಸೆ ನುಡಿಯದು
ದೇವನು ಹಿತಗುಜ ಕೇವಲ ವನಚರ
ಜೀವರೊಳಾಡುತ ಸೇವೆಗೆ ನಲಿಯುತ
ಕೈವಿಡಿ ಬಿತ್ತನು ಕೈವಲ್ಯಾದಾ ೨

ಕುಂದದೆ ಬಾಂಧವ ನಿಂದಿಸಿ ನೂಕಲು
ನೊಂದು ವಿಭೀಷಣ ಬಂದರ ಶರಣವ
ತಂದೆ ಮಹಿಪತಿ ನಂದನ ಪ್ರಭು ಆ
ನಂದದ ಸ್ಥಿರಪದ ಹೊಂದಿಸಿದಾ ೩

## ೩೦೩

ರಘುರಾಯ ಯನ್ನಮನವ ನಿಲಿಸಲಾಗದೇ
ನಿನ್ನ ಚರಣ ಕಮಲಲಿದ್ದು ತನ್ನ ಹರಿ ಬೀಳದಂತೆ ಪ

ಹನುಮನೊಡನೇ ಕಾಂತ ಮಾತ
ಅನುವರದಲಿ ಆಡುತಿರಲು
ವನಧಿ ಘೋಷವನ್ನೆ ಕಂಡು
ವನಜ ಕರವನೆತ್ತಿಕೊಂಡು ನಿಲ್ಲಲು
ಎನಲು ತ್ಯಜಿಸಿ ತನ್ನದರ್ಪನು ಆಸ್ಥಳದಿ

ಧರೆಯದೋರಿ ಸುಮ್ಮನಿಪ್ಪನು
ಆಂದಿಗಿಂದಿಗಿನಿತು ವಾಕ್ಯ ಮೆರೆದಪ್ಪನು ೧

ಶರಧಿ ಮಥನದಲ್ಲಿ ಮುಣುಗು ತಿರಲು ಗಿಲಿಯನೆತ್ತಿ ನಿಳಹಿ ।
ಹೊರೆದೆ ಸುರರ ಬಳಿಕಧರಣಿ ಹಿರಣ್ಯಾಕ್ಷ ವಯ್ಯಲಾಗ
ವರಹರೂಪದಿಂದ ಮೂಡಿದೇ ಈ ಜಗವ
ಕೊರೆದಾಡಿ ಲೆತ್ತಿ ಆಡಿದ ಅಧೃವನ
ತಿರಗದಂತೆ ಅಢಳ ನೀಡಿದೆ ೨

ನಿನ್ನ ಕಥೆಯ ಶ್ರವಣಮಾಡಿ ನಿನ್ನ ನೋಡಿ ಕೂಡಿ ಪಾಡಿ
ನಿನ್ನ ನಿರ್ಮಾಲ್ಯ ಘ್ರಾಣಿಸುತಲಿ ನಿನ್ನದಾಸ ನೆನಿಸಿ
ಧನ್ಯಗತಿಯ ಪಡೆವ ತೆರದಲಿ ನಿಲಿಸಬೇಕು
ಎನ್ನ ಮನವ ಕರುಣದಿಂದಲಿ ಮಹಿಪತಿಸುತನ್ನ
ಸ್ವಾಮಿ ಸಲಹು ಜಗದಲಿ ೩

## ೩೦೪

ರಕ್ಷಿಸೆನ್ನ ನೀ ಲಕ್ಷುಮೀಪತಿ । ಅಕ್ಷಯಾನಂದ
ಅಧೋಕ್ಷಜನೇ । ಸಿರಿ ।
ವಕ್ಷ ಕಮಲದಳಾಕ್ಷ ಕೇಶವ । ಪಕ್ಷಿವರಗಮನಾ
ರಕ್ಷಿಸೋ ಎನ್ನಾ ಪ

ಕಂಗಳೆಂಬಿಂದ್ರಿಯಂಗಳೆನ್ನನು । ಭಂಗ
ಬಿಡಿಸಿದ ವಂಗ ವಿಷಯಕ ।
ರಂಗ ತಿರುವೆಂಗಳೇಶನೆ । ಇಂಗಿತವನರಿದು ।
ಮಂಗಳಾಂಘ್ರಿಯುಗಂಗಳೆನ್ನಂತ । ರಂಗದಲಿ
ದೋರಿ ಭವ ಭಯ ।
ಹಿಂಗಿಸುವ ಸಾಧು ಸಂಗವನುದಿನ ।
ಸಂಗಡಿಸು ಎನ್ನಗೆ ೧

ಜ್ಞಾನ ಭಕುತಿ ನಿಧಾನ ವಿರಕುತಿ ।
ಧ್ಯಾನ ಮೌನಗಳೇನು ಅರಿಯದ ।
ಹೀನ ನಾನೆಂದು ಅನತಾದ ಮಾನ । ನಿನ್ನದಲ್ಲೈ ।
ದೀನರಕ್ಷ ದಯಾನಿಧಿಶ್ರಯ ।
ಧೇನುಯೆಂಬಾ ಅನಾದಿ ಬಿರುದವು ।
ಖೂನಿಡುವ ಶೃತಿಗೇನು ಗತಿಯಮ್ಮ । ನೀನುದ್ಧರಸದೇ ೨

ನಂದ ಕಂದ ಗೋವಿಂದ ಸಚ್ಚಿದಾ ।
ನಂದ ಅನಿಮಿತ್ತ ಬಂಧು ಯೆಂಬುವಾ ।
ನಂದ ನಾಮವು ಸಂದಿಸಲಿ ರಸ ।
ನೇಂದ್ರಿಯದ ನೆಲಿಗೇ ॥
ಮಂದಮತಿಯೊಳು ಕುಂದ ಕೊರತೆಯಾ ।
ಒಂದು ನೋಡದೆ ಇಂದು ಪಾಲಿಸು ।
ತಂದೆ ಮಹಿಪತಿ ನಂದನೊಡಿಯ ಮು ।
ಕುಂದ ಮುನಿವಂದ್ಯನೆ ೩

## ೩೦೫

ರಾಮ ಕೃಷ್ಣ ಗೋವಿಂದ ಗೋಪಾಲಾ ಜಯ
ಜಗಜೀವನಾ ಪ

ಶಾಮಸುಂದರ ಮುನಿಜನ ಮಾನಸ
ರಂಜನ ಪಂಕಜ ಲೋಚನಾ
ದಾಮೋದರ ಗೋಪೀಜನ ಮೋಹನಾ
ಅಹಿಲ್ಯಾ ಶಾಪ ವಿಮೋಚನಾ ೧

ಕೇಶವ ನಾರಾಯಣ ಮಾಧವ ಹರಿ
ಶ್ರೀ ವತ್ಸಾಂಕ ಜನಾರ್ಧನಾ

ಯಶೋದಾ ನಂದನ ಯದುಕುಲ ಮಂಡಲಾ
ಕಂಸ ಚಾಣೂರ ಮರ್ದನಾ ೨

ಸರಸಿಜ ಭವಭವ ಸುರಪತಿ ಪೂಜಿತ
ಪಾವನ ಪದ ನಿರಂಜನಾ
ಗುರುವರ ಮಹಿಪತಿ ನಂದನ ಸಾರಥಿ
ಶರಣಾಗತಾ ಭವ ಭಂಜನಾ ೩

## ೩೦೬

ರಾಮಾ ಕೃಷ್ಣಾ ಗೋವಿಂದಾ ಗೋಪಾಲ ಕೇಶವಾ ।
ವಾಮನಾಕಾಯೋ ಬಿಡಿಸಿ ಭವ ಪಾಶವಾ ಪ

ಅಹಂಮಮತಾವೆಂಬಾ ಸಂಚಾರ ವಾಯಿತು ।
ಸೋಹಂವೆಂಬಾ ತಿಳಿವಾದೆಚ್ಚರ ಹೋಯಿತ್ತು ।
ನಾಹಂಕರ್ತಾನೆಂದು ಸುವಿಚಾರ ಸೇರಿದಾ ।
ಸೋಹಂ ಎಂದು ನುಡಿಯದಾ ಕುಮತಿ ಮೀರಿದಾ ೧

ಅನಾತ್ಮದಲ್ಲಿ ಆತ್ಮ ಭಾವನೆ ಮೂಡಿದೇ ।
ಸನಾತನ ಚೈತನ್ಯ ತಾನೆಂದು ನೋಡದೆಲ ।
ಮನದಿಂದ ಈ ಕ್ಷಣ ತ್ರಯವಕೂಡಿದೇ ।
ಕನಸಿನಂದದಿ ಸಂಸಾರ ದೊಳಾಡಿದೇ ೨

ಮರಹು ಬಿಡಿಸಿ ನಿನ್ನೆಚ್ಚರ ದೋರಿಸೀ ।
ಚರಣದ ಭಜನೆಗೆ ಕಣ್ಣ ದೆರೆಸೀ ।
ಗುರುಮಹಿಪತಿ ಪ್ರಭು ದಯಬೀರಿಸೀ ।
ಹೊರೆವದೆನ್ನಯ ಅಪರಾಧ ಕ್ಷಮಿಸಿ ೩

## ೩೦೭

ರಾಮಚಂದ್ರನೇ ಪರದೈವನೋ ನಮ್ಮ ।
ಶಾಮ ಸುಂದರ ಕೃಷ್ಣ ಪರದೈವನಯ್ಯ ಪ

ರಾಮಭಕ್ತ ನಿದ್ದೆಡೆಗಾಗಿ ಯದುಕುಲ ।
ಸ್ವಾಮಿಯ ಶರಣನು ಬಂದ ಕೀರ್ತಿಸುತ ।
ಪ್ರೇಮದಲೀರ್ವರ ಭಕ್ತಿಯವಾದವು ।
ನೇಮದಿ ಬೆಳೆಯಿತು ಕೇಳಿ ಸಜ್ಜನರು ೧

ಚಿಕ್ಕ ತನದಿ ತಾಟಿಕೆಯನು ಕೊಂದು ಮುನಿಮುಖ ।
ಅಖಿರದಲಿ ಕಾಯದನಾರು ಹೇಳಯ್ಯ ।
ಠಕ್ಕಿಸಿ ಬಂದ ಪೂತನಿಅಸುಹೀರಿಜ ।
ನಕ್ಕಭಯ ನಿತ್ತ ಕೃಷ್ಣ ನೋಡಯ್ಯ ೨

ಚರಣ ಸೋಕಿಸಿ ಶಿಲೆ ಹೆಣ್ಣವ ಮಾಡುತ ।
ಹರಧನು ಮುರಿದವ ನಾರು ಹೇಳಯ್ಯಾ ।
ಮರಗಳಾದವರ ನುದ್ಧರಿಸುತ ಕಂಸಾ ।
ಸುರಧನು ಹಬ್ಬವ ಗೆದ್ದ ರಂಗೈಯ್ಯಾ ೩

ನೆರದಿಹ ದೇವ ದಾನವರೋಳುದ್ದಂಡದಿ ।
ಧರಣಿ ಜೆಯ ತಂದನಾರು ಹೇಳ್ಳೆಯ್ಯಾ ।
ವರಚೈದ್ಯೆ ಘೋಷರ ಭಂಗಿಸಿ ರುಕ್ಮಿಣಿ ।
ಕರವಿಡಿದೊಯ್ದಿದ ಕೃಷ್ಣ ನೋಡಯ್ಯಾ ೪

ವನದೊಳು ಹಣ್ಣವ ನಿತ್ತಂ ಶಬರಿಗೆ ।
ಚಿನುಮಯ ಪದವಿತ್ತ ನಾರು ಹೇಳಯ್ಯಾ ।

ಅನುವರದಲಿ ದ್ರೌಪದಿಯ ಶಾಕದಳ ।
ವನೆ ಕೊಂಡು ಸುಖವಿತ್ತ ಕೃಷ್ಣ ನೋಡಯ್ಯಾ ೫

ಜಲ ನಿಧಿಯೊಳಗ ಸೇತುಗಟ್ಟಿಸಿ ವಾನರ ।
ದಳನಡಿಸಿದ ವೀರನಾರು ಹೇಳಯ್ಯಾ ।
ಗಳಿಗಿಯೊಳರಿಯದಂದದಿ ಮಧುರ ಜನ ।
ನೆಲೆಮಾಡಿ ನೀರೊಳಗಿಟ್ಟ ರಂಗೈಯ್ಯಾ ೬

– ಅಪೂರ್ಣ

## ೩೦೮

ರಾಮನಾಮವನು ನೆನಿಯಬಾರದೆ ।
ನೇಮದಿ ಮನವೆ ಸದ್ಗತಿಯ ತೋರದೆ ಪ

ಘೋರತರ ಹೃತ್ತಾಪ ಸ್ಮರರಿಯಾ ।
ದೂರಮಾಡಿ ಶಾಂತಿಸುಖವಿತ್ತದರಿಯಾ ೧

ಜಲದೊಳು ತೇಲಿಸಿದನು ಅಚಲಗಳ ।
ಸುಲಭದುದ್ಧರಿಸಿತು ವಿಪಿನಚಾರಿಗಳಾ ೨

ಈ ಮಹಿಯೊಳು ಮಹಿಪತಿ ಪ್ರೀಯನಾ ।
ನಾಮನಿಧಾನಕ ಸರಿಯ ಕಾಣೆ ನಾ ೩

## ೩೦೯

ರಾಮ ರಸಾಯನವಾ ಬನ್ನಿರಯ್ಯ ಸೇವಿಸುವಾ ಪ

ಅವನಿಲಿ ನಾನಾವಿಪತ್ತದ ಪಡುವಾ ।
ಭವರೋಗ ಮೂಲ ಛೇದಿಸುವಾ ೧

ಭ್ರಮೆಗೊಂಡು ಮತ್ತೆ ಜನ್ಮಕ ಬಾರದಿರುವಾ ।
ಅಮರತ್ವವನು ಬ್ಯಾಗ ಪಡೆವಾ ೨

ಗುರು ಮಹಿಪತೀ ಪ್ರಭು ದಾಸರು ಮೆರೆವಾ ।
ವರಸಂಗದಲಿ ಸುಖಿಸುವಾ ೩

## ೩೧೦

ರಾಮಾಯನ್ನಿ ರಾಮಾಯನ್ನಿ ರಾಮಯನ್ನಿರೈ ।
ನೇಮದಿಂದ ನೆನೆವರಾ ಕಾವಿತಾರ್ಥಫಲನೀವಾ ಪ

ವಿಷವಾಧರಿಸಿ ಶೆಖೆ ಘಸಣೆಗಾರದೇ ಶಿವಾ ।
ವಸೆದು ಜಪಿಸಲು ನಾಮಾ ಸ್ವಖಾನಂದವ ನಿತ್ತಾ ೧

ಗಿಳಿಯ ನುಡಿಸುವ ನೆವದಲಿ ಗಣಿಕಾನನದಲಿ ।
ವಳಿದು ಬರಲು ನಿಂದಾಚಲ ಪದವಿಯಿತ್ತಾ ೨

ಒಂದು ಗ್ರಾಮದಿ ದೈತ್ಯರಿಂದಾ ದಂಪತಿಗಳಾ ।
ಬಂದು ಬಾಧೆ ಬಿಡಿಸಿ ಛಂದದಿ ಸಲುಹಿದಾ ೩

ಕುಂದು ಕೊರತೆಗಳಾ ಒಂದು ನೋಡದೇ ಬಂದು ।
ತಂದೆ ಮಹಿಪತಿಸ್ವಾಮಿ ಹೊಂದಿದ್ದವರ ಕಾವಾ ೪

## ೩೧೧

ರಾಮ ರಘೋತ್ತಮ ಕೃಷ್ಣ ಘನ ।
ಶಾಮಸುಂದರ ತ್ರಿಭುವನ ಜೀವನ ಪ

ದಶರಥ ನಂದನ ಭೂಮಿಸುತಾ ಪತಿ ।
ವಸುದೇವ ಸುತ ರುಕ್ಮಿಣಿ ರಮಣಾ ೧

ಋಷಿ ಮಖದಾಲನ ಸಾಂದೀಪ ತೋಷಣ ।
ದಶಶಿರ ಕಂಸಾಸುರ ದಮನಾ ೨

ಅಹಲ್ಯೋದ್ಧಾರಣ ಕುಜಕೃತ ಪಾವನ ।
ಮಹಿಪತಿ ಸುತ ಪ್ರಭು ಶುಭಚರಣಾ ೩

## ೩೧೨

ರಾಮ ಸಲಹಯ್ಯ ಪುಣ್ಯನಾಮ ।
ಶ್ರೀ ರಾಘವೇಂದ್ರಾ ಪೂರಿತಕಾಮಾ ನೇಮಾ ।
ಶಾಮ ಪರಮಾ ಗುಣರತ್ನ ಧಾಮಾ ಪ

ವನಜಾಂಬಕ ಕುಂದರದನಾ ।
ಅನುಪಮ ಸುಂದರ ವದನಾ ।
ರಣದಲಿ ಜಿತ ದಶವದನಾ ।
ಅನಂತವದನಾ ಲಾವಣ್ಯ ಸದನಾ ೧

ಕರುಣಾ ಶರಣಾ ಭರಣಾ ।
ಧರಣಿ ಧರಣೋದ್ಧರಣಾ ।
ಸ್ಫುರಣ ಕಿರಣ ದೋರಣ ಚರಣಾ ।
ಅರುಣಾಂಬುಜಾಲಯ ರಮಣಾ ೨

ವೀರಾಗುಣ ಗಂಭೀರಾ ।
ಕ್ರೂರಾಸುರ ಸಂಹಾರಾ ।
ಶೂರಾ ಜನ್ಮ ವಿದೂರಾ ।
ಮಹಿಪತಿ ಧೀರಾ ಕೃಷ್ಣನೊಡೆಯ ಉದಾರಾ ೩

೩೧೩

ರಂಗನಟ್ಟುಳಿ ಕೇಳಿ ಗೋಪೆಮ್ಮಾ ರಸಗನಾಹಲ
ವಂಗದಿಂದ ಕಾಡುವನಮ್ಮಾ ಬಾಲನೇ ಗೊಪಾಲನೇ ಪ

ಹಾಲು ಮೊಸರು ಬೆಣ್ಣೆ ಮಾರಲು ಬಂದರಾ ಚಿಕ್ಕ
ಬಾಲೆರ ನೋಡುತ ಮೊಗಚಂದಿರಾ ಅವರಾ
ಶಾಲೆಯ ಸೆಳೆದು ಸುಮ್ಮನೇ ನಿಂದಿರಾ ಬಟ್ಟೆ
ಮೊಲೆಯನು ಚಂಡು ಕುಡೆಂಬಾ
ಮಂದರಾಧರ ಸುಂದರಾ ೧

ನೀರೋಳಾಡುವಲ್ಲಿ ಬಂದು ಕಂಡ ನಮ್ಮಾ
ನಾರೇರಾ ಸೀರೆಯಾ ಕದ್ದಾ ಪುಂಡನೇ ಮರ
ನೇಚಾಳಿಸಿ ನುಡಿದ ಪ್ರಚಂಡನೇ ಕೈಯ್ಯ
ದೋರಿಯರಡು ಎಂದು ಲಜ್ಜೆಯ
ಕೊಂಡನೇ ಬಲು ಭಂಡನೇ ೨

ಕಂಸನರಮನೆ ಬಲಗುಂದಿತೇ ನಂದ
ನಂಶಕ ವಡೆತನ ಬಂದಿತೇ ಮುರ
ಧ್ವಂಶಿಗೆ ದುರುಳ ತನವು ಸಂದಿತೇ ಇನ್ನು
ಸಂಶಯಾತಕ ಮಹಿಪತಿ ಸುತ
ವಂದಿತೇ ಮನಕ ಬಂದಿತೇ ೩

೩೧೪

ರಂಗ ಬಂದಾನಮ್ಮ ಭಂಗಿಸಿ ಕಾಳಿಯ ಫಣಿಯಲಿಂದು ಪ

ವಿಷಧರನುರಿಯಿಂದ ನಿಸಿದಿನಿ ಕುದಿಯುತಿಹ ।
ವಿಷಮಡುವನೆ ಪೊಕ್ಕು ಕುಶಲದಿಂದಲಿ ರಂಗ ಬಂದಾ ೧

ಉರಗೇಂದ್ರ ಬಂದನದಿ ಶರೀರ ಬೆಳಿಸಿ ತನ್ನ ।
ಬಿರಿವಂತವನತನು ಹರಿಸಿ ಮದವಾ ೨

ನೂರೊಂದು ಹೆಡೆಗಳ ಚರಣದಲೊತ್ತಿ ತುಳಿದು ।
ಸುರರಾ ಗೀತದಿ ನೃತ್ಯ ಚರಿತವ ದೋರಿ ೩

ಸತಿಯರ ಮೊರೆಕೇಳಿ ಪತಿದಾನವನೆ ಕೊಟ್ಟು ।
ಕ್ಷಿತಿಯೊಳು ಗೋಕುಲದುನ್ನತ ಭಾಗ್ಯದಲಿ ೪

ತಂದೆ ಮಹಿಪತಿ ನಂದನ ಪ್ರಭು ಸ್ವಾ ।
ನಂದವ ಸುರನರ ವೃಂದಕ ಬೀರಿ ೫

## ೩೧೫

ವದನದಲಿ ಮನವೇ ನೆನಿನಾಮ ಶ್ರೀಹರಿಯಾ ।
ಸದಮಲದಲಿ ಮರೆಯದೆ ಬಾವದಲಿ ಪ

ದಾವನು ದಾಸರ ದಾಸರ ಪದರಾ ।
ಜೀವ ಯುಗಳ ದರುಶನದಲಿ ।
ತೀವಿಕೊಂಡಿಹ ಬಹುಜನ್ಮದು ಷ್ಕೃತ ।
ಲಾವಡಗುತಿಹವು ನಿಮಿಷದಲಿ ೧

ನಾಮದ ಮಹಿಮೆಯ ತಿಳಿಯಲು ಅರಸಲು ।
ಅಮಹಾನಿಗಮಾಗಮದಲಿ ।
ವ್ಯೋಮ ಕೇಶನಾರದಾಹನುಮರೆ ಬಲ್ಲ ।
ನಾಮದ ಸುಖವೆಂತೋ ಭುವನದಲಿ ೨

ಸರ್ವಧರ್ಮಾನ್ ಪರಿತ್ಯಜ್ಯಂಬ ವಾಕ್ಯವಾ ।
ಅರ್ವವ ಹಿಡದು ತ್ರಿಕರ್ಣದಲಿ ।
ಸರ್ವಭಾವದಿ ಗುರು ಮಹಿಪತಿ ಸ್ವಾಮಿಯ ।
ಮೆರ್ವಪಾದುಕ ವಿಟ್ಟು ಹೃದಯದಲಿ ೩

## ೩೧೬

ವಾಸುದೇವನ್ನಾ ಪಾದವ ನಂಬಬಾರದೇ ।
ಈಶನೊಲಮಿಂದಾ ಸದ್ಗತಿ ಸುಖವು ದೊರದೇ ಪ

ವನಜಭವಾದಿಗಳು ದೋರುವನಾ ಮುಕುತಿಯು ಪಾಯಾ ।
ಯನುತ ಬಂದರೆಯುನೊಡದಿರು ಅವರ ಕಡೆಯಾ ೧

ಜಠರ ಬಾಗಿಲವಾ ಕಾವಾಶ್ವಾನನ ಪರಿಯಂತೆ ।
ನಿಷ್ಠೆಯೊಂದನೆ ಬಿಟ್ಟು ತಿರುಗಬ್ಯಾಡ ಕಂಡಂತೆ ೨

ಇಂದಿಗೆ ನಾಳಿಗೇ ಹ್ಯಾಂಗೆಂದು ಚಿಂತಿಸದಿರು ।
ಛಂದದಿ ಗೀತೆಯಲಿ ಸಾರಿದ ವಾಕ್ಯಾ ಮರೆಯದಿರು ೩

ಶಿಲೆಯೊಳಗಿರುತಿಹಾ ಕಪ್ಪಿಗಾಹಾರ ನೀಡುವರಾರೋ ।
ತಿಳಿದು ನೀನೀಗ ಹಲವ ಹಂಬಲವ ಹಿಡಿಯದಿರು ೪

ಎರಡು ದಿನದಿದು ಸಂಸಾರವೆಂಬುದು ನೋಡಿ ।
ಅರಿತು ಇದರೊಳಗ ಸಾರ್ಥಕ ಸಾಧನವ ಮಾಡಿ ೫

ಒಂದು ಭಾವದಲಿ ತ್ವರಿತದಿ ಹೊಕ್ಕರ ಶರಣವನು ।
ತಂದೆ ಮಹಿಪತಿ ಸುತ ಸನ್ಮಾರ್ಗ ಕೂಡಿಸುತಿಹನು ೬

ಏನೆಂದರಿಯದಾ ಕಂದಗೆ ಉದ್ಧರಿಸಿದ ನೋಡೀ ।
ತಂದೆ ಮಹಿಪತಿಯು ದಾರಿಯ ದೋರಿದ ದಯಮಾಡಿ ೭

## ೩೧೭

ವಿವೇಕದಿಂದಾ ಮತಿಯುಕ್ತನಾಗಿ
ಕುವಿದ್ಯದಾದಾ ಗುಣವೆಲ್ಲ ನೀಗಿ
ಭಾವಾರ್ಥದಿಂದಾ ಸ್ಮರಿಸೋದು ನೀತಿ
ಗೋವಿಂದದಾಮೋದರ ಮಾಧವೇತಿ ೧

ತ್ರಿವಿಧ ತಾಪದೊಳು ಮಗ್ನನಾಗಿ
ನೀವ್ಯರ್ಥದಿನಗಳಿಯದೆ ಹೋಗಿ
ಭಾವಾರ್ಥದಿಂದಾ ಸ್ಮರಿಸೋದು ನೀತಿ
ಗೋವಿಂದ ದಾಮೋದರ ಮಾಧವೇತಿ ೨

ಈ ವಿಷಯದಾಸುಖ ನಿತ್ಯವಲ್ಲಾ
ನೀವಾತು ಕೇಳಿಗುರುವೀನ ಸೊಲ್ಲಾ
ಭಾವಾರ್ಥದಿಂದ ಸ್ಮರಿಸೂದು ನೀತಿ
ಗೋವಿಂದ ದಾಮೋದರ ಮಾಧವೇತಿ ೩

ಆವದು ತನ್ನ ಹಿತವನು ನೋಡಿ
ಸಾವಧನಾಗೀ ಶ್ರವಣ ಮಾಡಿ
ಭಾವರ್ಥದಿಂದ ಸ್ಮರಿಸೋದು ನೀತಿ
ಗೋವಿಂದ ದಾಮೋದರ ಮಾಧವೇತಿ ೪

ಅವಾವ ಯೋನಿಯಲಿ ಬಂದಹಿಂದಾ
ಅವದುಗತಿಯಂದು ನೋಡಿವಂದಾ
ಭಾವರ್ಥದಿಂದ ಸ್ಮರಿಸೋದು ನೀತಿ
ಗೋವಿಂದ ದಾಮೋದರ ಮಾಧವೇತಿ ೫

ತಾವಂದೇ ಆಶ್ರೈಸದೆ ಕಾಮಧೇನು
ಸಾವಿರ ಸಾಧನಕ ಬೀಳುದೇನು
ಬಾವಾರ್ಥದಿಂದಾ ಸ್ಮರಿಸೋದು ನೀತಿ
ಗೋವಿಂದ ದಾಮೋದರ ಮಾಧವೇತಿ ೬

ಜೀವಾತ್ಮರಾಗಿ ಸಚ ರಾಚ ರಾವ
ಈ ವಸುಧೀಲಿ ಜಗವಾಡಿ ಸೂ ವಾ
ಬಾವರ್ಥದಿಂದಾ ಸ್ಮರಿಸೋದು ನೀತಿ
ಗೋವಿಂದ ದಾಮೊದರ ಮಾಧವೇತಿ ೭

ಗೋವಿಂದ ಅಷ್ಟಕವ ದಾವಪ್ರಾಣೀ
ಸೇವಿಸುವನು ಕಾವನು ಚಕ್ರಪ್ರಾಣೀ
ಭಾವಾರ್ಥದಿಂದಾ ಸ್ಮರಿಸೋದು ನೀತಿ
ಗೋವಿಂದ ದಾಮೋದರ ಮಾಧವೇತಿ ೮

## ૩೧೮

ಶರಣಜನೋದಧಿಚಂದ್ರಾ ಸಿರಿ
ಯರಸ ದೇವ ದೇವ ಕರುಣಿ ಮುಕುಂದಾ ಪ

ಹಾರದ ನಿಗದಿಯ ಬಿಟ್ಟು ಸೋತವನಾಗಿ
ವ್ಯಾಸ ಭೀಷ್ಮನ ಗೆಲಿಸಿದೆ ಮುಕುಂದಾ ೧

ಹಗಲೇ ಇರಳ ಮಾಡಿ ಸೈಂಧವನಸುವನು
ತೆಗಿಸಿ ನರನ ವಾಸಿ ಕೊಂಡ್ಯೋ ಮುಕುಂದಾ ೨

ಶರಧಿಯಂಜಿಸಿಕೊಂಡು ಪಕ್ಷಿಯ ಶಿಶುವಾಗಿ
ಗರುಡನ ವಾಸಿಯ ಕೊಂಡ್ಯೊ ಮುಕುಂದಾ ೩

ದಶಜನುಮವತಾಳಿ ಮುನಿಯ ಬೆದರಿಸ್ಯಂಬ
ರಿಕ್ಷಣ ಫಲನಡಿಸಿದೆ ಮುಕುಂದಾ ೪

ಗುರು ಮಹಿಪತಿ ಸ್ವಾಮಿ ಭಕ್ತ ವತ್ಸಲನೆಂಬ
ಬಿರುದುವಾಳಿದರೆಂದು ಸಲಹೋ ಮುಕುಂದಾ ೫

## ೩೧೯

ಶರಣರೆಳಕಂದಿ ನೀನ್ಯಾಕೆ ಕರುಣಿಸಲೊಲ್ಲಿ ।
ದುರಿತ ಭಯ ಪರಿಹರಿಸಿ ಸಲಹೆನ್ನ ತಂದೆ ಪ

ಹಿಂದೆ ವಾತ್ಸಲ್ಯತನ ಪ್ರಹ್ಲಾದನಲಿ ತೋರಿ
ಬಂದರ ವಿಭೀಷಣಗ ಅಭಯಕರವಿತ್ತೇ ।
ಬಂಧನಕ್ಕೋಳಗಾದ ಗಜರಾಜನನು ನೆಗಹಿ ।
ಛಂದದಭಿಮಾನುಳಿಹಿ ದ್ರೌಪದಿಯ ಕಾಯ್ದೆ ೧

ಕಲುಷವಾರಿಸಿ ಮುನಿ ಸತಿಯ ನೀನುದ್ದರಿಸಿ ।
ಒಲಿದು ಧ್ರುವಗಾನಂದ ಪದವಿತ್ತೆ ಧರಿಲಿ ।
ಸಿಲುಕಿರಲು ಲಾಕ್ಷಗೃಹದಿ ಪಾಂಡವರನುಳುಹಿ ।
ಲಲನೆ ಗರ್ಭದಿ ಪರೀಕ್ಷಿತನ ಕಾಯ್ದೆ ಸ್ವಾಮಿ ೨

ಅವರ ದಾಸಾನುದಾಸರ ಭಾಗ್ಯವೆಮಗಿಲ್ಲಾ ।
ತವನಾಮಧಾರಕೆನಿಸಿದ ಬಿರುದಿಗಿಂದು ।
ಕುವಲಯ ಶ್ಯಾಮ ಗುರು ಮಹಿಪತಿ ಸುತ ಪ್ರಭುವೆ ।
ಯಮನ ಬಾಧೆಯ ಬಿಡಸೋ ಬ್ಯಾಗೊದಿಗಿ ಬಂದು ೩

## ೩೨೦

ಶರಣು ವೆಂಕಟ ರಮಣ ಭಕ್ತ ಸಂಕಟ ಹರಣ
ಶರಣು ಶೇಷಾದ್ರೀಶ ಪರಿಹೃತನೆ ಭವಪಾಶ
ಶರಣು ಸರ್ವರಿಗಾದ್ಯ ಅಜಭವಸುರಾರಾಧ್ಯ
ಶರಣು ವೇದಾಂತ – ವೇದ್ಯ ಪ

ಶರಣು ನಿರ್ಜಿತ ದುರಿತ ನಾಮ ವಿಶ್ವಂಭರಿತ
ಶರಣು ಘನಕಾರುಣಿಯೆ ದೇವ ಚೂಡಾಮಣಿಯೆ
ಶರಣು ಮಹಿಪತಿ ನಂದ ನೋಡಿಯ ಪರಮಾನಂದ ಶರಣು
ಶ್ರೀ ಹರಿಮುಕುಂದಾ ೧

## ೩೨೧

ಶರಣು ಶಿರೀಶ ಹರೇಗೋವಿಂದಾ ಪ

ದಾನವ ಕುಲಸಂಹಾರಕಾ ದೀನ ತಾರಕಾ
ದೀನ ತಾರಕಾ ಪರಮ ಪಾವನ ರೂಪಾ ೧

ಈರೇಳು ಲೋಕದ ಜೀವನಾ ವರಪಾವನಾ
ವರಪಾವನಾ ಭರಣ ವಿನುತ ದಯಚರಣಾ ೨

ಭಯಹರ ಆನಂದಸಾಗರಾ ದಯ ಸಾಗರಾ
ದಯಸಾಗರಾ ಗರುಡಗಮನ ವರ ಫಣಿಶಯನಾ ೩

ದುರಿತ ಕುಲಾಂಬುಧಿ ಶೋಷಣಾ ಖರದೋಷಣಾ
ಖರದೋಷಣಾ ತನು ಪರ್ವತ ಕುಲಿಶಾ ೪

ಸುರವರ ಮುನಿಜನ ಪಾಲನಾ ಧರಿಲೋಲನಾ
ಧರಿ ಲೋಲನಾ ರಾಯಣ ಸರಜ ನೇತ್ರಾ ೫

ರವಿಕೋಟಿ ನಿಧನಂದ ನಂದನಾ ಭವಬಂಧನಾ
ಭವ ಬಂಧನಾ ಭೇದನ ರತಿ – ಪತಿ ಜನಕಾ ೬

ಅಸಮ ಪಯೋಧರ ಸುಂದರಾ ದಶಕಂಧರಾ
ದಶಕಂಧರಾ, ಮರ್ಧನ ನಿರುಪಮ ಚರಿತಾ ೭

ಸಕಲ ವ್ಯಾಪಕ ಯದುನಾಯಕಾ ಸುಖದಾಯಕಾ
ಸುಖದಾಯಕಾ ಮಹಿಪತಿ ನಂದನ ಪ್ರೀಯಾ ೮

## ३೨೨

ಶರಣು ಶಿರೀಶ ಹರೇ ಪ

ಭುವನದಲಿ ಶೃತಿ–ಯಡಗೇ।
ಯವಿಗಳಾಡಿಸದೇ।
ಜವದಲಿ ಬಂದು ನೀ ತಮನನು ಕೊಂದೇ।
ಕಾವ್ರೋದೋ ಎನ್ನಾ ಮತ್ಸ್ಯರೂಪಾ ೧

ಸುರಸುರರು ಕೊಡಿ।
ಶರಧಿಯ ಮಥಿಸುದಕಿ।
ಕರುಣದಿ ಬೆನ್ನವನಿತ್ತೆ ನೀನಗತಿ।
ಕಾವ್ರೋದು ಎನ್ನ ಕಮಠ ರೂಪಾ ೨

ಹಿರಣ್ಯಾಕ್ಷನ ಕೊಂದು।
ಧರೆಯನು ದಂತದಲೆ।
ಧರಿಸಿದೆ ನೀ ಅನವರತಗಳಿಂದಲೇ।
ಕಾವುದೋ ಎನ್ನ ವರಹಾ ರೂಪ ३

ಛಲದಿ ಪ್ರಹ್ಲಾದ ಕರಿಯೇ।
ಕುಲಿಶ ಸಮುಗುರುದಲೆ।
ಮೆಳೆತನ ಸೀಳಿದೆ ಕರಳ್ಳೊನಮಾಲೆ।
ಕಾವುದೋ ಎನ್ನ।ನರಹರಿ ರೂಪ ೪

ಚಂಡ ಬಲಿವವರದನೇ।
ದಂಡ ಕಾಷ್ಟಕರನೇ।
ಕುಂಡಲ ಸುಕಮಂಡಲ ಭೂಷಿತನೇ।
ಕಾವುದೋ ಎನ್ನ ವಾಮನ ರೂಪ ೫

ಸುಜನರ ಪ್ರತಿ–ಪಾಲಾ
ರಾಜಾಕುಲಾಂತಕನೇ।
ರಾಜಿಸುತಿಹ ವರ ಪರಶುಧರನೇ।
ಕಾವುದೋ ಎನ್ನಾ ಭಾರ್ಗವರೂಪಾ ೬

ಋಷಿಯ ಮಖ ಕಾಯಿದು
ಶಶಿಧರಧನು ಮುರಿದೇ।
ದಶಮುಖ ಕುಂಭಕರ್ಣರ ಮರ್ದಿಸಿದೆ।
ಕಾವುದೋ ಎನ್ನಾ ರಾಘವ ರೂಪ ೭

ಎಣೆಗಾಣದ ಮಡುವಿನಲಿ।
ಫಣಿವರ ಫಣಿಮ್ಯಾಲ।
ಕುಣಿದೆ ಆನಂದದಿ ಕೊಳಲನೂದುತ್ತಲೇ।
ಕಾವುದೋ ಎನ್ನಾ ಯಾದವ ರೂಪ ೮

ಮೂರೆನಿಪ ಪುರದಲಿ।
ನಾರೇಶ ದೃತವಳಿದೇ।
ಭೂರಿ ಸಜ್ಜನ ಹೃದ್ವ ನಜ್ಜದೊಳಾಡಿದೇ।
ಕಾವುದೋ ಎನ್ನಾ ಬೌದ್ದ ಸ್ವರೂಪಾ ೯

ಸಲಹಬೇಕೆಂದು ಜಗವಾ।
ಇಳೆಯಾ ಭಾರರ ತರಿದೇ।
ಸುಲಲಿತ ಕುದುರೆಯ ಏರಿ ಮೆರೆದೆ।
ಕಾವಿದೋ ಎನ್ನ ಕಲ್ಕಿಸ್ವರೂಪ ೧೦

ಸಹಕಾರಿ ಭಕ್ತರಿಗೇ।
ಮಹಿಮೆ ದೋರಿದೆ ಹೀಗೆ।
ಮಹಿಪತಿ ಸುತ ಪ್ರಭು ಸಲಹು ನೀಯೆನಗೆ।
ಕಾವುದೋ ಎನ್ನಾ ಅನಂತರೂಪ ೧೧

## ३.೨३

ಶಿಶುಗಳಪರಾಧಕೆ ಶಿಕ್ಷೆ ಕಣ್ಣೀಲಲ್ಲದೇ
ಯಶವ ಬಡಿಗೋಲವನು ಎತ್ತುವರೇ ರಂಗಾ ಪ

ಇಲಿಗೆ ಹೆಬ್ಬುಲಿಯಾಕೆ।ಮೊಲಕೆ ಮದಗಜವ್ಯಾಕೆ।
ಕಳೆತ ಹಣ್ಣಿಗೆ ಮತ್ತೆ ಕರಗಸ್ಯಾಕೆ।
ಕಲೆ ಬಿದ್ದ ಕನ್ನಡಿಗೆ ಗುದ್ದಲಿಯ ತರಲೇಕೆ।
ಗುಳಲಿ ಕಾಯಿಗೆ ಹೊತ್ತಗಲ್ಲ ವ್ಯಾಕೆ ೧

ಹಳ್ಳಗೆ ಹಡಗವ್ಯಾಕೆ।ಕೊಳ್ಳಿಗೆ ಕೊಡ ಜಲವ್ಯಾಕೆ।
ಮುಳ್ಳು ಮುರಿದುದಕ ಮೊನೆ ಹಾರಿ ಯಾಕೆ।
ಮಲ್ಲಿಗೆ ಹೋವಿಗೆ ಬಂಧ ಹಗ್ಗದಲ್ಯಾಕೆ।
ಹಲ್ಲಿ ಬೆದರಿಸೆ ಹೊಡೆವ ಭೇರಿಯಾಕೆ ೨

ಜ್ಞಾನಹೀನರ ನಮ್ಮ ತಪ್ಪನೆಣಿಸಿದುರಿತ।
ಮೊನೆಗಾಣಿಸುತ ಬನ್ನಿ ಬಡಿಸುವುದುಚಿತವೇ।
ದೀನವತ್ಸಲ ತಂದೆ ಮಹಿಪತಿ ಸುತ ಪ್ರಭುವೇ।
ನ್ಯೂನಾರಿಸದೇ ನಿನ್ನವನೆಂದು ಸಲಹೋ ३

## ೩೨೪

ಶಿಶುವಿನ ಯಾತಕ ದೂರವಿರೆ।
ನಿಶಿದಿನ ನೋಡಲು ಮಾತವರಿದವಾ।
ಮರಳನೆ ಮಾಡುವರೆ ಪ

ಅತಿ ಮೋಹದಿಂದಲಿ ಮೊಲೆಯನು।
ಬಾಯೊಳಗಿಟ್ಟರೆ ಸೇವಿಸನು।
ಮಿಲೆ ಯಿಲ್ಲದ ಪಾಲ್ಮೊಸರನು।
ಕುಡಿಯಲು ತಕ್ಕವನೆ ೧

ಪರಿಪರಿಯಿಂದಲಿ ಮುಂದಕೆ ಕರೆದರೆ।ಸರಕನೆ ಹೆಜ್ಜೆಡನು।
ಹರಿ ನಿಮ್ಮುಡುಗೆಯ ಸೆಳೆದು ಕೊಳುತಲಿ।
ಮರವನೆ ಏರುವನೆ ೨

ಸುರಜನ ಪಾಲಕ ಮಹಿಪತಿ ನಂದನ।ಜೀವನ ಮೂರುತಿಯಾ।
ಕುರುಪಿಡಬಹುದೆನೆ ಮಾನವನೆಂದು।
ಲೀಲೆಯ ದೋರುತಿಹ ೩

## ೩೨೫

ಶ್ರೀ ಕೃಷ್ಣನಾ ಚರಣಾ ನಂಬಿ ಭಜಿಸುವುದು ಬಲು ಲೇಸು ಪ

ಭಾವನೆ ದೇವಕಿ ಉದರದಿ ಬಂದಾ।
ದೇವ ಹೃದಯ ಗೋಕುಲದಲಿ ಬೆಳೆದಾ।
ಅವಿದ್ಯ ಪೂತನಿಯನು ಕೊಂದಾ ೧

ಭವರೂಪದ ಸಗಟಾಸೂರನೊದೆದಾ।
ಅವಗುಣಿಬಕ ಕೇಶಾದ್ಯರ ತರಿದಾ।
ಅವಿವೇಕಿ ಕಾಳಿಂಗನ ತುಳಿದಾ ೨

ಭಕ್ತಿಯ ಗೋರಸ ಕಳವಿಲಿ ಸುರಿದಾ।
ಮುಕ್ತಾಂಗದ ಗೋಪೀಜನ ನೆರೆದಾ।
ಸಕ್ತಿಯ ಗೋವರೋಳು ನಲಿದಾ ೩

ಭ್ರಾಂತಿಯ ಹಮ್ಮಿನ ಕಂಸನ ಬಡಿದಾ।
ಸ್ವಾಂತ ಸುಖ ದ್ವಾರಕೆಯಲಿ ನಿಂದಾ।
ಶಾಂತಿಯ ರುಕ್ಮಿಣಿ ಕೈವಿಡಿದಾ ೪

ತಂದೆ ಮಹಿಪತಿ ಗುರುವಾದಾ
ಕಂದುದ್ಧವನನು ತೋರಿಸಿ ಹೊರೆದಾ।
ಛಂದದಿ ಪಾದುಕವಿತ್ತನು ಪದದಾ ೫

## ೩೨೬

ಶ್ರೀ ರಾಮನಾಮ ಸ್ಮರಿಸೀಕ್ಷಕಾರಿ
ಘೋರಾವತಾಪಗಳದಾಗಳದಾ ಪುರಾರಿ
ಆರಾದರೇನು ಜಪಿಸೀ ಜಪಸೀದ ಯೋಗಿ
ಸಾರುವೆ ನೊಡಿ ಸುಖವಾ ಸುಖವನು ನೀಗಿ ೧

ಸೋಕಲು ರಾಮಪದವಾ ಪದವನು ನೀಗಿ
ತಾಕನ್ಯಳಾದಳರಿಯಾ ಅರಿಯಾದ ಹೋಗಿ
ನೀ ಕೇಳಿ ಕೇಳಿ ಮರವೇ ಮರವೇನೋ ನೀನು
ಲೋಕೇಶಗ್ಹೋಗುಶರಣಾ ಶರಣಾಗುವನು ೨

ಏನಿತ್ತಳಂದು ಶಬರಿ ಬರಿಯಹಣ್ಣಾ
ತಾನುಂಡುಕೊಟ್ಟು ಭವವಾಭವವಾರಿಸಣ್ಣಾ
ಅನಾಥಬಂದು ಮರಿಯಾಮರಿಯಾದಹೋಗಿ
ಸ್ವಾನಂದಸಾಖ್ಯಗರೆವಾಗರೆವಾಗೊವಲ್ಲಿ ೩

ಇಂದಿರೆ ಸುದ್ದಿ ಸುಧಿಯಾ ಸುಧಿಯಾದಲಿಂದಾ
ತಂದಾರೆಪದ್ಮಭವನಾ ಭವಸಾದರಿಂದಾ
ಆದನೇವೆ ಕೊಟ್ಟುಕರದೀ ಕರದೀಶನಾಥಾ
ಮುಂದಿನಭಾವ್ಯ ಹನುಮಾ ಹನುಮಾವಿಧಾತಾ ೪

ರಾಮೆಂದುಕೂಗಿ ಗಿಳಿಯಾ ಗಿಳಿಯಾಗಣಿಕೆ
ನೇಮದಲಿ ಮುಗುತಿಯಾ ಗತಿಯಾಬೇಕೆ
ಪ್ರೇಮದಿ ಮಾನವರುತಾ ವರತಾತನೆಂದಾ
ಕಾಮಾರ್ಥನೀವ ಚಲುವಾ ಚಲುವಾ ಮುಕುಂದಾ ೫

ಸುಗ್ರೀವ ಬಂದು ಅಡಿಯಾ ಅಡಿಯಾಗಲೆಂದು
ಶೀಘ್ರದಿಶೀಳಿತರುವಾ ತರುವಾಯಲಿಂದು
ಅಗ್ರಜನೊತ್ತಿ ಅವನೀ ಅವನೀಯ ರಾಮಾ
ನುಗ್ರಹ ಮಾಡದರಿಯಾದರಿಯಾಗು ವಾತ್ಮಾ ೬

ಶುಭವಾಕ್ಯ ದೂರಿದನು ಜಾಣನು ಜಾಣನಾಗಿ
ವಿಭೀಷಣಬಂದ ಕಣವೀಕ್ಷಣದಲಿ ಸಾಗಿ
ವಿಭುಕೊಟ್ಟಲಂ ಕಾಶ್ರಯವಾಶ್ರಯವಾಗಿ ರಾಮಾ
ಅಭಿವರ್ಣಿಸುದುರಸನಾ ರಸನದಿ ನೇಮಾ ೭

ಶೇವೆಯನು ಮಾಡಿ ತಣಲೀತಣಲೀಯ ನೋಡಿ
ತಾವರಿ ಕೈಯ್ಯಳೆಳದಾಲೆಳದಾದಯ ಮಾಡಿ
ಭಾವಾರ್ಥಿಯಾದ ನರನಾ ನರನಾಥವೇಷಾ
ಕಾವನುಲೋಕಜನ ಕಾಜನಕಾತ್ಮಜೇಶಾ ೮

ರಾಮಾಷ್ಟಕಾದ ಕವಿತಾ ಕವಿತಾನೆ ಆಗೀ
ಶ್ರೀ ಮಹಿಪತಿ ವರದಾ ವರದಾತ ಯೋಗಿ
ನಾಮಕ್ಕ ಕುಂದ ಗುರುತಾಗುರುತಾತ ಮಾಡಿ
ನೇಮದಿ ಕಾವಕರುಣೀಕರುಣೀಯ ನೋಡಿ ೯

## ೩.೨೭

ಶ್ರೀ ಲತಾಂಗಿಯ ವಲ್ಲಭಾ।ಎನ್ನ।
ಪಾಲಿಸೋ ಭಕ್ತರ ಸುಲಭಾ ಪ

ಇಂದೀವರದಳ ನಯನಾ ಮು।
ಕುಂದ ಉರಗರಾಜ ಶಯನಾ।
ಮಂದರೋದ್ಧರ ಪಾಪ ಶಮನಾ।ಗೋ।
ವಿಂದ ಖಗೇಶ್ವರ ಗಮನಾ ೧

ಶರಣ ಜನರಾಭರಣಾ।ಮುರ।
ಹರ ಜಗದೀಶನೇ ಕರುಣಾ।
ಪರಮಾನಂದ ಜೀತ–ದೂಷಣಾ।ಮ।
ಕರಕುಂಡಲ ಸುಭೂಷಣಾ ೨

ಸರಸಿಜ ಭವನುತ ಸ್ವಾಮಿನ್ನಾ।ಶ್ರೀ।
ಹರಿ ಪೂರಿತ ಮನೋಕಾಮನ।
ಸುರವರದ ಶರಧಿ ಕೀಲನಾ।ಗುರು।
ವರ ಮಹಿಪತಿ ಸುತ ಪಾಲನಾ ೩

## ೩.೨೮

ಶ್ರೀವಧು ನಯನಾಬ್ಜ ವಿಲೋಚನಾ
ದಾವನಾಗಿಹ ಪಂಕಜಲೋಚನಾ
ದೇವನಂಘ್ರಿಯ ಚರಿತದ ಸೂಚನಾ
ಶ್ರಾವಿಸಲ್ಕಾಹುದು ಪಾತಕ ಮೋಚನಾ ೧

ಮತಿ ಮಂತಾಂಭುನಿಧಿ ದ್ವಿಜರಾಜ
ದಿತಿ ಸುತಾಹಿ ಕುಲದ್ವಿಜರಾಜಾ
ಸುತ ಮುನಿಹೃದಯಾಬ್ಜದಿನೇಶಾ
ಸತತ ದುಷ್ಕೃತ ತರುರದನೇಶಾ ೨

ಆವನೀಭುವ ನತ್ರಯವ ಪಾಲಕಾ
ದೇವಕೀತಪದಲಾದನು ಬಾಲಕಾ
ದೇವನಾಡಿದ ಮನಿಲಿಯ ಶೋದಾ
ಭಾವಿಸಲ್ಕವಗ ಗತಿ ಶ್ರೀಯಶೋದಾ ೩

ಪರಮ ಸುಂದರ ನಂದ ಕುಮಾರಾ
ಅರಿತು ಬಂದನುಗರ್ಭದಿ ಮಾರಾ
ಧರಿಯೊಳಾವನ ಮನಿ ಕಾಪುರದ್ವಾಶಕಾ
ಸ್ಮರಸಲೀ ಜಗದ ಪಾವಿದಾರಕಾ ೪

ಭಹುತಿ ಮಾಡುನೀ ಮಾನವ ತಂದಿಯಾ
ಸುಗಮದಿಂದರಿದ ಬಂಧನ ತಂದಿಯಾ
ಮಗನ ಕಾಯಿದಾ ಶಿಕ್ಷಿಸಿ ತಂದಿಯಾ
ಮಗನ ಶಿಕ್ಷಿಸಿ ಕಾಯಿದಾತಂದಿಯಾ ೫

ವನಧಿ ವಂಧಿಸಿ ತೇಲಿಸಿ ಪರ್ವತಾ
ಜನಪದಾಟಿಸಿ ವಾನರ ಪರ್ವತಾ
ಘನಮಹಿಮನು ಜಾನಕಿ ಕಾಂತಾ
ನೆನಹುತಿಹನು ಸಹಶಿವಕಾಂತಾ ೬

ಸೇವಿಗಂಡೊಲಿದು ರಾಘವ ತಮ್ಮನಾ
ರೇವತೀರಮಣಗೆಂಬನುತಮ್ಮನಾ
ಜೀವಗಾಯಿದಾ ಭೀಮನತಮ್ಮನಾ
ಪಾವನಂಘ್ರಿಯ ನೆನಿಸತತಂಮನಾ ೭

ಕುದಿಪುತಿರ್ಪುದು ಮಡು ಪವನಾಶನಾ
ವಿದಿತೆ ಘಾಳಿಗೆ ಜೀವನ ನಾಶನಾ
ಅದರೊಳಗಡಲು ತಾಜಗ ಜೀವನಾ
ಸುಧಿಯ ರೂಪವ ಆಯಿತು ಜೀವನಾ ೮

ಜಲದಲೀ ನೆನಿಯಲು ಮದವಾರಣಾ
ವಲಿದು ಮಾಡಿದ ಬಂಧ ನಿವಾರಣಾ
ಸತಿಸ್ವರೂಪದ ನೀಡಿದ ಮುಕ್ತಿಯಾ
ನಲಿದು ಮಾಡಲಿ ಶ್ರೀ ಹರಿ ಭಕ್ತಿಯಾ ೯

ದಾವ ತೇಲಿಸಿದ ನಚ್ಚಿಲಿ ಗೋಕುಲಾ
ದೇವ ಕಾವನು ನೋಡಿರಿ ಗೋಕುಲಾ
ಜೀವಜಾಲದ ಬೇಡಿ ಪ ಗೋಕುಲಾ
ತಾವಿಹರಿಸುತಿಹನು ಗೋಕುಲಾ ೧೦

ಸ್ಮರಿಸಿ ಗೋಕುಲಲ್ಯಾಕಳ ಕಾವನಾ
ಧರೆಯೊಳೊಪ್ಪುವ ಕಾಟಿಯ ಕಾವಳಾ
ಚರಣ ಗೋಚರ ಮುನಿಮನ ಕಾವನಾ
ಶರಣ ಹೋಗದು ಸಕಲಿ ಕಾವನಾ ೧೧

ಅವನಂಘಿಯ ಸೇರೆ ವನೌಕಸಾ
ಜೀವರಾದರು ಸಾಮದಿವೌಕಸಾ
ಭಾವಿಸಲ್ಕಾರಿಯದಾದಳು ಶ್ರೀರಮಾ
ದೇವನಾಸ್ತುತಿಸಿ ಬಣ್ಣಿಪ ರಾರಮಾ ೧೨

ಮುನಿ ಬಂದನೆಂದು ಸ್ಮರಿಸಲು ಕೃಷ್ಣಾ
ಮನಸ್ನೇ ಹದಿಂದೋಡಿ ಬಂದನು ಕೃಷ್ಣ
ಅನೇಕ ಪದಾರ್ಥದಿಂ ದಣಿಸುತಾ
ಘನಾನಂದ ನೀಡಿದ ಪಾರ್ಥನ ಸೂತಾ ೧೩

ಸುರಗಂಗಿಯ ಪಡದ ದಾವನ ಚರಣ
ಅರಿಮರ್ದನಾಗಿಹ ದಾಪಾಣಿ ಚರಣಾ

ಸರಿಜಾರ ನಖದಾ ತೇಜಕ್ಕ ತರಣೀ
ಪದದೈವವೆಂದಳು ಇಂದಿರೆ ತರುಣಿ ೧೪

ಚರಣಧ್ಯಾಯಿಪದಾವನು ಮಾಧವಾ
ಸುರನರೋರಗ ಪೂಜಿ ಮಾಧವಾ
ಧರಿಯೊಳಾದನು ಬಾಲಕ ನಂದನಾ
ಚರಿತ ಪಾಡಿದ ಮಹಿಪತಿ ನಂದನಾ ೧೫

## ೩೨೯

ಶ್ರೀ ವಧುರಮಣನ ಚರಿತಾಮೃತವನು ಸೇವಿಸಬಾರದೆ ಜಿಪ್ವೆ!
ಆವಾಗು ವಿಷಯಾಸಕ್ತಿಲಿ ಬಾಳುವ ದಾವರಸಜ್ಞದ ಗುಣವೇ ಪ

ಆರತಿಯಿಂದಲಿ ಷಡರಸದನ್ನದ ಸಾರಾಯಕ ಮರುಳಾದೆ ನೀ।
ನರೆರಧರಕ್ಕೊಲಿದೇ ಸುಧಾರಸವೆಂದು ಬಗೆದೇ।
ಧಾರಣಿ ಕಳ್ಳಿಯ ಹಾಲೆಂದೆನಿಸಲು ಗೋರಸದ್ದಂಬಲ ಮರೆದೆ ೧

ಜ್ಞಾನವ ಸಾಧಿಸಿ ಬಹು ಸಾಯಾಸದಿ ನಾನು ಶಾಸ್ತ್ರವ ನೋಡಿ।
ಪ್ರವೀಣತೆಯಲಿ ಮನ ಮಾಡಿ ಧನ
ಮಾನದ ಕಾಂಕ್ಷಿಯ ಕೂಡಿ।
ಅನ್ಯತ್ಯಾಂಗನೆ ಪರಿ ಕುಣಿದಾಡುವ ಹೀನ ಮನುಜರಾ ಪಾಡಿ ೨

ಮರೆದರೆದಾದರೆ ವಮ್ಮಿಗೆ ಭಾವದಿ
ಸ್ಮರಿಸಲು ಶ್ರೀಹರಿಯಾ ಲೋಹ।
ಪರಸವ ಮುಟ್ಟಿದ ಪರಿಯಾ ಧನ್ಯರು ತಮನೆನಿಸುವನರಿಯಾ।
ಗುರುವ್ಹ ಮಹಿತಪಿ ನಂದನು ಸಾರಿದ ಮೊರೆ ಹೋಗು।
ಮೂಜಗ ಧೊರಿಯಾ ೩

## ೩೩೦

ಸಖಿ ಕೇಳೇ ಇನ್ನು ಹರುಷದ ಮಾತಾ।
ಸಕಲ ಜನರಿಗೆ ಆನಂದ ವೀವಾ। ಪ

ಇಂತೆಂದು ಹರಿಯು ನಾನಾಪರಿ ವಿರಹದ।
ಸಂತಾಪ ಮಾತವ ನುಡಿಯಲು ಕೇಳಿ।
ಅಂತರಂಗದ ಕೋಪವಬಿಟ್ಟು ಎದ್ದುಅ।
ನಂತನ ಬಿಗಿದಪ್ಪಿದಳು ಅಂಬುಜಾಕ್ಷಿ ೧

ಲಲಿತಾಂಗಿ ಆಲಿಂಗನವ ನೀಯೇ ಹರಿಗಾಗಾ।
ಒಲಿದು ಉಕ್ಕೇರಿತು ಆನಂದ ಉದಧಿ।
ಬಳಿಕಲ್ಲಿ ಸತಿ ಮಾತಾಡುವ ದೇವ ಶ್ರೀ।
ಲಲನೇಯಾ ಸದ್ಭುವನೆಯಾ ಪೂರಿಸಿದನು ೨

ಈ ಪರಿಯಾಡಿದ ಶ್ರೀ ಹರಿ ಚರಿತೆಯಾ।
ನಾ ಪೇಳಿದುದು ಭಾವ ಭಕುತಿಯಲಿಂದಾ।
ಆ ಪದಿಂದಲಿ ಕೊಂಡಾಡುವ ಮನುಜನ।
ತಾ ಪಾಲಿಸುವಾ ಮಹಿಪತಿ ಸುತ ಪ್ರೀಯಾ ೩

## ೩೩೧

ಸಖಿಬಾರೆ ಸುರಮೋಹನ ನೀಕರತಾರೆ ಪ

ಮಕರಾಂಕನಯ್ಯನ ಕಾಣದೇ ನಾ ನಿಲ್ಲಲಾರೆ।
ಯುಕುತಿಲೇ ತಂದು ನೀತೋರೇ।
ಕ್ಷಣಯುಗವ ನೋಡುವರೇ।
ಪ್ರಕಟದಲಿ ಕಣ್ಣಾರೆ ಕಾಂಬೆನೆಂದು ೧

ದೀನಬಂಧು ಮೊರೆಹೊಕ್ಕವರ ಬಿಡನೆಂದು।
ಮುನಿಜನ ಸಾರುವನೆಂದು।ನಂಬಿದೆನಾಮಕಬಂದು।
ವನಜಾಕ್ಷ ಎನ್ನೊಳು ಕುಂದು।ನೊಡುವ ದುಚಿತವೇನಿಂದು।
ಸನುಮುಖಿಕ ಮಾನವನು ತಂದುಕೂಡಿಸೇನಿಜಾ ೨

ನರಹರಿ ಶರಣಾಗತ ಸಹಕಾರಿ।ಬಿರುದವ ತಾಳಿದಾಪರಿ।
ಮೊರೆಗೇಳಿದನು ದುರಿತಾರಿ।ಉರಗಾರಿ ಚಿನ್ನವನೇರಿ।
ಬಂದ ನೋಡ ದಯಬೀರಿ।
ಗುರು ಮಹಿಪತಿ ಪ್ರಭು ಉದಾರ।ನೆರೆದನೇತಾ ೩

## ೩೩೨

ಸಣ್ಣವನೆ ಘನಲೀಲಾ।ಗೋಪಿ।ಸಣ್ಣವನೆ ಘನಲೀಲಾ ಪ

ಶಿಶುವೆಂದು ಪೂತನಿ ಮೊಲೆಯನು ಕೊಟ್ಟರೆ।
ಅಸುವನು ಹೀರಿದ ಕಾಲ ಗೋಪಿ ೧

ಚರಣವ ಕಟ್ಟಲು ಒರಳೆಳೆದೊಯ್ದಾ।
ಮರಗಳ ಕೆಡಹಿದ ಬಾಲ ೨

ತಂದೆ ಮಹಿಪತಿ ಪ್ರಭು ನರನೆಂಬರೆ।
ಇಂದಿರೆ ಪತಿ ಗೋಪಾಲಾ ೩

## ೩೩೩

ಸ್ಮರಿಸೆನ್ನ ಮನವೇ ಯಾದವ ರಾಯನಾ।
ಸರಸಿಜೊವನುತ ಭಕುತರ ಪ್ರೀಯನಾ ಪ

ವರನಿಗ ಮೋಯಿದವನಾ ಶೀಳಿ ಎಳಹಿದವನಾ।
ಶರಧಿ ಮಥನ ಗೋಸುಗನ ಪೊತ್ತನಾ

ಧರಣಿಯಾ ತನ್ನ ಕೋರೆ ದಾಡಿಲಿರಿಸಿದಿಹನಾ।
ಶರಣ ಪ್ರಲ್ಹಾದನ ಸುಸ್ಮರಣೆ ಗೊಲಿದನಾ ೧

ಭೂಸುರೋತ್ತಮನಾಗಿ ದಾನವ ಬೇಡಿದನಾ।
ಹೇಸದೇ ಕ್ಷತ್ರಿಯರ ಕುಲ ಕೊಂದನಾ।
ವಾಸು-ಕ್ಯಾ ಭರಣನ ಧನುವ ಮುರಿದವನಾ।
ವಾಸವಾತ್ಮಜ ಮಿತ್ರ ದೇವಕಿ ಕಂದನಾ ೨

ಪತಿವೃತೆ ನಾರಿಯರ ವೃತಭಂಗ ಮಾಡಿದನಾ।
ಸಿತ ಹಯವೇರಿದ ಶ್ರೀ ಜಗದೀಶನಾ।
ಪತಿತ ಪಾವನನಾದಾ ಅನಂತಾವತಾರನ।
ನುತ ಗುರು ಮಹಿಪತಿ ನಂದನ ಪ್ರೀನಾ ೩

## ೩೩೪

ಸ್ಮರಿಸು ಮನವೇ ನೀ ಪೂರ್ಣ ಕರುಣಾಸಾಗರ ದೇವನ್ನಾ ಪ

ದಾವ ನಿಗಮಾಗಮ ಪೌರಣಿಕ ತಿಳಿಯದು ಮಹಿಮೆದಾವನ್ನ
ಅವನ ನಖಕಾಂತಿಗೆ ಸರಿ ಪೊಲಿರು ಮಿತ್ರೆಂದು ಹವ್ಯವಾಹನ್ನಾ ೧

ಭಕ್ತಿ ಭಾವಕ ಶಿಲ್ಕಅನುದಿನ ಬಲಿಬಾಗಿಲ ಕಾಯಿದಿಹನಾ।
ಯುಕ್ತಿಲಿ ಬೋಧಿಸಿ ಉದ್ದವನನು
ಶಾಪದಿ ವಿರಹಿತ ಮಾಡಿದನಾ ೨

ರಣದಲಿ ಅರ್ಜನ ಸ್ಯಾಂದನ ಕುದುರೆಗೆ
ಹೋ ಹೋ ಎಂದು ಬಯಿವನಾ।
ಎಣಿಕೆ ಇಲ್ಲದೆ ಪರಿಪರಿ ಯಿಂದಲಿ ಅಡಿಗಡಿಗೆ ರಕ್ಷಿಪನ್ನಾ ೩

ಭಗದತ್ತನು ಗಜವೇರಿ ಬಾಣವ ಬಿಡಲಾಗಳೆ ಉರುವಾತನ್ನಾ ।
ಗೋಪಾಲರ ರಕ್ಷಿಸಲೋಸುಗ ಬೆರಳಲಿ ಗಿರಿ ಎತ್ತಿದನ್ನಾ ೪

ಏಳದೆ ಗರ್ವದಿ ಕುಳಿತರೆ ದುರ್ಯೋಧನನ ಕೆಳಗೆಡಹಿದನ್ನಾ।
ಶ್ರೀಲಲನೆಯ ಮನೋಭಾವನೆ ಪೂರಿತ
ಮಹಿಪತಿ ನಂದನ ಜೀವನಾ ೫

## ೩೩೫

ಸರಸಿಜಾಸನೆ ಉಚಿತವಲ್ಲದು ಬರಿದೆ
ನೀ ಮುನಿದು ಇಳೆಯೊಳಗೇ।
ಸುರಮುನಿ ಜನಪಾಲನ ಮನದಲಿ ಬಂದದಿ
ನೆರೆಯದೇ ಸಾರುವದೀಗ ಪ

ನಿನ್ನಯ ಒಪ್ಪುವ ಮಾರ್ಗವ ನೋಡುತ।
ಮುಚ್ಚನು ಕುಡಿಗಂಗಳ ಯವಿಯಾ।
ಪನ್ನಗವೇಣೀ ನಿನ್ನವಿಯೋಗ ದುಗುಡದೀ।
ಕುಳಿತನುಡಗಿ ಅವಯವ ಸೋಹ್ಯಾ ೧

ನಿನ್ನ ಕಾಣುವೆ ನೆಂಬಂಥ ವಾಣಿಯಲೆದ್ದು ಲಜ್ಜಿಸಿ
ಹಿಂದಕ ಕಾಲೆಳೆದಾ।
ಘನ್ನ ವಿರಹ ತಾಪದ ದೆಶೆಯಿಂದಲಿ ಕಿಡಿ ಕಿಡಿ
ಜ್ವಾಲಾಂಗನು ಆದಾ ೨

ಕಪಟದಿ ಬಂದು ನೋಡುವೆ ನಿನ್ನೆನುತಲಿ
ಯಾಚಕ ರೂಪತಾಳಿದನು।
ವಿಪುಳಾಂಗ ತಾಳಲಾದರದೇ ನಿನ್ನ ಕುವರಿಯ
ತೊರೆಂದೆ ಚಂದನು ಶರಧಿಯನು ೩

ದಿನದೊಳಗರಗಳಗಿ ಗಮಿಸದು
ಯನುತಲಿ ವನದೋಳು ಪೋಗಿ
ಹೊತ್ತುಗಳೆವಾ।ಮನಿ ಮನಿ ಪೊಕ್ಕು
ಗೋಕುಲದಲಿ ನಿನ್ನನು
ಅರಸುತಿಹನು ಪಾವನ ದೇವಾ ೪

ಕ್ಷತ್ರೀಯರು ನಿಷ್ಠುರರೆಂದು ನಿನ್ನಮ್ಯಾಲಿನ
ಕೋಪದಿ ಕಂಡ ವ್ರತವಳದಾ।
ಅತಿತವನೋಡದೇ ತಾನಾಗಿ ಬಂದನು
ಹಯವೇ ನೋಡೆ ಜೀವನ ಜಗದಾ ೫

ಕುವಲಯ ಲೋಚನೆ ಕೂಡಿದ ನಿಮ್ಮಿರ್ವರ
ಹಾಸ್ಯದ ಮುಖವನು।
ಜವದೀ ಅವನಿಲಿ ಕಂಡೆನು ಧನ್ಯಧನ್ಯಾದೆನು
ಮಹಿಪತಿ ಸುತ ಪ್ರಭುವಿನ ದಯದೀ ೬

## ೨೨೬

ಸರಸೀಜಾಂಬಕಿ ನೀರೇ ಎನಗ।ತ್ವರತದಿ ತೋರೆ।
ಸರಸಿರುಹ ವಂದ್ಯನಾ ಪ

ಪಲ್ಲವಧರದಲಿಂದಾ।ಕೊಳಲು ನಾನಾ ಪರಿಯಾ।
ಬಲ್ಲತನದಲಿ ಊದಲು।
ಹುಲ್ಲೆಯಂದದಿ ಮನಸು।ಮರಳು ಗೊಂಡಾಥನಿಗೆ।
ಭುಲ್ಲವಿಸುತಿಹುದಮ್ಮಾ ನಮ್ಮಾ ೧

ಕೈರವ ಸರ್ವೋದಯವ ಕಂಡು।ಮುದದಿಂದ।
ಚಕೋರ ಸಂತೋಷಿಸುವಂತೆ।

ನೀರಜಾನನ ನೋಡ ಲಕ್ಷಣದಿ ನೋಟಕ।
ಪಾರಣೆ ಯಾಗುದಮ್ಮಾ ನಮ್ಮಾ ೨

ಪರಮ ಜ್ಞಾನಾಂಗನೆಒಂದೊಂದು ಘಳಿಗೆ ವತ್ಸರ।
ದಂತೆ ಪೋಗುತಿಹುದು।
ತರಿತ ಮಹಿಪತಿ ನಂದ।ನೋಡಿ ಯನನು ತೋರೆದಡೆ।
ಹರನ ನಿಲ್ಲದಮ್ಮಾ ನಮ್ಮಾ ೩

## ೩೩೭

ಸಲಹಯ್ಯಾ ನಿನ್ನ ಸಾರಿದೇ।ಶ್ರೀ ರಮಣನಾ ಪ

ಮರುಹು ಮರಸಿ ಎನ್ನ।ಅರಹು ಕೊಡಿಸಿ ನಿನ್ನಾ।
ಸ್ಮರಣೆಯೊಳಿಡಬಾರದೇ ೧

ನಿನ್ನ ಚರಣವದೋರಿ।ಘನದಯವ ಬೀರಿ।
ಧನ್ಯನ ಮಾಡಬಾರದೇ ೨

ತಂದೆ ಮಹಿಪತಿ।ನಂದನ ಸಾರಥಿ।
ಇಂಧುದ್ಧರಿಸಬಾರದೇ ೩

## ೩೩೮

ಸಲಹು ಸಲಹು ಸಲಿಲಜನಯನಾ।ಎನ್ನಾ।
ಇಳೆಯೊಳು ಮೊರೆಯ ಹೊಕ್ಕಿಹೆ ನಿನ್ನಾ ಪ

ಕರುಣ ನೋಟಗಳಿಂದಲಿ ನೋಡಿ।ಸರ್ವ।
ಭಾರ ಒಪ್ಪಿಸಿಕೊಂಡು ನಿಜ ನೀಡಿ।

ದಾರಿದೋರುವ ಸುಮತಿಯ ನಿಲಿಸಿ।ಅತಿ।
ತರಳನೆನುತ ಭಯವನೆ ಹರಿಸಿ ೧

ಹರಿದುರಿತದ ಬಂಧನ ಬಲಿಯಾ।ತವ।
ಚರಣದ ಭಕುತಿ ಕೊಡಲಿ ದೊರಿಯಾ।
ಹರಿಗುಡದರಸನ ದಶಮುಖದಾ ಸಂಗ।
ಲಿರಿಸು ದಾಸರ ಸಗಟವನೊದೆದಾ ೨

ತ್ರಿಪುಟಿಯ ಸಂಗ ಬಿಡಿಸು ಮನದಿ।ಎನ್ನ।
ವಿಪುಳ ವಾಜಿಯೊಳಿರಿಸು ಧೃಡದಿ
ಕೃಪೆಯಲಿ ಮಹಿಪತಿ ಸುತ ಪ್ರಾಣಾ।ಎನ್ನ।
ಅಪರಾಧ ಕ್ಷಮಿಸಿ ಹೊರಿಯೊ ಪೂರ್ಣಾ ೩

## ೩೩೯

ಸಲಹುದ್ಯೆ ಸಲಹುದ್ಯೆ ಸಲಹುದ್ಯೆ ಎನ್ನಾ।
ನೀ ಸಲಹುದ್ಯೆ ಪ

ಖಚರಜನುತ ರಜನೀಚರ ಕುಲಾರಿ।
ಸುಚರಣಾರಾಧಿಪಾನುಚರ ಸಹಕಾರಿ ೧

ಕುಮರ ಗೋಪಿಯ ಅಘತಮರವಿ ಶೌರಿ।
ಅಮರೇಶಾ ಶ್ರೀ ಮುಖಾಬ್ಜ ಭ್ರಮರ ಶ್ರೀ ಹರಿ ೨

ಪರಮ ಸುಖದಾಯಕ ಗಿರಿವರಧಾರೀ।
ಗುರು ಮಹಿಪತಿ ಜನ ಪೊರೆವ ಉದಾರಿ ೩

## ೩೪೦

ಸಲಹು ಸಲಹು ಹರಿಯೇ ದಯದಿಂದಲಿ।
ಇಳೆಯೊಳು ನಾನತಿ ದೀನನು ಪ

ಸನ್ಮತಿದಾಯಕ ಸನ್ಮನ ಮುನಿಜನ।ಸನ್ಮತ ಮಾ ಮನೋಹಾರಿ।
ಮನ್ಮಥನಯ್ಯನೇ ಉನ್ಮತ ಸುರಹರ।
ಚಿನ್ಮಯ ರೂಪ ಉದಾರಿ ೧

ವಾರಣ ಲೋದಗಿ ನಿವಾರಣ ಭಯದ
ನಿವಾರಣ ಮಾಡಿದೆ ಶೌರಿ।
ವಾರಣ ಹರಣ ಸಹದಾರುಣ
ವಲ್ಲಭ ಕಾರುಣ ಸುರಸಹಕಾರಿ ೨

ಅಹಿಪತಿ ಶಯನ ಸು ಅಹಿರಿಪುವಾಹನ ।
ತುಹಿನ ಕಿರಣ ಕುಲಮೌಳಿ।
ಮಹಿಪತಿ ನಂದನ ಹೃದಯ ಸರೋವರ।
ಹಂಸಪರಮ ವನಮಾಲಿ ೩

## ೩೪೧

ಸಲಹು ಸಲಹು ಸಲಿಲಜಾಂಬಕ ಸಲಹು ತ್ರಿಭುವನ ಜೀವನಾ।
ನಳಿನ ಸಂಭವ ಜಲಧರೇಂದ್ರಾವಳಿ ವಿನುತ ಪದಪಾವನಾ।
ಹೊಳೆವ ಭೂಷಣ ಚೆಲುವಿಕೆಯ ಘನ
ನೆಲಿಗೆ ಪಡೆದಿಹೆ ಕಾವನಾ।
ಸುಲಭನಾಗ್ಯತಿ ಸಲಿಸುತಿರುತಿಹ।ಒಲಿದು ಭಕ್ತರ ಭಾವನಾ ೧

ಮೊರೆಯ ಹೊಕ್ಕರ ಕರವ ಬಿಡನೆಂ ।
ದರಿತು ಶರಣವ ಬಂದೆನಾ।

ಧರೆಯೊಳೆನ್ನಯ ಮರೆದ ತರಳತೆ ।
ಕೊರತೆ ನೋಡದೆ ಹಿಂದಿನಾ।
ಸ್ಮರಣೆ ಚಿಂತನೆ ತರುಣೋಪಾಯದ।
ಅರಹು ಮತಿಯಲಿ ಮಂದನಾ।
ಹರಿಯ ಸಾರ್ಥಕ ನರಜನುಮವನು ।
ಭರದಿ ಮಾಡು ನೀ ಇಂದಿನಾ ೨

ಸತಿಯ ಪತಿ ಸಖಿಗತಿಗೆಳೆಯ ಸುತ।ಪಿತನ ಪರಿಯಲಿ ಲಾಲಿಸಿ।
ಶೃತಿ ವಿಹಿತ ತವ ಸ್ಮೃತಿಸ್ತವ ಪಾಡುತಿಹೆ ನೆರೆಂಯಲಿ ಬಾಳಸೀ।
ಹಿತವನರಿಯದ ಮತಿ ವಿಹೀನೋ।ನ್ಮತರ ಸಂಗವ ಜಾಳಿಸೀ।
ಪತಿತನು ದ್ಧರಿಸ್ಸತುಳ ಮಹಿಪತಿ । ಸುತ ಪ್ರಭುವೇ ದಯಪಾಲಿಸಿ ೩

## ೩೪೨

ಸಿರಿದೇವ ನಮ್ಮ ನಿದೈವನು ಶರಣರಕ್ಷಕವಾವನು ಪ

ಪಾಲವು ಬೇಡುತ ಹಸುಶಿಶುತಾನತಿ ।
ಆಲಯದೊಳುಭಲವಿಡಿದರೆ।
ಕೇಳುತ ದಯದಲಿ ಬಂದು ನೆಗೆದುಕೊಂಡು
ಪಾಲಗಡಲದೊಳಗಿಟ್ಟೀ ಹಾ ೧

ವರದ ಮದದಿ ಭಸ್ಮಾಸುರ ಬೆನ್ನಟ್ಟಿ।ಗಿರಿಜೇಶನ ಪೀಡಿಸುತಿರೇ
ಭರದಿಂದೊದಗಿ ಬಂದು ಮೋಹಕ ರೂಪದಿ।
ದುರುತಳನ ಭಸ್ಮವ ಮಾಡಿದಾ ೨

ಅಖಿಳ ದೊಳಗೆ ಅರಾರಾಧಿಸುವರು।
ಭಕುತಿಯಂದದಿ ತನೊಲಿವನು
ಪ್ರಕಟಿದಿ ಮಹಿಪತಿ ನಂದನಮುಖದೊಳು
ಸಕಲಚರಿತೆಯನು ನುಡಿಸುವಾ ೩

## ૩೪૩

ಸಖಿಸು ವರದ ಕೊಂಡು ಉಂಡು ನಾಮಾಮೃತವನು ಪ

ಅಂಬರಲಿ ಧೃವ।ಕುಂಬಿನಿಲಿ ಜಾಂಬವ।
ಅಂಬುಧಿಯೊಳು ವಿಭೀಷಣನು ೧

ಸುತಳದಿ ಬಲಿನೋಡಿ ನುತ ಪ್ರಹ್ಲಾದೊಡಗೂಡಿ।
ಅತಿಶಯಾನಂದದಿ ತಾನು ೨

ಗುರು ಮಹಿಪತಿಸುತ ಗರುಹಿದ ನಿಜಹಿತ।
ಹರಿಶರಣರ ನೋಡೋ ನೀನು ೩

## ૩೪೪

ಸುಮ್ಮನೆ ದೋರ್ಕೈಯ್ಯಾ । ರಮ್ಮೆಯ ಕರದಲಿ ।
ಒಮ್ಮೆಗೆ ಅಗಲದೆ ನಮಿಸಿಕೊಳುತಿಹ ಪಾದಾ ಪ

ಇಳೆಯ ನೆರೆ ಬೇಡುವ ನೆವದಲಿ ಬಂದು ಬಲಿಗುದ್ಧರಿಸೆಂದು ।
ಹಲವು ಕಾಲದಿ ಶಿಲೆಯಾದಂಗನೆಗೆ ಸತಿಗತಿ ನೀಡಿದ ಪಾದಾ ೧

ಉರಗಾಶರ ಬರೆ ಉಂಗುಟ ಲೋತ್ತಿನರ ನುಳಹಿದ ಕೀರ್ತಿ ।
ಮರುಳ ತನದಿ ಮನ್ನಿಸದ
ಸುಯೋಧನನುರುಳಿಸಿಗೆಡಹಿದಾ ಪಾದಾ ೨

ತಂದೆ ಮಹಿಪತಿ ಪ್ರಭುದಯದಿಂದಲಿ ಎಂದೆಂದು ।
ಮುನಿಜನ ನಯನ ಚಕೋರರ ಚಂದಿರವಾಗಿಹ ಪಾದಾ ೩

## ೩೪೫

ಸಂಗಮಾಡೆಲೋ ಶ್ರೀಹರಿ ದಾಸರಾ
ಹಿಂಗಿ ಹೋಹುದು ತಾಭವದಾಸರಾ
ಮಂಗಳ ಮಂಗಳಾತ್ಮಕ ಕೈಗೂಡಿ ಬಾಹನು
ಅಂಗಜ ಜನಕ ಸಚತುರ್ಬಾಹನು ೧

ಅವರ ವಾಕ್ಯ ಸುಧಾರಸ ಪಾನವಾ
ಶ್ರವಣದಿಂದಲಿ ಮಾಡೆಲೊ ಪಾನವಾ
ಭವದ ಜನ್ಮ ಜರಾಲಯ ಜಾರುವೀ
ತವಕದಿಂದ ಚಿತ್ಸುಖ ಸೇರುವಿ ೨

ಹಲವು ಸಾಧನಭರಿಗೆ ಬೀಳದೇ
ಕಲಿತ ವಿದ್ಯತ್ವ ಗರ್ವವ ತಾಳದೇ
ಬಲಿದು ಭಕ್ತಿಯ ಹೋಗದೆ ಸಿಂತರಾ
ನೆಲಿಯ ಕೇಳೆಲೋಭಾವದಿ ಸಂತರಾ ೩

ಮರಹು ಕತ್ತಲಿವೆಂಬುದು ಹಾರಿಸೀ
ಅರಿಗಳಾರರೆ ಸಂಕಟ ಹಾರಿಸೀ
ಅರಹು ಭಾಸ್ಕರ ತೋರುವ ಬೋಧಿಸಿ
ಹೊರವ ಸಜ್ಜನ ಸಂಗವ ಸಾಧಿಸಿ ೪

ನೆಲಿಯ ಹೊಂದುವ ಪರಿಯನಿಲ್ಲದೇ
ಸುಲಭಸಾಧನ ತೋರಿಪರಲ್ಲದೇ
ಬಳಲುವಾಬಾಹಳ ಸಾಪೇಳರು
ಬಲಿದು ಪಾಯವ ಸಂತರ ಕೇಳರು ೫

ಹರಿಕಥಾ ಮೃತಸಾರಸ ಪೇಳುತಾ
ದುರಿತ ದುಷ್ಕೃತ ತರುಗಳ ಶೀಳುತಾ
ಪರಮ ಭಕ್ತಿಯ ಭಾಗ್ಯವ ಕುಡುವರು
ಅರಿತು ಸಂತರ ಸಂಗವ ಬಿಡುವರು ೬

ಏಳು ಭೂಮಿಕಿ ಮಾರ್ಗವ ತೋರಿಸಿ
ಮಾಲ ಚಿತ್ಸುಖ ಮಂದಿರ ಸೇರಿಸಿ
ಕಾಲಕರ್ಮದ ಕೋಟಲೆ ವಾರಿಸೀ
ಪಾಲಿಸುವರು ಭವದಿಂತಾರಿಸಿ ೭

ಸಂಗದಿಂ ಚಂದನಾಹದು ಪಾಮರಾ
ಜಂಗಮೊತ್ತಮನಾಗನೇಪಾಮರಾ
ಅಂಗದಿಂಮಾಡು ಸಂತರ ವಂದನಾ
ಇಂಗಿಥೇಳಿದ **ಮಹಿ**ಪತಿ ನಂದನಾ ೮

## ೩೪೬

ಹರಿಕೃಪೆಯೋಗ್ಯ ಮುಮುಕ್ಷನು
ಧರಿಯೊಳು ಕಾಂಬ ಪರೋಕ್ಷನು ಪ

ಹಿಂದಿನ ಪುಣ್ಯದಿ ಬಂದೆನ್ನೈ ದೇಹದಿ
ಮುಂದಾವಗತಿಯಂದು ಮುಮುಕ್ಷನು
ನೊಂದು ಮನದಿ ಪಶ್ಚಾತ್ತಾಪ ವಿರಕ್ತಿಯ
ಹೊಂದಿದ ದಡದಲಿ ಮುಮುಕ್ಷನು
ನಿಂದು ವಿವೇಕದಿ ಪರಮ ಶುಭೇಚ್ಛವ
ಛಂದದಿ ಹಿಡಿವನು ಮುಮುಕ್ಷನು
ಇಂದಿರೆ ಪತಿಗೋವಿಂದ ಮುಕ್ಕುಂದ ಸಲ
ಹೆಂದು ಮೊರೆಯಿಡುವ ಮುಮುಕ್ಷನು ೧

ಅಷ್ಟಮದ ಮುರಿದು ಆರರಿಗಳ
ಇಟ್ಟಣಿ ಗಿಡಿಸುವ ಮುಮುಕ್ಷನು
ದುಷ್ಟತನ ಬಿಡಿಸಿ ಮನನಿನ ಮಲ್ಲನೆ
ಕಟ್ಟಲೆಳಿರಿಸುವ ಮುಮುಕ್ಷನು

ನಿಷ್ಠೆಯಿಂದಲಿ ಗುರುಚರಣ ವಭಕುತಿಲಿ
ಮುಟ್ಟಿಭಜಿಸುವನು ಮುಮುಕ್ಷನು
ಇಷ್ಟಸ್ವಧರ್ಮಪಕರ್ಮಗಳನ್ನು ಕಾಮ್ಯವ
ಬಿಟ್ಟು ನಡೆಸುತಿಹ ಮುಮುಕ್ಷನು ೨

## ३೪೭

ಹರಿದಾಸನವನೇ ನೋಡಿ।
ಬರೇ ವೇಷ ದೋರಲ ಬೇಡಿ ಪ

ಒಂದರ ಘಳಗೆಯ ಕುಂದದಿ ಕಳೆಯಾ।ಮು।
ಕುಂದನ ನಾಮವ ಛಂದದಲಿಹ ೧

ಅನ್ಯರ ದೂಷಿಸಿ ತನ್ನನೇ ಹೊಗಳನು।
ಸಣ್ಣ ದೊಟ್ಟದರಲಿ ಘನ್ನರಿತಿಹ ೨

ಹುಲ್ಲ ಮನುಜರಿಗೆ ಹಲ್ಲವದೆರಿಯದೆ।
ಫುಲ್ಲನಾಭನಪದದಲಿಹ ಮನ ३

ಮುಂದಿನ ಹಾನಿಯು ಇಂದಿವೆ ತೋರಲಿ।
ಮುಂದಿಟ್ಟಟಡಿಯನು ಹಿಂದಕೆಳೆಯ ೪

ನುಡಿವದು ಸಲಭ ನಡೆವುದು ದುರ್ಲಭ।
ನಡೆನುಡಿಯಲಿ ಸಮಧೃಡಗಂಡಿಹ ೫

ಹಂಗವಳಿದು ಸತ್ಸಂಗದಿ ಶ್ರವಣದಿ।
ಕಂಗಳ ಸಿರಿಸುಖ ಮಂಗಳಲಿಹ ೬

ತಂದೆ ಮಹಿಪತಿ ನಂದನ ಪ್ರಭುದಯ।
ದಿಂದ ಭವಾಲಯ ಸಂದ ಜರಿದ ೭

## ೩೪೮

ಹರಿಯ ನೆನಿಯೋ ಹರಿಯಾ । ಹರಿಯಾ ನೆನಿಯೋ
ಹರುಷದಿಂದಲಿ ಮನವೇ । ಪ

ಹರಿವ ಭವ ಜಲದಿಂದಲಿ ದಾಟಿಸುವನು
ಕಣ್ಣವರಿಸುತಲಿದ್ದು।ಅಚ್ಯುತಾನಂತ ಹರಿ।
ಯನ್ನದೆವೆ ಕಂಡ ಚಿಂತೆಯನು ಮಾಡಿ।
ಬನ್ನ ಬಡುತಲಿ ಉದರ।ಧಾವತಿಯವಳಗಾಗಿ।
ದಣ್ಣನೇ ದಣಿದು ಬಂದು ಬಯಿಗೋರಗುವೇ ೧

ಬಳ್ಳಿನೊರಳಗ ತೊಡರಿದ।ಕಾಲಿನಂತೆ ಭವಾ
ತಳ್ಳಿಯೊಳುಸಿಲ್ಕಿ ಬಳಲುತಾ ಗುಂದುತಾ।
ನಿಲ್ಲದೆವೆ ತಿರುಗುತಿಹೆ ಸಾಧು ಸಂಗಕಬರಲು
ಯಳ್ಳಿಸಿತು ಅವಕಾಶ ಕಾಣೆ ನಾನು ೨

ಕೆರೆಯ ನೀರನು ಕೆರೆಗೆ ಚೆಲ್ಲಿ।ವರವಪಡಿಯಲಿಕ್ಕೆ
ಭರದಿಂದ ಬಂದ ಅಲತ್ಯ ನೋಡ್ಯಾ।
ಹರಿನಾಮ ಹರಿಗರ್ಪಿಸಿ ಗತಿ ಪಡಿಯಲೊಲ್ಲಿ
ಹರ ಹರಾ ನಿನಗೆಂತು ಮತಿ ವದಗಿತೋ ೩

ಹಾಡಿ ಕೊಂಡಾಡಿದರ ಹರಿನಾಮ ನಾಲಿಗ್ಗೆ
ಬಾಡಿಗೆಯು ಬೀಳುವದೋ ನಾನರಿಯೆ ನೋ
ಮೂಢ ಪಾಮರನೆಮರ ಹುಟ್ಟಿ ಮರಬಿದ್ದಂತೆ
ನೋಡು ನರ ದೇಹದಲಿ ಬಂದಾಯಿತು ೪

ಹಿಂದಿನಪರಾಧಗಳಯೇನಾದರಾಗಲಿ
ಮುಂದೆ ಇನ್ನಾರ ಸ್ವಹಿತ ವಿಚಾರಿಸೋ
ತಂದೆ ಮಹಿಪತಿಸ್ವಾಮಿ ದ್ವಂದ್ವ ಚರಣಕ ಹೊಂದಿ
ಇಂದಿರೇಶನ ವಲಮೆ ಪಡೆದು ಸುಖಿಸೋ ೫

## ೩೪೯

ಹರಿಯೇ ಗತಿ ಭರ್ತನು ಜಗಕೇ।ನರ
ಹರಿಯೇ ನೆಂಟ ಭಕುತ ಜನಕೇ ಪ

ಆರು ಸಲಹುವರ ನಾಥ ದೀನಜನ।
ಘೋರಪಾತಕಿ ಬಧಿರಾಂಧರನು।
ವಾರಿಜಾಸನ ಮುಖ್ಯ ದೇವತೆಗಳಲಿ।ವಿ
ಚಾರಿಸೆ ಅನ್ಯದೊರೆಗಳುಂಟೆ ೧

ಅವನ ವಶ ಮರುತಾಗ್ನಿ ಕಮಲ ಬಾಂ
ಧವ ವರುಣರು ಮೃತ್ಯುಗಳೆಲ್ಲ।
ತಾವಂಜುತ ಮೀರೆದಪ್ಪದೆ ಆಜ್ಞೆಯ।
ಭಾವಿಸೆ ನೇಮದಲಿರುತಿಹರು ೨

ಅವನ ರೋಮರೋಮದಿ ಬ್ರಹ್ಮಾಂಡವು ।
ಅವುದುಂಬರ ಫಲದಂತಿಹುದು ।
ಭುವನದಿ ಗುರುಮಹೀಪತಿ ಸ್ವಾಮಿಯು ಜಗ
ಕಾವ ಕೊಲುವ ನಿರ್ಮಿಸುತಿಹನು ೩

## ೩೫೦

ಹರಿ ನೀನೆವೆ ಸರ್ವ ಚೇತನ ಧೃತಿಯ ಸಕಲವೇ ।
ಧರಿಯೊಳು ನಾನೆಂಬುವ ಗುಣವೇ
ವರಶೃತಿ ನೇಹನಾ ನಾಸ್ತಿಯಂದು ।
ಸಾರುವದಿದಕನು ಮಾನವೇ ಪ

ಬಯಲೊಳು ಪುಟ್ಟದ ಪರಿಪರಿನಾದದ ।
ಹೊಯಿಲಿನ ಮಂಜುಳ ಶಬ್ದವಾ ।

ಬಯಲದಿ ಕೇಳಿತಲ್ಲಿನವ ಹೊಂದುವಾ ।
ಬಯಲಾಧಾರ ನೀನಲ್ಲವೇ ೧

ಸೃಷ್ಟಿಯೊಳಗ ಕಮನೀಯ ಲಾವಣ್ಯದು ।
ತೃಷ್ಟತರ ಮೋಹನ ರೂಪವಾ ।
ದೃಷ್ಟಿಲಿ ಕಾಣುತ ಸುಖದೋಳಗಾಗುವ ।
ದೃಷ್ಟಸ್ವ ತೇಜ ನೀನಲ್ಲವೆ ೨

ಕುಂದ ಕಮಲ ಪಾರಿಜಾತ ಮಲ್ಲಿಗೆ ಮು[illegible] ।
ರಂಗದೊಳಗ ಸುಳಿದಾಡುತ ।
ಮಂದ ಮಾರುತ ಬಂದು ಸೋಕಲು ನಲಿವಾ ।
ಸುಂದರ ರೂಪನು ನೀನಲ್ಲವೆ ೩

ರಸಭರಿತ ಬೇರೆ ಬೇರೆ ದೋರುತಲಿಹಾ ।
ಅಸಮತೆರೆದ ಪದರ್ಥವನು ।
ರಸನಾದಿ ಕೊಂಡು ಸವಿಗೆ ತಲೆದೂಗುವಾ ।
ಕುಶಲ ಭೋಕ್ತನುನೀನಲ್ಲವೇ ೪

ಚೆನ್ನಾಗಿ ಕಸ್ತೂರಿ ಪುಳಕವ ಕೂಡಿಸಿ ।
ಪನ್ನೀರವನು ಮೇಲೆದಳಿದು ।
ಉನ್ನತ ಚಂದನ ಲೇಪಿಸೆ ಸುವಾ ।
ಸನೆ ಕೊಂಬುವ ನೀನಲ್ಲವೇ ೫

ಅಷ್ಟದಳ ಕಮಲದಳ ಗದ್ದುಗಿಯೊಳು ನಿಂದು ।
ಅಷ್ಟಮ ಸ್ಥಳಗಳ ಮುಟ್ಟಿಸಿ ।
ನೆಟ್ಟನೆ ಮುಖದೊಳು ಸವಿಸವಿ ಮಾತವ ।
ಸ್ಪಷ್ಟದಿ ನುಡಿಪ ನೀನಲ್ಲವೇ ೬

ಭಜಕನ ಮಾಡಿ ಸೌಮ್ಯತನದಿ ಕರದಿಂದ ।
ರಜತಮ ವಿರಹಿತ ದಾನವನಾ ।
ದ್ವಿಜರಿಗೆ ಕುಡಿಸಿ ಅದರಶ್ರಯ ಕೊಂಬುವ ।
ನಿಜಶಯ ಕರ್ತನು ನೀನಲ್ಲವೇ ೭

ಪವನಭ್ರವ ನಡೆಸುವಪರಿಚರಣದಿ ।
ಜವದಿ ಸುಕೇತ್ರ ಯಾತ್ರೆಯಾ ।
ಬಪರದಿ ಮಾಡಿ ಪುಣ್ಯ ಅರ್ಪಿಸಿ ತೊಂಬಾ
ಭುವನ ಪಾವನ ನೀನಲ್ಲವೇ ೮

ರಸನುಂಡು ಕಬ್ಬ ಹಿಪ್ಪಿಯುಗುಳುವಂತೆ ।
ಅಸಮತೆ ರಚಿಸಿ ಸರ್ವಾಂಗರ ।
ರಸವಿತ್ತು ಮಲವಘ ಮುಖದಿಂದ ಪವನದಿ ।
ಬಿಡಸುವನು ನೀನಲ್ಲವೇ ೯

ಅಂಗನೆಯರ ಧೃಡಾಲಿಂಗನವನು ಮನ।
ದಿಂಗಿತದಂದದಿ ಗೈಯ್ಯಲು ।
ಅಂಗಸಂಗದ ಲೋದಗುವ ಭೋಗಿಪ ।
ಅಂಗಜ ಜನಕ ನೀನಲ್ಲವೇ ೧೦

ಯಂತ್ರವಾಹಕ ನಂದದಿ ಜಗನಿರ್ಮಿಸಿ ।
ಚಿತ್ರ ವಿಚಿತ್ರವ ದೋರುವಾ ।
ಅಂತ್ರ ಬಾಹ್ಯವ್ಯಾಪಕ ಮಹಿಪತಿ ಸುತ ಪ್ರಭು ।
ಸೂತ್ರಧಾರಿ ನೀನಲ್ಲವೆ ೧೧

## ೩೫೧

ಹರಿಪಾದವ ನಂಬಿರೋ । ಮನುಜರೆಲ್ಲ ।
ಹರಿಯಲ್ತೆ ಹರಿಗರ್ವ ಹರಿಸಿ ಗೋಕುಲದೀ । ವಿ ।
ಹರಿಸಿ ಹರಿಜಳಲ್ಲಿ ಹರಿಮೆಟ್ಟಿನಲಿವಂಥ ಪ

ಸೋಮಜ ಭವನ ಪದಾ । ಸೇವೆಗೆ ಮೆಚ್ಚಿ ।
ಸೋಮ ಪುತ್ರಗೆ ನೀಡಿದಾ ।
ಸೋಮನಾ ಭಂಡಾರಿಯನೆ ಮಾಡಿ ದಯದಿಂದ ।
ಸೋಮಜಾನನಾ ಪೂರ್ಣ ಸೋಮಚಕೋರವಾ ೧

ಕಮಲಾರಿ ಧರ ಸೇವ್ಯನು । ಶಂಖ ಚಕ್ರ ।
ಕಮಲಾಗದಾಧರನು ।
ಕಮಲಾಂಘ್ರೀಯನಖ ಕಮಲದಿ ಜನಿಸಿದಾ ।
ಕಮಲದಿ ಮೂಜಗ ಕಮಲಗತಿಯ ನೀವ ೨

ಗೋಪೆಸರನ ಪಿತನ । ಉದ್ಧರಿಸಲು ।
ಗೋಪಾದ ತ್ರಯ ಕೃತನ ।
ಗೋಪಾದಿವಿನುತ ಮಹಿಪತಿಸುತ ಪ್ರಭು ।
ಗೋಪಕೋಟಿ ತೇಜ ಗೋಪಾಲ ನೆನಿಸುವ ೩

## ೩೫೨

ಹರಿ ಪರಮಾನಂದಾ ಗೋವಿಂದಾ ಪ

ಸುರಜನ ಪಾಲನ ಅಸುರ ವಿದಾರಣ ।
ವರಯದು ಕುಲನಿಧಿ ಚಂದ್ರಾ ೧

ಅಜಮಿಳ ತಾರಣ ಅಹಲ್ಯೋದ್ಧಾರಣ ।
ಅಜಭವನನುತ ಶ್ರೀ ಮುಕುಂದಾ ೨

ಮಹಿಪತಿ ನಂದನ ಅಹಿತ ಸಂಹಾರಣ ।
ಸ್ವಹಿತದಾಯಕ ಗೋಪೀ ಕಂದಾ ೩

## ३೫३

ಹರಿ ಭಜನೆಯ ಮಾಡು ಮನವೇ ಪ

ಚರಿತವ ಕೇಳಿ ಹರುಷದಿ ಬಾಳೀ ।
ಸ್ಮರಿಸುತ ಜಿಹ್ವದಿ ವನಮಾಲಿ ಮನವೇ ೧

ತನುಧನವಾಣೀ ಇಂದ್ರಿಯ ಶ್ರೇಣಿ ।
ಘನಸೇವೆಲಿಟ್ಟು ಕಮಲ ಪಾಣಿ ಮನವೇ ೨

ಗುರುಮಹಿಪತಿ ಪ್ರಭು ಧರಿಯೊಳಿದು ।
ಇಹಪರ ಗತಿಮನವೇ ೩

## ३೫೪

ಹರಿಯಾ ಪಾದಕ ಶರಣೆನ್ನಿ ।
ಸ್ಮರಣೆಗೆ ಹರಿಯನು ಕರೆತನ್ನಿ ಪ

ಅವನ ನಾಮವನೆನಿಯಲು ಭಕುತಿಲಿ ।
ಭವಭಯ ಮೂಲದಿ ನೀಗುವದು ।
ಆವಾಗ ಕಂಗಳ ಸಿರಿಸುಖ ದೋರುತ ।
ಜೀವನ ಗತಿನೆಲೆ ಹೊಂದುವದು ೧

ಸಿಕ್ಕಿತ್ತು ನರದೇಹ ದೊರಿಯಲು ಪುಣ್ಯದಿ ।
ಸರ್ಕನೆ ಸಂತರ ಮೊರೆಹೊಕ್ಕು ।
ದಕ್ಕಿಸಿಕೊಳ್ಳದೇ ಬೋಧಾಮೃತವನು ।
ಪುಕ್ಕಟೆ ದಿನವನು ಗಳೆವರೇ ೨

ತನುವಿದು ನೋಡಲು ನೆಚ್ಚಿಕೆ ಇಲ್ಲದ ।
ಮನಿಗಂಧರ್ವದ ಪುರದಂತೆ ।
ತನುವಿಗೆ ಹತ್ತಿದ ಸಂಸಾರ ಸುಖ ।
ಕನಸಿನ ಭಾಗ್ಯವ ತೆರೆದಂತೆ ೩

ಇದರೋಳು ನಾ ನನ್ನದು ಎಂದೆನುತಲಿ ।
ಮದಮತ್ಸರವಾ ಬಗೆಯಲಿ ।
ಕುದಿಕುದಿದೇಳು ತಜ್ಞಾವಿಹೀನದಿ ।
ಉದರವ ಹೊರವುತ ತಿರುಗವರೇ ೪

ಈಗಾಗಯನ್ನದೇ ಹರಿನಾಮವ । ನಾ ।
ಲಿಗೆ ಕೊನಿಯಲಿ ತಂದಿರಿಸೀ ।
ಶ್ರೀ ಗುರು ಮಹಿಪತಿ ನಂದನು ಸಾರಿದ । ಭವ ।
ಸಾಗರ ಸುಳಿಯಿಂದಲಿ ತರಸೀ ೫

## ೩೫೫

ಹರಿಯಾ ಪೂಜೆಯಾ ಮಾಡಿ ಗತಿಗಳ ಬೇಡಿ
ಹರುಷದಿ ಕೂಡಿ ನಲಿ ನಲಿದಾಡಿ ಪ

ಎಲ್ಲರೊಳು ಬಾಗಿ ನಡಿಬೇಕು ಸಾಗಿ
ಖುಳ್ಳತನ ಹೋಗಿ ಏಕೋ ನಿಷ್ಠಾಗಿ
ಬಲ್ಲ ತನನೀಗಿ ಆಗಬೇಕು ತ್ಯಾಗಿ
ನಿಲ್ಲದೇ ವದಗಿ ಸಮದೃಷ್ಟಿ ತೂಗಿ ೧

ನಿತ್ಯಾ ನಿತ್ಯ ತಿಳಿದು ವಿಚಾರ ಬಲಿದು
ಕುತ್ತಾಪಗಳದು ಸತ್ಯಗದಲ್ಲಿದ್ದು
ಸತ್ಯಜ್ಞಾನ ಪಡೆದು ಸದ್ಭಾವ ಜಡಿದು
ಚಿತ್ತ ಚಂದಲ ಜರಿದು ಮದ ಮತ್ಸರ ಜರೆದು ೨

ತನ್ನದಿದಲ್ಲಾ ಸಿರಸೌಖ್ಯವೆಲ್ಲಾ
ಇನ್ನು ತಿಳಿಲಿಲ್ಲಾ ಈ ಮರಹು ಸಲ್ಲಾ
ಸನ್ನು ತನೆಬಲ್ಲಾ ಈ ಸಾಕಾಯ ವೆಲ್ಲಾ
ಮನ್ನಿಸಿ ನೀವೆಲ್ಲಾ ಮಹಿಪತಿ ಜನಸೊಲ್ಲಾ ೩

## ೩೫೬

ಹರಿಯೇ ಕಾವುದು ಕಾವದು ನೀ ಪ

ಕಾವುದು ಕಾವದು ಸಾದರದಿಂದಲಿ ದೇವನೆ ಯನ್ನ ಸದಾ ।
ಶ್ರೀವಧು ವಲ್ಲಭ ದೋರುತ ನಿನ್ನಯ ಪಾದ ಯುಗ್ಮ ಪದಾ ಅ.ಪ

ಸ್ವರ್ಗದ ಸಾಸಿರ ಮಡಿಸುಖ ಭಕ್ತಿಯ ಮಾರ್ಗವ ನರಿಯದೇ ।
ದುರ್ಗುಣದಲಿ ತನು ಧನ ಸಿರಿಮದದಿಂ ಆರ್ಗೆಯ ಮನ್ನಿಸದೇ
ಮಾರ್ಗಣವೆಸನುದರವ ಪೊರೆವುತ ಷಡ್ವರ್ಗರ ಬಲಿವಿಡಿದೇ।
ಅರ್ಗಳಿಗೆಯು ನೆನಿಯದೆ ಬಹ ಜನ್ಮದಿ ದುರ್ಗತಿ ಭೋಗಿಸಿದೇ ೧

ನಾ ಪೂರ್ವದಿ ಮಾಡಿದ ಬಹು ದುಷ್ಕೃತ ಆ ಫಲದಿಂದ ಲೀಗ ।
ತಾಪತ್ರಯಾನಳ ಸಂಯುತ ಭವದ
ಮಹಾಪಯ ನಿಧಿಯೊಳಗೆ ।
ಆಪವಗಾಣದೆ ಶಳವಿಗೆ ಶಿಲ್ಕಿದೆ. ಆಪೊಂದದೆ ಧಡಿಗೆ ।
ಶ್ರೀಪತಿನಾವಿಕನಾಗಿ ನೀ ದಾಟಿಸಲೀಪಸುಗಳೆಂದನಗೆ । ೨

ಕಂದನ ಗುಣದೋಷಂಗಳ ಆರಿಸೆ ತಂದೆಗಿದು ಚಿತವೆ ।
ಹಿಂದಿನ ತೀತವ ನೋಡದೆ ಕೂಡೋ
ನೀ ಬಂದು ಜಗದ್ಧರುವೆ ।
ಎಂದೆಂದಿಗೆ ಇಳೆಯೊಳು ಮಹಾ
ಪತಿತರ ವೃಂದ ಉದ್ಧರಿಸುವೆ ।
ಮಂದರ ಗಿರಿಧರ ತಂದೆ ಮಹಿಪತಿ ನಂದನವರ ಪ್ರಭುವೆ ೩

## ೩೫೭

ಹರಿಯೇ ದಯಮಾಡು ಮಾಡು ಮಾಡು ಮಾಡು ಪ

ಮರೆತು ಭವಾಟವಿಯಲ್ಲಿ ಬಹು ನೊಂದೆನು ।
ಕರುಣ ಕಟಾಕ್ಷದಿ ನೋಡು ನೋಡು ನೋಡು । ನೋಡು ೧

ಹರಿಸಿ ತ್ರಿತಾಪವ ಸ್ವಸುಖ ಬೀರುವಾ ।
ಚರಣದ ಭಜನೆಯ ನೀಡು ನೀಡು ನೀಡು ನೀಡು ೨

ಸದ್ಗುರು ಮಹಿಪತಿ ಪ್ರಭು ಪದದೋರುತ ।
ಹೃದಯ ಮಂದಿರದೊಳಗಾಡು ಆಡು ಆಡು ಆಡು ೩

## ೩೫೮

ಹರಿಯೇ ನಮ್ಮ ಪರದೈವಾ ಹರಿಯೇ ತ್ರಿಭುವನ ಕಾವಾ
ಹರಿಯೇ ಇಹಪರ ನೀವಾ ಜಗದೊಳಗೆ ಪ

ಬಿಟ್ಟು ತಾಯ ತಂದೆಗಳ ನೆಟ್ಟನಡವಿಗೆ ಪೋಗಿ ।
ಮುಟ್ಟಿ ಭಜಿಸಲಾಗಿ ದಯವಿಟ್ಟು ಬಂದನು ।
ವಿಠಲ ನಚಲ ಪದವಿಯ ಕೊಟ್ಟು ಸಲಹಿದಕ ।
ಧಿಟ್ಟ ಧ್ರುವರಾಯ ಸಾಕ್ಷಿ ಅಂಬರದಲಿ ೧

ಜರಿದು ನೂಕೆ ದಸಕಂಠ ಶರಧಿ ದಾಟ ಬಂದು ರಘು ।
ವರನೆ ಶರಣೆನ್ನೆ ಪತಿ ಕರಿಸಿದನು ।
ಧರಿಯದುಳ್ಳನಕಾ ಲಂಕಾಪುರದ ಪದವಿಕೊಟ್ಟು ಕಾಯ್ದಾ ।
ಮೆರೆವಾ ವಿಭಿಷಣಾ ಸಾಕ್ಷಿ ಮೃತ್ಯುಲೋಕದೀ ೨

ಧರೆಯ ನೆಳೆದು ಕೊಟ್ಟರಂಘ್ರಿ ವೆರಡರಿಂದ ಮುಚ್ಚಲಾಗಿ ।
ಶರಣ ತೃತಿಯ ಪಾದಕ ಶಿರಸವ ನೀಡಲು ।
ಗುರು ಮಹಿಪತಿ ಪ್ರಭು ಸುರರಾಸಮ ಪದವಿ ಕೊಟ್ಟು
ಹೊರೆದನೆಂದು ಬಲಿಸಾಕ್ಷಿ ಪಾತಾಳದಲಿ ೩

## ೩೫೯

ಹರಿಯಂದೆನ್ನಿ ಪ

ಕಪಿಲಾ ಗೋ ಸಹಸ್ರವನು ಸಾಲಂಕಾರದಿ ಸಕಲ ।
ನಿಪುಣಗ ನೀಡಿದ ಫಲಾ ೧

ರಾಜಸೂಯಾಶ್ವಮೇಧ ಮೊದಲಾದ ಯಜ್ಞಗಳು ।
ತ್ಯಾಜ್ಯದಿ ಮಾಡಿದ ಫಲಾ ೨

ಕಾಶಿ ರಾಮೇಶ್ವರದಿ ತೀರ್ಥಂಗಳಾ ।
ವಾಸದಿ ಮಿಂದ ಫಲಾ ೩

ಪರಿ ಪರಿ ಯೋಗಂಗಳ ಪರಿ ಪರಿ ತಪಗಳಾ ।
ಚರಿಸಿ ತಿರುಗಿದ ಫಲಾ ೪

ತಂದೆ ಮಹಿಪತಿ ಪ್ರಭು ಯಚ್ಚರಿಸಿದ ಸ್ವಕೀಲಾ ।
ಬಂದ ಜನುಮಕ ಸಫಲಾ ೫

## ೩೬೦

ಹರಿ ಲೀಲೆಯ ನೋಡೀ ಹರಿಯಾಡುವದೀ ಪ

ಹೊಕ್ಕಳ ಹೂವಿಲಿ ಬೊಮ್ಮನ ಪಡೆದವ ।
ಅಕ್ಕರದಲಿ ನಂದನ ಮಗನಾದ ೧

ವಶವಲ್ಲದ ಪಾಲ್ಗಡಲಿನ ಮುನಿಯವ ।
ಯಶೋದೆಯ ಮೊಲೆವಾಲುಂಬುವ ೨

ಮಹಿಪತಿ ಸುತ ಪ್ರಭು ಚರಿತೆಯ ಪಾಡಲು ।
ಇಹಪರ ಸುಖವನು ನೀಡುವದೀ ೩

## ೩೬೧

ಹರಿ ವಿಮುಖನಾದ ಮನುಜಶ್ವಪಚ ಶ್ರೇಷ್ಠನು ।
ಹರಿವಲುಮೆ ಕಂಡ ನರನು ಪರಮ ಶಿಷ್ಠನು ಪ

ಹರಿಯ ಕಾಣದ ಕಣ್ಣು ನೌಲಗರಿಯಾ ಕಣ್ಣವು ।
ಹರಿಯ ಕಥೆ ಕೇಳದ ಶ್ರವಣಾ ಬಧಿರ ಶ್ರವಣವು ।
ಹರಿಯ ನಿರ್ಮಾಲ್ಯ ಕೊಳದ ಘ್ರಾಣ ಲೆತ್ತಿ ಘ್ರಾಣವು ।
ಹರಿಗೆರಗದಂಗ ತ್ರಾಣ ಬೆಚ್ಚಿನ ತ್ರಾಣವು ೧

ಹರಿಯನ್ನದ ಮುಖವು ರಾಜ ಬಿರದ ಮುಖಗಳು ।
ಹರಿಸೇವೆ ಮಾಡದ ಕೈಯ್ಯಾ ಕೀಲಿ ಕೈಗಳು ।
ಹರಿಯಾತ್ರೆ ಇಲ್ಲದ ಕಾಲು ಹೊರಸಿನ ಕಾಲ್ಗಳು ।
ಹರಿ ವಿಷಯ ವಿಲ್ಲದ ವಿದ್ಯೆದೊಂಬನ ವಿದ್ಯಗಳು ೨

ಹರಿಗರ್ಪಣೆ ಅಲ್ಲದಯಜ್ಞ ವೇಷಿಕ ಕರ್ಮವು ।
ಬರುದೇ ಮೌನ ವ್ರತಗಳೆಲ್ಲ ಬಕನ ಧರ್ಮವು ।
ಹರಿಭಕ್ತಿರಹಿತ ತಪದಿ ಬಿಡದು ಜನ್ಮವು ।
ಗುರು ಮಹಿಪತಿಸ್ವಾಮಿ ಭೋಧಿಸಿದನು ಮರ್ಮವು ೩

## ೩೬೨

ಹರಿ ಹರಿ ಎನ್ನಬಾರದೇ ಮನವೇ ನೀನು ಪ

ಕಂಡವರಾ ಬಿಡ ಮಾತುಗಳಾಡುತ ।
ಭಂಡತನದಿ ಫಲವೇನು ೧

ಊರಗುದ್ದಲಿ ಕೊಂಡು ನಾಡಗಾವಲಿಯಾ ।
ದಾರಿ ತಿದ್ದುವರೇ ತಾನು ೨

ಮಹಿಪತಿ ಸುತ ಪ್ರಭು ನಾಮವ ನೆನೆದರೆ ।
ಇಹ ಪರ ಸುಖಕರ ಧೇನು ೩

## ೩೬೩

ಹರಿಹರಿ ಕೊಡು ನಿನ್ನಯಚ್ಚರನು
ಶರಣವಾ ಧೃಡದಲಿ ಬಂದೆನಾನು ಪ

ಅವಿದ್ಯೆಮಬ್ಬಿನಲಿ ಹರಿಬಂದ ಹಾವಿನ ಪರಿಯಾಗಿ
ವಿವೇಕ ಯವಿಮುಚ್ಚಿಕಂಗಾಣದೆ ಸೇವೆಗೆ ಹೊರತಾದೆ ೧

ನ್ಯೂನವ ನಾಲಿಸಲು ತಪ್ಪಿಗೆ ತಾನೆಣಿಕೆಗಳಿಲ್ಲಾ
ಏನರಿಯದ ಮೂಢಾ ಇವನೆಂದು ನಿನುದ್ಧರಿಸೆನ್ನಾ ೨

ಎಂದೆಂದು ಪ್ರೇಮದಲಿಂದಾ ಗೆಳೆತನಾ ಛೆಂದವೆನಗ ನಿನಗ ।
ಎಂದೇ ಮನೆಯೊಳಿದ್ದು ಮಾತಾಡದೇ ನಿಂದುದುಚಿತವಲ್ಲ ೩

ಕಡೆಗಣ್ಣಿಲಿ ನೋಡೋ ಉದಾಸೀನ ನುಡಿಯ ಮಾಡಲಿಬೇಡ ।
ಒಡೆಯಾ ನಿನ್ನಂಘ್ರಿಮದಾ ದಾಸರಾ ಅಡಿಗಳಾಶ್ರಯದಲಿಡೋ ೪

ಕಾಲಬಿದ್ದರವು ರಾಕುಡುವರು ಕೆಳೆಲೋ ಗಾದಿಯನು
ಪಾಲಿಸೋಮಹಿಪತಿ ಸುತ ಪ್ರಭು ಒಲುಮೆಯಾ ಸುಖನೀಡೋ ೫

## ೩೬೪

ಹರಿ ಹರಿ ಗೋವಿಂದ ಯನಬಾರದೇ ಪ್ರಾಣಿ ಪ

ಹರಿ ಹರಿ ಗೋವಿಂದಯನಲು ಭಕುತಿಯಲಿ ।
ಹರಿಸುವ ಪಾಪೌಘವನು ಸಾರಂಗ ಪಾಣೀ ೧

ವ್ರತ ತಪ ಸಾಧನದಿಂದಲೀ ನಿಲುಕದ ನಿಜಗತಿಯಾ।
ಕ್ಷೀತಿಯೋಳು ಸುಲಭದಿ ಕೊಡುವನು ದೀನಾಭಿಮಾನಿ ೨

ತಂದೆ ಮಹಿಪತಿ ಕಂದಗ ಸಾರಿದ ಯಚ್ಚರ ನೀ ।
ಛಂದದಿ ಇಹಪರ ನೀವದು ಯದುರಾಜ ಸ್ಮರಣೀ ೩

## ೩೬೫

ಹರಿ ಹರಿ ತಾರಿಸೆನ್ನ ಸಹಕಾರಿ । ದಯಬೀರಿ ।
ಚರಣ ವಾರಿಜವ ತೋರಿ । ಸಿರಿ ಮನೋಹಾರಿ ।
ದಾನವಾರಿ ಶೌರಿ ।
ನರಹರಿ ಮರೆಯದೆ ಹೊರಿ ಮನ ಹರಿವಾರು ।
ಆರಿ ಸೆರೆಸೇರಿ ಬಳಲುತಲಿದೇ ಪರಿ ಪರಿ ೧

ಸ್ಫುರಿತಾ ಚಕ್ರಗೋಗದಾಬ್ಜ ಭರಿತಾ ।
ಯುಧನಿರುತಾ । ಶೋಭಿತಾ ।
ಚತುರ್ಭುಜದರ್ತಾತ್ವರಿ ತಾ । ಪಡೆದೇ ನಿರ್ಜರ ಸರಿತಾ ।
ಗುರುತದನವರತ ದಲರಿತರ ದುರಿತಪ ।
ಹರಿ ಚಿದಾನಂದ ಭರಿತ ಸುಚರಿತಾ ೨

ಪಡೆಗಣ್ಣ ವಾಣೀಶ ಸನ್ನುತ ಮಹಿಪತಿ ।
ಅಣುಗನೊಡಿಯಾ ಫಣಿವರ ಶಾಯೀ ।
ಎಣೆಗಾಣದಗಣಿತ । ಗುಣಗಣ ಮಣಿಖಣಿ ।
ಅಣುರೇಣು ತೃಣಕಣ ವ್ಯಾಪಕ ಪೂರಣ ೩

## ೩೬೬

ಹರಿ ಹರಿ ಯನ್ನಿರೋ ।
ಹರಿ ಹರಿಯಂದು ಸ್ಮರಣಗೆ । ತಂದು ಪರಗತಿ ಪಡೆಯಿರೋ ಪ

ಸಾಧಾಕಗೆರಗೀ ಬೋಧಕವದಗೀ ಭೇದಿಸಿ ನಿಮ್ಮೊಳು ತಿರುಗಿ ।
ಸಾಧಕನಾಗಿ ಕ್ರೋಧಕ ಬಾಗಿ ವಾದ ವಿವಾದವ ನೀಗಿ ೧

ಎಚ್ಚರ ವಿಡಿದು ಮತ್ಸರ ಕಡಿದು ತುಚ್ಛರ ಸಂಗದಿ ಸಿಡಿದು ।
ಮೆಚ್ಚುದು ನುಡಿದು ನಿಚ್ಚಟ ಜಡಿದು ಮೆಚ್ಚಿನ ಭಕ್ತಿಯ ಪಡೆದು ೨

ಸ್ವಸಿತಕ ನೋಡಿ ವಿಹಿತಿದೆ ನೋಡೀ
ಮಹಿಪತಿಸುತ ಪ್ರಭುಕೂಡಿ ।
ಕುಹಕವು ಬ್ಯಾಡಿ ಮಹಿಮೆಯ ಪಾಡೀ
ಇಹಪರಿ ಸುಖವ ಸೂರ್‍ಯಾಡಿ ೩

## ૩೬೭

ಹರಿ ಹರಿ ಹರಿ ಹರಿಯಂದು ನೆನೆದವನೆ ಧನ್ಯ ।
ಹರಿಯ ಮರದವನೇ ಮೂರು ಲೋಕದೋಳಾಮಾನ್ಯ ಪ

ಹರಿಯ ಬಲಗೊಂಡಾ ಪ್ರಹ್ಲಾದಾ ಸುಖಿಯಾದಾ ।
ಹರಿಯ ಕೂಡ ಮರೆತು ಹಿರಣ್ಯಕನು ದುಃಖಿಯಾದಾ ೧

ಹರಿಶರಣನಾಗಿ ವಿಭೀಷಣನು ನೆಲೆಗೊಂಡಾ ।
ಹರಿಗೆ ಬಾಗದವೆ ದಶಾನನನು ಕಲುಷವುಂಡಾ ೨

ಹರಿಯ ನಂಬಿದ ಪಾಂಡವರು ಕೀರ್ತಿ ಧರಿಸಿದರು ।
ಹರಿಯನ್ನದೆ ವ್ಯರ್ಥ ಕೆಟ್ಟರು ನೋಡು ಕೌರವರು ૩

ಗುರು ಮಹಿಪತಿ ಸ್ವಾಮಿ ಭಕ್ತ ಸಹಕಾರಿ ।
ದುರುಳ ದುರ್ಮಾರ್ಗದಲಿ ನಡೆದ ದುಷ್ಟ ಜನವಿದಾರಿ ೪

## ૩೬೮

ಹರಿ ಹರಿಯೆಂದು ಸ್ಮರಿಸೆಲೋ ಪ್ರಾಣಿ ಪ

ಹರಿ ಹರಿ ಯೆಂದು ಸ್ಮರಿಸೆಲೋ ಪ್ರಾಣೀ ।
ಹರಿಸುವ ಬಂಧ ಸಾರಂಗ ಪಾಣಿ ೧

ನರಜನ್ಮದಲಿ ಬಂದು ನೀ ಮುಂದುಗಾಣೀ ।
ಮರೆದು ತನಗ ತನ್ನ ಮಾಡುವರೇ ಹಾನಿ ೨

ತರುಣೋಪಾಯ ದೋರುವ ಮೊರೆಹೊಕ್ಕರೆ ನೀ ।
ಗುರುಮಹಿಪತಿ ಸ್ವಾಮಿ ನಿಜ ಸುಖದಾನಿ ૩

## ೩೬೯

ಹರಿ ಹರಿ ಹರೀ ಎನ್ನಿ । ಮನದೊಳು ।
ಸ್ಮರಣೆಗೆ ಕರೆತನ್ನಿ । ಪ

ನಂದನ ಕಂದ ಮುಕುಂದನು ಎನ್ನಿ ।
ಇಂದಿರೆ ರಮಣ ಗೋವಿಂದನು ಎನ್ನಿ ೧

ಅಂಬುಧಿವಾಸ ವಿಶ್ವಂಭರನೆನ್ನಿ ।
ನಂಬಿದ ಸುಜನ ಕುಟುಂಬಿಯೆ ಎನ್ನಿ ೨

ದುರ್ಧರ ದಾನವ ಮರ್ದನ ಎನ್ನಿ ।
ಸ್ಪರ್ಧಾಮ ಪತಿಜಯ ವರ್ದನೆ ಎನ್ನಿ ೩

ತೃಪ್ತನು ನಿತ್ಯಹಿ ಸುಪ್ತನು ಎನ್ನಿ ।
ಕ್ಷಿಪ್ತನೆನಿಪ ನಿರ್ಲಿಪ್ತನು ಎನ್ನಿ ೪

ಗುರು ಮಹಿಪತಿ ಪ್ರಭು ಅರಿಧೃತ ನೆನ್ನಿ ।
ಗರುಡ ಅಜಹರಸುತನೆನ್ನಿ ೫

## ೩೭೦

ಹಾರುವರಿಗೆ ಭೂಮಿಯಾ ನೀಡಿದೆನೆಂದು ।
ನೀರೋಳುಮನೆಯ ಮಾಡಿ ಕೊಂಡೆಯಾರಂಗಾ ಪ

ಇಂದ್ರಾದಿಗಳು ಕ್ಷಣಕೊಮ್ಮೆ ಮೊರೆಯಿಡಲಾಗಿ
ನಿದ್ರೆ ಕಾಣೆನೆಂದು ಸೇರಿದೆ ಗಡ್ಡೆಯಾರಂಗಾ ೧

ವಿಷನುಂಡುದಾವಾಗ್ನಿ ನುಂಗಿ ತನು ಶೆಖೆದೋರೇ
ಶೇಷನಂಗದ ಮೇಲೆ ಪವಡಿಸಿದೆಯಾ ರಂಗಾ ೨

ಶರಣ ವಸರಕ ಎಡತಾಕಲಾರೆನೆಂದು
ಗುರುಮಹಿಪತಿ ಸ್ವಾಮಿ ನಾಮ ವಿಟ್ಟೆಯಾ ರಂಗಾ ೩

## ೩೭೧

ಹಿತ ನೋಡಿ ಸಂತರ ಕೂಡೀ ಪ

ಹಿತ ನೋಡಿ ಸಂತರ ಕೂಡೀ ।
ಮತಿ ನಿಜ ಮಾಡಿ ।
ಶ್ರೀ ಪತಿಯ ಕೊಂಡಾಡಿ ೧

ಶರಣರ ಸಂಗಾ ದುರಿತ ವಿಭಂಗಾ ।
ನೆರೆ ಕರುಣಾಂಗದಿ ।
ಹೊರೆವನು ರಂಗಾ ೨

ಅಂಜನಿಡಲು ಧನ ಪ್ರಾಂಜಲಾಗುವ ಪರಿ ।
ರಂಜಿಸುತಿಹ ತೇಜಃ ।
ಪುಂಜನ ನೋಡಿ ೩

ಕಂಡಪದಕ ಹರಿದಂಡಲಿಯದೆ ನೆಲೆ ।
ಗೊಂಡ ವಿವೇಕದ ।
ಪಂಡಿತರಾಗಿ ೪

ತಂದೆ ಮಹಿಪತಿನಂದನು ಸಾರಿದಾ ।
ಬಂದ ಜನುಮಕಿದು ।
ಛಂದದು ನೋಡಿ ೫

## ३८೨

ಹಿಡಿ ಹಿಡಿರಿಂದು ಸಿಕ್ಕಿದ ಕಳ್ಳನಾ
ಬಿಡಬ್ಯಾಡಿರೆಂದಿಗೆ ಹಜ್ಜೆನೆಲಿಗೆ ತಾರನಾ । ಮೈಯ್ಯ ದೋರನಾ ಪ

ಹೃದಯದೊಳಗಿನಾ ಗಂಟವ ಬಿಡುತಾ
ಮುದದಿಕುಳ್ಳಿರಲಲ್ಲಿ ಬಂದು ನೋಡುತಾ
ಇದರ ಚಿತ್ತ ಪೇಠಾರಿಗೆ ಕೈಯ್ಯಾನೀಡುತಾ
ಒದಗಿಕದ್ದೊಯ್ದತಿರಗದೆ ಧನಿ ಮಾಡುತಾಧನಿ ಮಾಡುತಾ ೧

ಖೂನ ತನ್ನಯ ಬಲ್ಲಾಸಾಧುಜನವಾ
ಕಾಣುತಾರ್ಜಿತ ಶೆಳೆದು ಕೊಂಡು ಧನವಾ
ಏನ ಹೇಳಲಿ ಬಿಡನು ಅವರ ಪ್ರಾಣವಾ
ತಾನು ಸೂರೆಯ ಕೊಡಲಿ ಹೊಕ್ಕನು
ವನವಾಕೊಂಡು ಗೋಧನವಾ ೨

ಅಡದಾರಿಯಾ ನಡದು ಹೋಗಿ ಬಿದ್ದನಾ
ನಡುವೆ ತೊಳಲಿಸುವನು ವಿರುದ್ಧನಾ
ಹಿಡಿ ಗುರು ಮಹಿಪತಿ ಪ್ರಭು ಪ್ರಸಿದ್ಧನಾ
ಬಿಡದೆ ಭಂಡಾರಕಾಯಲಿಡುವ ಪ್ರಬುದ್ಧನಾ ವಾಜಿಲಿದ್ದನಾ ೩

## ३८३

ಹಿರಿಯ ಒಡೆಯಕಂಡೆನಮ್ಮಾ ಧರಿಯ ಮ್ಯಾಲೊಂದುನಾ
ಸಿರಿಯಾ ವರ್ಯನಾದನೀತ ಸಿರಿಯ ಕಾಣೆನಾ ಪ

ಶರಣ ಹೃದಯ ಮಾಡದಲ್ಲಿ ಅರಹು ಘಂಟಮಾಲೆ ನವ
ಪರಿಯ ಶುಕ್ಯಶಾವಿಗಿಯ ಹರುಷ ಸಕ್ಕರೆ
ಪರಮ ಜ್ಞಾನವೆಂಬ ತ್ವರಿತ ದೀವಿಗೆಯ ಕೊಂಡು
ಮೆರೆವ ಕೀರ್ತ ಪ್ರೇಮ ಜಪ್ಪ್ಯಡೊಳ್ಳು ಹೊಯಿಸುವಾ ೧

ಕಡ್ಡಿ ಎಡಿದು ಗುಡ್ಡ ಮಾಡಿ ಗುಡ್ಡವನ್ನೇ ಕಡ್ಡಿಮಾಡಿ
ಒಡ್ಡಿ ಮಾಯಾಜಾಲದಿಂದ ನೆಲೆಯ ತೋರದೇ
ದೊಡ್ಡ ದೊಡ್ಡವರನೆಲ್ಲ ವೆಡ್ಡೆಮಾಡಿ ಬಿಟ್ಟತನ್ನ
ಅಡ್ಡ ಸುಳಿದವರ ಕೈಯ್ಯ ದುಡ್ಡನಾರ ಕೊಂಬುರೇ ೨

ಚೆನ್ನ ಕೊಂಡವರ ಮೂಲವನ್ನು ಕಿತ್ತಿ ತೋರಿಸುವ
ತನ್ನ ನಂಬಿದ್ದವರ ಸ್ಥಾಪನೇ ಮಾಡುವ
ಯನ್ನ ಮನೆ ದೈವವಾಗಿ ಧನ್ಯಗೈಸಿದನು ಕೂಡಿ
ಉನ್ನತ ಮಹಿಪತಿ ನಂದ ನೊಡಿಯನು ೩

## ೩೭೪

ಹೊಂದಿ ಬದುಕಿರ್‍ಯೋ ಪ

ಹೊಂದಿ ಬದುಕಿರ್‍ಯೋ ಒಂದು ಮನದಲಿ ।
ಮಂದ ಹಾಸ ಮುಕುಂದನಾ ।
ಕುಂದರ ದನಾ ನಂದನಾ । ವಂದ್ಯನಾದ ಮುಕುಂದನಾ ೧

ಕುರುಳ ಗೂದಲು ಸರಳ ಗೊರಳವ ।
ಗರಳಧರನುತ ಚರಣನಾ ।
ದುರುಳ ಸಾರ ಸಂಹರಣನಾ ।
ತರಳ ಗೊಲಿದ ಕರುಣನಾ ೨

ಮರುಳು ಸುಯೋಧನ ಇರಲು ಏಳದೇ ।
ಉರುಳು ಗೆಡಹಿದ ವೀರನಾ ।
ಅರಳ ಪೂವಿನ ಹಾರನಾ ।
ಗರಳಧರ ಮದ ಹಾರನಾ ೩

ಹಲ್ಲಿದರಿಗಳ ದಲ್ಲಣಾಗಿಹ ।
ಪುಲ್ಲಲೋಚನ ರಂಗನಾ ।
ಮಲ್ಲ ಚಾಣೂರ ಭಂಗನಾ ।
ಸಲ್ಲಲಿತ ಚಲ್ವಾಂಗನಾ ೪

ಸಥಿಯ ನಡೆಸುವ ಇಂಗಿತರ ಮಹಿ ।
ಪತಿಯ ನಂದನ ಜೀವನಾ ।
ಸತತ ಭಕ್ತರ ಕಾವನಾ ।
ಪತಿತ ಪಾವನ ದೇವನಾ ೫

## ३೭೫

ಜ್ಞಾನ ಸಖೀಕೇಳೆ ಜ್ಞಾನಿಗಳಾರಾಧಿಸುವಾ ।
ಶ್ರೀನಿವಾಸನಾ ತಂದುತೋರೆ ತನುವಿನೋಳು ಪ

ಹಲವು ಸಾದಿನದಿಂದ ಬಳಲಿ ಹಂಬಲಿಸಿದೆ ।
ಜಲ ಜಾಕ್ಷ ಮೈಯ್ಯ ದೋರನೇ ೧

ಕಣ್ಣಿಗೆ ಕಣ್ಣಾಗದನಕಾ ಬಣ್ಣ ಬಣ್ಣದ ಚಿತ್ಸುಖಾ ।
ಕನ್ನಿಕಾ ರನ್ನಳೆ ತಂದು ತೋರೇ ೨

ಸೋಪ್ಯ ಸೊನ್ನಿಯ ದೋರಿಸಿ ಬಾಹ್ಯರಂಗ ಮರೆಸಿ ।
ಸಹ ಜಾನಂದದ ಕೂಡಿಸೇ ३

ಗುರು ಮಹಿಪತಿ ಸ್ವಾಮಿ ಸ್ಮರಿಸುವರಂತರ್ಯಾಮಿ ।
ನೆರೆದು ತಾನೇ ತಾನಾದನೇ ೪

## ೩೭೬

ಆರತಿಯತ್ತಿರೆ ಆರತ ಭಕುತಿಲಿ । ಆರತಿ ಪತಿ ಪಿತ ।
ಅರವಿನುತಗೆ (ಮಾರುತನುತಗೆ) ೧

ಕಾಲಜನನುಜಗ ಕಾಕಾದಲಯ
ಕಾಲದುರಿತರಿದ ಕಾಲಕಾಲಗ ೨

ಕಾಲಿಂದಿ ನದಿ ಯೊಳು ಕಾಳಿಯಸಿಗದಲಿ
ಕಾಲಲಿ ಕುಣಿದ ಲೋಕಾವಳಿ ವ್ಯಾಪಕಗ ೩

ಕಾಳರೂಪದಿ ಗಜಕಾಲ್ವಿಡಿದ ಮಕರಿ
ಕಾಲಪುರಕಟ್ಟಿದ ಕಾಲ ಜಲದ ಭಗ ೪

ಇಂದಿರೆ ಪತಿ ಜನಗ ತಂದೆ ಮಹಿಪತಿ
ನಂದನ ಪಾಲ ಮುಕುಂದ ಶ್ರೀಹರಿಗೆ ೫

## ೩೭೭

ಕೇಶವಾಚ್ಯುತ ಮಾಧವಾನಂತಶ್ರೀ ಶಕಮಲದಳೇಕ್ಷಣಾ।
ವಾಸುದೇವ ಮುಕುಂದ ಮುರಹರ ಕ್ಲೇಶಹರಣ ಜನಾರ್ಧನಾ॥
ವಾಸುಕಿಯ ಪರಿಯಂಕನೆನುತಲಿ।ನೆನೆವನಾವ ನರೋತ್ತಮಾ।
ಮೋಸಹೋಗದಿರವರೊಳೆಂದು।ಚರರಿಗ್ಹೇಳಿದನ್ಯೆಯಮಾ ೧

ರಾಮರಾಘವ ರಾಜಶೇಖರ।ರಾವಣಾಸುರಮರ್ದನಾ।
ಶಾಮಸುಂದರ ಸಕಲ ಗುಣನಿಧಿ।ಶಬರಿಪೂರಿತ ವಾಸನಾ
ಭೂಮಿಜಾಪತಿ ಭೂತನಾಥ।ಪ್ರಿಯನೆಂಬ ನರೋತ್ತಮಾ।
ಪ್ರೇಮಿಕನ ನುಡಿಸದಿರಿಯೆಂದು।ಚರರಿಗ್ಹೇಳಿದನ್ಯೆಯಮಾ ೨

ಬಾಲಲೀಲವಿನೋದ ಶ್ರೀ ಗೋಪಾಲ ಗೋಕುಲ ಲಾಲನಾ।
ಕಾಲಜಲಧರ ನೀಲಮುರಲೀ ಲೋಲಸುರವರ ಪಾಲನಾ।
ಕಾಲಕಾಲನೆ ಕಂಸಹರನನು ತಾವ ನೆನೆವ ನರೋತ್ತುಮಾ।
ಕಾಲಿಗೆರಗಿರಿ ಅವರಿಗೆಂದು।ಚರರಿಗ್ಹೇಳಿದನ್ಯೆಯಮಾ ೩

ಮಕರಕುಂಡಲ ಕಿರೀಟ ಕೌಸ್ತುಭ।ಕಟಕಕೇಯೂರ ಭೂಷಣಾ।
ಅಖಿಲ ಜಗನುತ ಚರಣಪೀತಾಂಬರನೆ ಶ್ರೀವತ್ಸಲಾಂಛನಾ।
ಪ್ರಕಟಿತಾಯುಧ ಶಂಖಚಕ್ರಗದಾಬ್ಜ ನೆನೆವನರೋತ್ತಮಾ।
ಸುಖಿಸುವವರನು ತ್ಯಜಿಸಿರೆಂದು ಚರರಿಗ್ಹೇಳಿದನ್ಯೆಯಮಾ ೪

ಶ್ರವಣಪೂಜನೆ ಸ್ಮರಣಕೀರ್ತನೆ ವಂದನೆದಾಸ್ಯದಿ ಸಖ್ಯವಾ।
ಸೇವೆಪದಾತ್ಮ ಸಮರ್ಪಣೆಂದು ಭಕುತಿ ನವವಿಧಲೊಪ್ಪುವಾ।
ಅವನಿಯೊಳಗೊಂದಿದರೊಳ್ಹಿಡದಿಹ
ಬಿಡದನಾವನರೋತ್ತುಮಾ।
ಅವನ ಸೀಮೆಯ ಹೋಗದಿರೆಂದು ಚರರಿಗ್ಹೇಳಿದನ್ಯೆಯಮಾ ೫

ಯಾರಮನೆಯಲಿ ತುಲಸಿವೃಂದಾವನದಿ ಶಾಲಿಗ್ರಾಮವು।
ಚಾರುದ್ವಾದಶನಾಮ ಹರಿಚಕ್ರಾಂಕಿತದ ಶುಭಕಾಯವು।
ಮೀರದಲೆ ಹರಿದಿನದ ವ್ರತದಲಿ ನಡೆವನಾವನರೋತ್ತಮಾ।
ದಾರಿ ಮೆಟ್ಟದಿರೆಂದು ತನ್ನಯ ಚರರಿಗ್ಹೇಳಿದನ್ಯೆಯಮಾ ೬

ಸಾಧುಸಂತರು ಬಂದರೆರಗುತ ಪಾದೋದಕದಲಿ ಮೀವನು।
ಆದಿನವಯುಗ ವಾದಿಚತುರ್ದಶ ಪರ್ವಕಾಲಗಳೆಂಬನು।
ಸಾದರದಿ ಹರಿಪೂಜೆಯಿಂದರ್ಚಿಸುವ ನಾವನರೋತ್ತಮಾ।
ಮೋದದಿಂದಲಿ ಬಾಗಿರೆಂದು ಚರರಿಗ್ಹೇಳಿದನ್ಯೆಯಮಾ ೭

ಅಂದು ಹೇಳಿದ ಕಥೆ ರಹಸ್ಯದ ಹರಿಯನಾಮದ ಮಾಲಿಕಾ।
ತಂದೆ ಮಹೀಪತಿ ಎನ್ನ ಮುಖದಲಿ ನುಡಿಸಿದನು ಭೋಧಾಷ್ಟಕ।
ತಂದು ಮನದಲಿ ಭಕುತಿಯಿಂದಲಿ ನೆನೆವನಾವನರೋತ್ತಮಾ।
ಇಂದು ಜೀವನ್ಮುಕ್ತನಮಗಿನ್ನೇನು ಮಾಡುವನ್ಯೆಯಮಾ ೮

## ೩೭೮

ಜಯರಾಘವ ಜಯರಾಘವ ಜಯರಾಘವ ರಾಮಾ।
ಶ್ರಯಕಾರಣಸುಖಪೂರಣ ಭವತಾರಣ ನಾಮಾ ಪ

ಜಗಪೋಷಣ ಮೃದುಭಾಷಣ ಸುರತೋಷಣಕಾರಿ।
ಅಘಶೋಷಣ ಕುಲಭೂಷಣ ಖರದೂಷಣ ಹಾರಿ ೧

ಅತಿಸುಂದರ ಗುಣ ಮಂದಿರ ದಶಕಂದರ ಹರಣಾ।
ಧೃತಮಂದಿರ ಗಜೇಂದರ ಪ್ರಿಯಾ ಸಾಂದರ ಕರುಣಾ ೨

ಗಿರಿಜಾ ಪತಿ ವಾಣೀಪತಿ ದಿವಸಾಪತಿ ಧೇಯ।
ಗುರುಮಹೀಪತಿ ಸುತಸಾರಥಿ ಸೀತಾಪತಿರೇಯಾ ೩

## ೩೭೯

ಜಯದೇವ ಜಯದೇವ ಜಯ ವೆಂಕಟೇಶಾ।
ಶ್ರಯ ಸುಖದಾಯಕ ಸ್ವಾಮಿ ಉರಗಾಚಲವಾಸಾ ಪ

ಕರುಣಾಕರ ರತ್ನಾಕರ ಕನ್ಯಾ ಮನೋಹಾರಿ।
ಸುರವರ್ಧನ ಮುರಮರ್ದನ ಗೋವರ್ಧನಧಾರಿ।
ವರಮಂದಿರ ಧೃತಕುಂದರ ಸುಂದರ ಸಹಕಾರಿ।
ಕರಿವಾಹನನುತ ಮೋಹನ ಖಗವಾಹನ ಶೌರಿ ೧

ಜಗಕಾರಣ ಪರಿಪೂರಣ ಸುಂದರಸಾಕಾರಾ।
ಅಘಹರಣಾ ಮುನಿ ಸ್ಮರಣಾತ್ರಯ ಭುವನಾಧಾರಾ।
ನಗಧರಣಾ ತವಶರಣಾಭರಣಾ ಮಯೂರಾ।
ಭೃಗುಚರಣಾಂಕಿತ ಚರಣಾಂಬುಜ ಶೋಭಿತ ಧೀರಾ ೨

ಸುಖಕರ್ತಾ ದುಃಖಹರ್ತಾ ಸರಸೀರುಹ ನಯನಾ।
ಸಕಲಾತ್ಮ ಪರಮಾತ್ಮಾ ಫಣಿಕುಲವರ ಶಯನಾ।
ನಿಖಿಲಾಸುರ ತಮಭಾಸುರ ದುರಿತಾವಳಿ ಶಮನಾ।
ಮಕರಾಂಕಿತ ಪಿತಮಹೀಪತಿ ನಂದನಪಾಲನಾ ೩

## ೩೮೦

ಜಯಜಯಾ ಶ್ರೀನಿವಾಸಾ
ಜಗದೀಶಾ ವೆಂಕಟೇಶಾ
ದಯದಿಂದಲಿ ಪಾಲಿಸೆನ್ನ
ದೋರಿನಿಜ ಪ್ರಕಾಶಾ ಪ

ಉರಗಾದ್ರಿಯಲ್ಲಿ ಬಂದು
ಭೂವೈಕುಂಠಿದೇಯಂದು
ಕರದಿಂದ ಮಹಿಮೆದೋರಿ
ತಾರಿಸುವ ಜನದಿಂದು ೧

ಧರ್ಮಾರ್ಥ ಕಾಮ್ಯ
ಚತುರ್ವಿಧಮುಕ್ತಿಗಳು
ಧರ್ಮವರಿತೆಸಾಧುರಿಗೆ
ನೀಡುತಿಹೆ ದಯಾಳು ೨

ಕುಲಧರ್ಮದಿಂದಲೆನೆಗೆ
ಮಾನ್ಯತಾನಬಂದ್ಹಾಂಗೆ
ವಲಮೆಯಿಂದ ಪರಗತಿಗೆ
ಕುಡುಮಾನ್ಯತೆನವೀಗ ೩

ಮಂದರೊಳು ಮಂದನಾನು
ಜ್ಞಾನಭಕ್ತಿಯರಿಯೆನು
ತಂದೆ ಮಹಿಪತಿಸ್ವಾಮಿ
ಇಂದು ಉದ್ಧರಿಸುನೀನು ೪

## ೩೮೧

ಜಯ ಮಂಗಳಂ ಮಹಾ ಶುಭ ಮಂಗಳಂ
ಭಯ ನಿವಾರಣಮಾಳ್ಪ ಶ್ರೀದೇವಗ ಪ

ಭವದ ಭಯ ಭಂಗಂಗೆ ಸರ್ವಾಂತರಂಗಗೆ
ರವಿಕೋಟಿ ಭಾಗಂಗೆ ಸುರತುಂಗಗೆ
ತವಕದಿ ಅನಂಗಗ ಪಡೆದಯಮಂಗಗ
ಅವನಿರಿಸಿಸಂಗಗ ಶ್ರೀರಂಗಗ ೧

ದೀನ ಜನದಾತಗ ಮಾಯಾ ಅತೀತಗ
ಅನಾಥನಾಥಗ ದಯಭರಿತಗ
ಅನುಪಮಚರಿತಗ ಅಜನದ್ವೈತಗ
ರಣತನಿರ್ಭರಿತಗ ಅವಧೂತಗ ೨

ವಿಹಗ ಧ್ವಜ ಛಂದಗ ದೇವಕಿಯ ಕಂದಗ
ಮಹಾನಿಗಮ ತಂದಗ ಮುಕುಂದಗ
ಮಹಿಪತಿ ನಂದನು ಪಾಲಿಪಾನಂದಗ
ಇಹಪರಾವಂದ್ಯಗ ಗೋವಿಂದಗ ೩

## ೩೮೨

ಜಯದೇವ ಜಯದೇವ ಜಯ ರಾಘವ ರಾಮಾ
ದಯದಲಿಯಚ್ಚರನೀವದು ಸ್ಮರಿಸಲುತವನಾಮಾ ಪ

ಪಭವ ಭವಮುಖರಮೊರೆಯನು ಕೇಳುತಲಿ
ದಶರಥ ಕೌಲಸ್ಯರಾ ಬಸಿರಿಂದುದಿಸುತಲಿ
ರುಷಿ ಮುಕರಕ್ಷಿಸಿ ತಾಟಕಿ ದೇಹದಿಬಿಡಿಸುತಲಿ
ವಸುಧಿಲಿ ಶಿಲೆಯನು ಪಾದದದಿಮೆಟ್ಟ್ಯುದ್ಧರಿಸುತಲಿ ೧

ಹರುಷದಿ ಕೌಶಿಕನೊಡನೆ ಮಿಥಿಲೆಗೆ ಪೋಗುತಲಿ
ಹರದು ಮುರಿದು ಜನಕಜೆ ಮಾಲೆಯ ಧರಿಸುತಲಿ
ಬರಲಾನಂದದಿ ಭೃಗುಪತಿ ದಶರಥ ದರಶನ ಪಾಡುತಲಿ
ಅರಸುತನಕ ಕೈಕೆಯು ಬ್ಯಾಡೆನೆ ನಡೆದ್ಯೆತ್ವರಿಲಿ ೨

ವನದಲಿ ಭಂಗಿಸಿಶೂರ್ಪನಖಿಖರ ದೂಷಣರಾ
ಅನುವರ ಕಾಂಚನ ಮೃಗವಾ ಬೆಂಬೆತ್ತಲು ದೂರಾ
ಜನಕಜೆಯಾಕೃತಿ ವೈಯ್ಯಲು ಕಪಟದಿದಶಶಿರಾ
ಅನುಭಜಟಾಯುವಿನಿಂದಲಿ ಕೇಳಿ ನಡದೆ ಧೀರಾ ೩

ಪಥದಲಿ ಮುರಿದುಕಬಂಧವ ಶಬರಿಗೆ ಗತಿನೀಡಿ
ಪ್ರಥಮದಿ ಹನುಮನ ಕಂಡು ವಾಲಿಯ ಹತಮಾಡಿ
ರತಿಯಲಿ ಸುಗ್ರೀವಜಾಂಭವ ಸೈನ್ಯದ ಲೋಡಗೂಡಿ
ಕ್ಷಿತಿಜೆಯಾ ಸುದ್ದಿಯತರಿಸಿ ನಡೆದ್ಯೆನಲಿದಾಡಿ ೪

ಸೇತುವೆ ಗಟ್ಟಿಸಿ ಶರಣವ ಬರಲು ವಿಭೀಷಣನು
ಭೀತಿಯ ಹಾರಿಸಿಸೈನ್ಯದಿ ದಾಟಿದೆ ಶರಧಿಯನು
ನೀತಿಯ ತಪ್ಪಿದ ರಾವಣ ಕುಂಭಶ್ರವಣರನು
ಖ್ಯಾತಿಲಿ ಮಡಹಿದೆ ಅವರಾಸಂತತಿ ಸಂಪದನು ೫

ಶರಣಗಸ್ಥಿತಪರಪದವಿತ್ತು ದೇವರ ಶೆರೆಬಿಡಿಸಿ
ಮರಳಿದಯೋಧ್ಯಕಪುಷ್ಪಕದಿಂ ಸೀತೆಯವರೆಸೀ
ಮೆರೆವತ್ಸಜರಜನನಿಯರ ಸಕಲರಸುಖಬಡಿಸಿ
ಸುರಮುನಿಜನರನುಸಲಹಿದ್ಯೆ ಸಾಮ್ರಾಜ್ಯವನು ೬

ನಾಮದಮಹಿಮೆ ಹೊಗಳಲು ಶೃತಿಗಳಿಗಳವಲ್ಲಾ
ಪ್ರೇಮದಿಸವಿಸದುಂಬುವ ಶಿವ ಸೀತಾಬಲ್ಲಾ
ನೇಮದಿಸುರನಂದಾನ್ನರ ಬವ ತರಿಸಿದರಲ್ಲಾ
ಕಾಮಿತ ದಾಯಕ ಗುರುಮಹಿಪತಿ ಪ್ರಭುಶಿರಿನಲ್ಲಾ ೭

## ೩೮೩

ಜಯ ಮಂಗಳಂ ಮಹಾ ಶುಭ ಮಂಗಳ
ತ್ರಯಭುವನ ವಂದ್ಯ ಸೀತಾಕಾಂತಗೆ ಪ

ದಶರಥಾತ್ಮಜನಾಗಿನರಲೀಲಿ ನಟಿಸಿದಗ
ಋಷಿಮುಖಕಾಯ್ದ ಹಿಲ್ಯೋದ್ಧಾರಗ
ಅಸಮಧನುಮುರಿದ ವನಿಜೆಯಾಮಾಲೆಧರಿಸಿದಗ
ಬೀಸಜಲೋಚನ ಜನಕ ಜಾಮಾತಗ ೧

ಮೂನವರನುಜರ ಕೂಡಿ ಕಲ್ಯಾಣವಿಡಿದಂಗ
ದೇವಭೃಗುಪತಿ ಮನಾನಲಿಸಿದವಂಗ
ಅವಿಭವಿ ಬಂದಯೋಧ್ಯಾ ಪುರವನಾಳ್ದಂಗ
ಜೀವಜಾತಕಸುಖವ ಬಡಿಸಿದಂಗೆ ೨

ಗುರು ಮಹೀಪತಿ ಸುತನ ಜೀವ್ಹದಲಿತಾನಿಲಿಸಿ
ನಿರುಪಚಾರಿತ್ರ ನುಡಿಸಿದಂಗೆ
ಧರೆಯೊಳಗ ದೀನ ಅನಾಥರನು ಪೊರೆವ
ಪರಮ ಮಂಗಳ ನಾಮ ಶ್ರೀ ರಾಮಗೆ ೩

## ೩೮೪

ಜಯ ಮಂಗಳಂ ಮಹಾ ಶುಭ ಮಂಗಳಂ
ಮಂಗಳಂ ಶ್ರೀರಮಾ ರಮಣ ಮುಕುಂದಗೆ
ಮಂಗಳಂ ಹರಿಸಚ್ಚಿದಾನಂದಗ
ಮಂಗಳಂ ಅಚ್ಯುತಾನಂತ ಗೋವಿಂದಗೆ
ಮಂಗಳಂ ವಿಧಿಭವಾಮರ ವಂದ್ಯಗೆ ಪ

ಆನಂದ ಕೋಶಗ ಅಖಿಳಜನಪೋಷ
ದಾನವಿನಾಶಗ ದೇವೇಶಗ
ವನಮೂಲಭೂಷಗವರದ ಹೃಷೀಕೇಶಗ
ಮುನಿಜನೋಲ್ಲಾಸಗ ಧರಿಣೀಶಗೆ ೧

ಮಖಸಾರಭೋಕ್ತಗ ಮಾಯಾ ವಿಮುಕ್ತಗ
ಸಕಲಗುಣಯುಕ್ತಗ ವಿರಹಿತಂಗೆ
ಭಕ್ತಾನುರಕ್ತಗ ಚಿಂತ್ಯ ಅವ್ಯಕ್ತಗ
ಅಕುತೋಭಯದಾ ತಗ ಜದಧಾತಗೆ ೨

ವರಯದುರಾಯಗ ನಂದ ಕುಮಾರಗ
ಸುರಸಹಕಾರಗ ಸುಂದರಗ
ದುರಿತ ಸಂಹಾರಗ ಅಮಿತಾವತಾರಗ
ಗುರುಮಹೀಪತಿ ನಂದ ನೋದ್ಧರಗೆ ೩

## ૩೮೫

ಜಯ ಮಂಗಳಂ ಮಹಾ ಶುಭಮಂಗಳಂ
ಶ್ರೀಯಕರಾನಂದ ಘನಚಿನ್ಮೂರ್ತಿಗೆ ಪ

ಅನಿಮಿಷಾಕ್ಷಗ ಧರಮಹೀಗ ಸಂಭೋದ್ಭವಗ
ಮುನಿಪಟು ಕ್ಷತ್ರಿ ಕುಲಸಂಹಾರಗ
ಇನಕುಲೋದ್ಭವ ವಾಸುದೇವಶ್ರೀ ಬೌದ್ಧಗ
ಘನತರದ ತುರಗ ಹರರಾವುತಂಗೆ ೧

ಮರಮತ್ಸ್ಯ ಶ್ರೀಕಮಠ ಹಿರಣ್ಯಾಕ್ಷಮರ್ಧನಗೆ
ಕೊರಳೊನಮೂಲಿ ವಾಮನದೇವಗೆ
ಧರಿ ಭೂಸುರಗಿತ್ತು ಧಾಶರಥಿ ಶ್ರೀ ಹರಿಗೆ
ಸಿರಿದಿಂಗಬರ ಕಲ್ಕಿ ಯವತಾರಗೆ ೨

ನಿಗಮನುಳುಹಿದ ಕೂರ್ಮ ವರಾಹನರಸಿಂಹಗೆ
ಅಗವೈರಿಯನುಜ ಪರಶುರಾಮಗ
ರುಘುನಾಥ ಕೃಷ್ಣ ಬೌದ್ದೇಶಕಲಿನಾಶಗ
ಜಗದ್ಗುರು ಮಹಿಪತಿ ಸುತಪ್ರಿಯಗೆ ೩

## ೩೮೬

ಜಯ ಜಯ ರಾಮ ಸಕಲ ಗುಣಧಾಮನೇ
ಜಯ ಶರಣರ ಸುರಧೇನು
ಜಯ ಜಯವಿಧಿಹರ ವಂದ್ಯ ಪರಾತ್ಪರ
ಜಯ ಜಯ ಸೀತಾರಮಣ ಪ

ಸೊಕ್ಕಿದ ದೈತ್ಯರ ಬಾಧಿಗಾರದಿಹ ದೇವರ್ಕಳ ಮೊರೆಯನು ಕೇಳಿ
ಫಕ್ಕನೆ ದಶರಥನಾಲಯದೊಳು ಪುಟ್ಟಿ
ಮಿಕ್ಕನುಜರ ಕೂಡ ಬೆಳೆದು
ಚಿಕ್ಕ ತನದಿ ತಾಟಕಿಯ ಕೊಂದು ಮುನಿಮಖ
ಅಕ್ಕರದಲಿ ಕಾಯದು ಬರಲಿ
ಸಿಕ್ಕಿದ ನೆಲದೊಳು ಸತಿಯನುದ್ಧರಿಸಿಜಾ
ನಕ್ಕಿ ಕೈವಿಡಿದನೇ ಜಯತು ೧

ಕೈಕೆ ನುಡಿಗೆ ಬಂದು ವನದೊಳು ಶೂರ್ಪನಖಿಃ
ಆಖರ ದೂಷಣರಳಿದು
ಲೋಕಮಾತೆಯಾಕೃತಿ ಒಯ್ಯಲು ರಾವಣ
ತಾಕಪಿಕರಢಿಯನೆ ಕೂಡಿ
ಆಕುಮತಿಯ ಬಳದಿ ಕೊಂದು ಶರಣಗೆ
ಬೇಕಾದ ಸ್ಥಿರಪದ ನೀಡಿ
ಶ್ರೀ ಕಮಲಾಂಬಕಿ ಸಹಿತ ಹೊಕ್ಕನು ಬಂದು
ಸಾಕೇತ ಪುರಾಧೀಶ ಜಯತು ೨

ಇಳೆಯ ಸಾಮ್ರಾಜ್ಯ ಸಿಂಹಾಸನದಲಿ ಬರೆ
ಲಲನೆ ದಾಮದಲಿ ಕುಳ್ಳಿರಲಿ
ಬಲಕವಶಿಷ್ಠ ಭರತ ಶತೃಘ್ನ ಕೂಡೆ ನೆಲಿಛತ್ರ ವಿಡಯೆ ಲಕ್ಷ್ಮಣನು
ಒಲಿದು ಸಮ್ಮುಖದಿ ಹನುಮ ಕೈಯ್ಯ ಮುಗಿದಿರೆ
ಉಳಿದಸುರನರರು ಕುಳ್ಳಿರಲಿ
ನಲಿದು ಕಾಸಲಿ ಗುರು ಮಹಿಪತಿ ಪ್ರಭುವಿಗೆ
ಬೆಳಗಿದಳಾರತಿ ಜಯತು ೩

## ೩೮೭

ಜಯ ಜಯ ಯಾಧವನಾಥ ಮುರಾರಿ
ಜಯ ಜಯ ಶ್ರೀವಧುರಮಣ ಶ್ರೀ ಹರಿ ಪ

ದೀನೊದ್ಧರ ಸಗಟಾಸುರದಮನಾ
ಆನಂದ ಮೂರುತಿ ಫಣಿವರ ಶಯನಾ ೧

ಕರುಣಾ ಕರಗಿರಿಧರ ಸರ್ವೇಶಾ
ಶರಣಾಗತ ವತ್ಸಲ ಪಯೋನಿಧಿವಾಸಾ ೨

ಕಂಬುಕಂದರ ಕಮಲಳಾಕ್ಷಾ
ಅಂಬುಜ ಭವನುತಗೋಗೋರಕ್ಷಾ ೩

ಶಂಬರ ಮಥನ ಜನಕ ಮಹಾ ಮಹಿಮಾ
ಜಂಭಭೇದಿಸುತ ಸಖಘನ ಶಾಮಾ ೪

ಪೀತಾಂಬರಧರ ಕೃಷ್ಣ ಶ್ರೀಧರಾ
ಮಾತುಳನಾಶನ ಕೃತಭೂಧರಾ ೫

ಗುರುಮಹಿಪತಿ ಸುತ ಜೀವನರಾಮಾ
ಪರಮಾನಂದ ಕಾಯಕ ಗುಣಧಾಮಾ ೬

## ೩೮೮

ಮಂಗಳಂ ಜಯ ಮಂಗಳಂ ಶುಭಮಂಗಳೆನ್ನಿರೇ
ಹಿಂಗದಂತರಂಗಲಿಪ್ಪಾ ನಂಗನಯ್ಯಗೆ ಪ

ಹೆಣ್ಣ ಮಾಡಿತಮನ್ನ ವಿಕ್ರಮ ಹೆಣ್ಣವೆನಿಸಿ ಹೆಣ್ಣಿಗೊಲಿದು
ಹೆಣ್ಣು ತೊ ಡಿಯೊಳಿನ್ನು ತಾಳಿ ಹೆಣ್ಣ ಮಡ ದಂಗೆ
ಹೆಣ್ಣಿನಳಿದು ಹೆಣ್ಣೆ ನೆಬ್ಬಿಸಿ ಹೆಣ್ಣ ಹಲವರೊಡನೆ ಆಡಿದ
ಹೆಣ್ಣ ವೃತಗೆಡಿಸಿ ಕುದುರೆ ಯಾರೋಹಣ ಗೈದಂಗೆ ೧

ನಿಗಮ ತಂದು ನಗವನೆತ್ತಿ ಜಗವನುಳಹಿ ಮಗುವಿಗೊಲಿದು
ಅಗಲ ತುಂಬಿ ಮಿಗಿಲ ಭೂಸುರಗಳ ಹೊರದಂಗೆ
ಬಿಗಿದು ಬಿಲ್ಲವ ದೃಗವ ಮೂರನೆ
ಬಿಗಡಗೊಲಿಸಿದ ಸಗಟನೊತ್ತಿ
ಗಗನ ಪುರವಾಸಿಗಳಗೆಡಹಿದ ವಿಗಡ ಕಲ್ಕಿಗೆ ೨

ಮತ್ಸ್ಯರೂಪದಿ ಕಚ್ಚಪಾಗಿ ಸ್ವಚ್ಛಕೋಡದಿ ಬೆಚ್ಚ ನರಹರಿ
ಅಚ್ಚ ವಾಮನ ನಿಚ್ಚ ಕೊಡಲಿಯ ಮಚ್ಚು ಜನ ಕಂಗೆ
ಇಚ್ಛ ನಡೆಸಿದ ಮೆಚ್ಚಿ ಗೋಕುಲ ಹುಚ್ಚು ಮಾಡಿದ ಬಾಲನೆನಿಸಿ
ಸಚ್ಚರಿತ ಕಲಿನಾಶ ಮಹಿಪತಿ ನಂದ ನೊಡಿಯಂಗೆ ೩

## ೩೮೯

ಮಂಗಳ ಮಹಿಮ ಶುಭಾಂಗಗ ಮಂಗಳ
ಅಂಗಜ ಜನಕ ಶ್ರೀರಂಗಗ ಮಂಗಳ ಪ

ಸಿರಿದೇವಿ ಮುಖಪದ್ಮ ಭಂಗಗ ಮಂಗಳ
ಸುರ ಮುನಿಜನ ರಂಗ ಸಂಗಗ ಮಂಗಳ
ಶರಣಾಗತರ ಭವಭಂಗಗ ಮಂಗಳ
ದುರಿತಾಳಿವ್ಯಾಳ ವಿಹಂಗಗ ಮಂಗಳ ೧

ಯಾದವ ಕುಲಾಂಬುದಿ ಚಂದ್ರಗ ಮಂಗಳ
ಮಧು ಕೈಟಭಾರಿ ಮಹೀಂದ್ರಗ ಮಂಗಳ
ವಿಧಿಭವ ವಂದ್ಯ ನಾದುಪೇಂದ್ರಗ ಮಂಗಳ
ಸದಮಲಸದ್ಗುಣಸಾಂದ್ರಗ ಮಂಗಳ ೨

ನಾರದಗಾಯನ ಪ್ರೇಮಿಗೆ ಮಂಗಳ
ಸುರಸಾದಾಸಾಸಿರ ನಾಮಿಗೆ ಮಂಗಳ
ಗುರುವರ ಮಹಿಪತಿಸ್ವಾಮಿಗೆ ಮಂಗಳ
ಕರುಣಾಳು ಜಗದಂತ್ರಯಾಮಿಗೆ ಮಂಗಳ ೩

## ೩೯೦

ಮಂಗಳಂ ಶ್ರೀರಂಗಗ ಮಂಗಳಂ
ಇಂಗಿತ ಭಕ್ತರ ಅಂಗಸಂಗಾದವಗ ಪ

ಸಿರಿತಳಕ ಮಂಗಳ ಕಾಲಿಯ ವರದನಾ
ವರನಖಮಂಗಳ ಗಂಗೆ ಪಡಿದನಾ
ಚರಣ ಕಮಂಗಳ ಅಹಿಲ್ಯ ಉದ್ಧಾರಗ
ನೆರೆಜಂಘಗೆ ಮಂಗಳೆ ಶೊದಾನಂದನಾ ೧

ತೊಡೆಗಳಿಗೆ ಮಂಗಳ ಗರುಡ ವಾಹನನಾ
ನಡುವಿಗೆ ಮಂಗಳ ಧೃವ ಗೊಲಿದನ
ಒಡಲ ಕಮಂಗಳ ಜಗವಳ ಕೊಂಬನಾ
ಧೃಡ ನಾಭಿಗೆ ಮಂಗಳ ಬ್ರಹ್ಮ ಪಿತನಾ ೨

ಉರ ಸಕ ಮಂಗಳ ಉಪಮನ್ಯು ಪ್ರೀಯನಾ
ಸಿರಿವಕ್ಷಕ ಮಂಗಳ ಭೃಗು ರಕ್ಷನಾ
ಕರಗಳಿಗೆ ಮಂಗಳ ಕರಿರಾಜ ವರದನಾ
ಕೊರಳಿಗೆ ಮಂಗಳ ತುಳಸಿ ಧರನಾ ೩

ಇದು ಶೃತಿಗೆ ಮಂಗಳ ಹನುಮನೇ ಕಾಂತನಾ
ವದನಕ ಮಂಗಳ ವಿದುರ ಗೊಲಿದನಾ
ಅದೇ ಘ್ರಾಣಕೆ ಮಂಗಳ ಪ್ರಲ್ಹಾದ ವತ್ಸಲನಾ
ಪದುಮಾಕ್ಷಗ ಮಂಗಳ ಮದನ ಮೋಹನನಾ ೪

ಸಿರಸಕ ಮಂಗಳ ಫಣಿರಾಜಶಯನನಾ
ದೊರೆತನಕ ಮಂಗಳ ಶ್ರೀ ಭೂರಮಣನಾ
ಗುರುತನಕ ಮಂಗಳ ಉದ್ಧವತಾರಕನಾ
ಕರುಣಿಗೆ ಮಂಗಳಾರ್ಜುನ ಬೋಧನಾ ೫

ಪ್ರಭುಗೆ ಮಂಗಳ ಬಲಿ ವಿಭೀಷಣರ ಸ್ಥಾಪನಾ
ಅಭಯಕ ಮಂಗಳಾಜಮೀಳ ಪಾಲನಾ
ಅಭಿಮಾನಿಗೆ ಮಂಗಳಾ ಪಾಂಚಾಲಿಕಾಯಿದನಾ
ಪ್ರಭೆಗೆ ಮಂಗಳಾ ರವಿ ಸೋಮಾತ್ಮಕನಾ ೬

ಸಿರಿನಾಮಕ ಮಂಗಳ ನಾರದ ಪ್ರೀಯನಾ
ಪರತಕ ಕ ಮಂಗಲ ಶಿವ ವಂದ್ಯನಾ
ಗುರುವರ ಮಹಿಪತಿ ನಂದನಸಾರಥಿ
ಬಿರದಿಗೆ ಮಂಗಳಾಂಬರೀಷ ನೊಡಿಯನಾ ೭

## ೩೯೧

ಮಂಗಳಾರತಿಯಾ ತಂದೆತ್ತಿರೇ
ಮಂಗಳವದನೆಯರೆಲ್ಲಾ
ಅಮಂಗಜನಪಡದಾ ಮಂಗಳಾತ್ಮಗ ಪ

ಪೊಂಬ್ಬರಿವಾಣದೊಳಗ । ಕೆಂಬ್ಬವಳದಾರತಿ ನಿಲಿಸಿ
ಮುಂಬ್ಬರಿವರನ್ನ ಜ್ಯೋತಿಯಲಿ ಬೆಳಗಿರೆ ೧

ಉತ್ತಮ ಪುರುಷ ಶ್ರೀ ಹರಿಗೆ
ಮತ್ತ ಜಗನ್ಮಾತೆ ಸಿರಿಗೆ । ಮುತ್ತಿನ ಶಾಶೆಯನಿಟ್ಟು ಬೆಳಗಿರೆ ೨

ಜಯ ಜಯ ಶಿಷ್ಟ ರಕ್ಷಕನೇ
ಜಯ ಜಯ ದುಷ್ಟಶಿಕ್ಷಕನೇ । ಜಯವೆಂದು ಬೆಳಗಿ
ಮಹಿಪತಿ ಸುತಪ್ರೀಯಗೆ ೩

## ೩೯೨

ಮಂಗಳ ಜಯ ಜಯ ಮಂಗಳಾ । ಶುಭ ।
ಮಂಗಳ ಶ್ರೀ ಲಕ್ಷ್ಮೀ ನರಸಿಂಹಗೇ । ಸಹಸ್ರ ।
ಮಂಗಳ ಭಕ್ತರ ಸಲಹುವಗೆ ಪ

ಶರಣ ಪ್ರಲ್ಹಾದಗೆ ಪಟ್ಟಾಭಿಷೇಚನ ।
ಕರುಣದಿಮಾಡಿಸಿಸುರದಿಂದಲಿ ।
ಅರಸುತನವಕೊಟ್ಟು ಭಕ್ತಾಗ್ರಣಿ ಮಾಡಿ
ವರಮುಕ್ತಿಗಳ ಸೂರಾಡಿದವಗೆ । ಮಂಗಳ .... ೧

ಎನ್ನನು ನೆನೆಯಲಿ ನೆನೆಯದವರಿರಲಿ ಒಮ್ಮೆ ।
ನಿನ್ನ ನೆನೆದು ಘನ ಚರಿತೆಯನು ॥
ಮನ್ನಿಸಿ ಒದುವ ಕೇಳುವ ಮನುಜರ ।
ಚೆನ್ನಾಗಿ ಕಾಯ್ವೆನೆಂದಭಯ ವಿತ್ತವಗೆ ಮಂಗಳ ..... ೨

ಅಂದಿಗಿಂದಿಗೆ ತನ್ನ ದಾಸರಾದಾಸನಾ ।
ಮಂದಿರ ಸಾರಿದವಗೆ ದಯದೀ ॥
ಚಂದಾಗಿ ತನ್ನ ಭಕುತಿ ಎಚ್ಚರವ ನೀವ ।
ತಂದೆ ಮಹೀಪತಿ ಸುತ ಪ್ರೀಯಗೆ ೩

## ೩೯೩

ಜಯದೇವ ಜಯದೇವ ಜಯಗೋಪಾಲಕೃಷ್ಣಾ ।
ಜಯ ಜಯಯೋಗೀ ಮಾನಸ ಮೋಹನ ಘನಕರುಣಾ ಪ

ದೇವಕಿವಸುದೇವರ ಭಾವನೆ ಪೂರಿಸಲಿ ।
ಶ್ರಾವಣ ಕೃಷ್ಣಪಕ್ಷದ ಅಷ್ಟಮಿರೋಹಿಣಿಲಿ ॥
ತೀವಿದ ಚಂದ್ರೋದಯ ರಾತ್ರಿಯ ಕಾಲದಲಿ ।
ಋವನದಿ ಅವತಾರವ ಮಾಡಿದೆನೀ ವೇಗದಲಿ ೧

ಸೊಕ್ಕಿದ ಕಂಸನ ಕೊಂದು ದುಷ್ಕೃತನಾಶನವಾ ।
ಮುಖ್ಯಮಾಡು ಕಾರಣ ಧರ್ಮ ಸ್ಥಾಪನವಾ ॥
ಸಖ್ಯದಿ ಕಟ್ಟಲು ಉಗ್ರಶೇನಗೆ ಪಟ್ಟವಾ ।
ಅಕ್ಕರದಿಂದಲಿ ಬೆಳೆದೆ ಗೋಕುಲದಲಿ ದೇವಾ ೨

ಕುರುಕುಲಾನ್ವಯ ಜೀವನರೆಲ್ಲರ ಸೆಬಡಿದೆ ।
ಚರಣವನಂಬಿದ ಪಾಂಡವರನು ಸ್ಥಾಪನಗೈದೆ ।
ಪರಪರಿಯಿಂದಲಿ ಭಜಿಸುವ ಭಕ್ತಾವಳಿ ಪೊರೆದೇ ।
ಗುರುವರಮಹೀಪತಿ ಸುತ ಪ್ರಭುಸಲಹೆನ್ನನು ಬಿಡದೇ ೩

## ೩೯೪

ಜಯ ಜಯ ಮಂಗಳ ಗುರುಮೂರ್ತಿ ।
ಜಯಸುರವರ ಪಾವನಕೀರ್ತಿ ಪ

ಮೊಲದಜ್ಞ ತಮನಸುವನೆ ಬಗೆದೆ ।
ವಿದಿತ ವಿವೇಕ ನಗವನೊಗೆದೆ ।
ಒದಗಿ ಸುಜ್ಞಾನ ಧರೆಯ ತಂದೆ ।
ಬುಧರ ಸದ್ಭಾವ ಸ್ತಂಬದಲೊಗೆದೆ ೧

ಪ್ರೇಮಪ್ರೀತಿ ರತಿವೆಂಬುವದಾ ।
ಭೂಮಿಯ ಬೇಡಿದ ಮೂರ್ಪಾದಾ ।
ದಮೆಶಮೆ ಗುಣಕ್ಷತ್ರಿಯ ವೃಂದಾ ।
ಸುಮನರ ಬಿಡಸಿದೆ ಸೆರೆಯಿಂದ ೨

ಅಪದಿ ಗೋಕುಲದಲಿ ನಲಿದೆ ।
ತಾಪತ್ರಯ ಮುಪ್ಪುರ ವಳಿದೆ ।
ವ್ಯಾಪಿಸಿ ಕಲಿಮಲ ಬೆಳಗಿಸಿದೆ ।
ಕೃಪೆಯಲಿ ಮಹೀಪತಿ ಸುತಗೊಲಿದೆ ३

## ३೯೫

ಜಯರಘುರಾಮಾ । ಸದ್ಗುಣ ಧಾಮಾ ।
ದಯದಾಗರ ಘನಶಾಮಾ ಪ

ಜಯರಘುರಾಮಾ । ಸದ್ಗುಣ ಧಾಮಾ
ದಯದಾಗರ ಘನ ಶಾಮಾ ।
ಭಯಹರನೇಮಾ ರಣನಿಸ್ಸೀಮಾ ।
ತ್ರಯಂಬಕ ವಿಶ್ರಾಮಾ ।
ಪ್ರಿಯಕರ ನಾಮಾ ಪೂರಿತ ಕಾಮಾ ।
ಶ್ರಯಸುದಾಯಕ ಮಹಿಮಾ ೧

ಸುರಸಹಕಾರ ಇನಕುಲೋದ್ಧಾರಾ ।
ಧರಣೀಸುತೆ ಮನೋಹಾರಾ ।
ಶರಯುತೀರಾಯೋಧ್ಯ ವಿಹಾರಾ ।
ಚರಿತಪಾರಾ ವಾರಾ ।
ಪರಮೋದಾರಾ ಸರ್ವಾಧಾರಾ ।
ದುರತಾವಳಿವಿದಾರಾ ೨

ವನರುಹಾಸನ ವಂದಿತಚರಣಾ ।
ಜನನಿ ಕೌಶಲ್ಯಾ ನಿಧಾನಾ ।
ಅಣುರೇಣು ಜೀವನಾ ವ್ಯಾಪಕಪೂರ್ಣ ।
ಕನಕಾಂಬರ ಭೂಷಣ ।
ಮುನಿಜನ ರಂಜನಾ ದೈತ್ಯವಿಭಂಜನಾ ।
ಮಹಿಪತಿ ನಂದನ ಪ್ರಾಣಾ ೩

## ೩೯೬

ಜೋ ಜೋ ನಿಜಕಂದ । ಮುಕುಂದಾ ।
ಜೋ ಜೋ ಪರಮಾನಂದ ಪ

ಆಲದೆಲೆಯಲಂದು । ಮಲಗಿರಲು ।
ಲಾಲಿಯಂದರು ಆರಲ್ಲಿ ೧

ಇಂದಿರೆಪತಿ ನರರ । ಸುಖಬಯಸಿ ।
ಬಂದ ಫಣೀಂದ್ರನ । ತ್ಯಜಿಸಿ ೨

ಗುರುಮಹೀಪತಿ ಸ್ವಾಮಿ । ರಘುವೀರಾ ।
ಸುರಮುನಿಜನ ಸಹಕಾರಾ ೩

## ೩೯೭

ಜೋಜೋಜೋ ಬಾಲ ಮುಕುಂದಾ ।
ಜೋಜೋ ಯೋಗಿ ಹೃದಯಾನಂದ ।
ಜೋಜೋ ನಮ್ಮ ಗೋಪಿಯ ಕಂದಾ ।
ಜೋಜೋ ಗೋಪಾಲ ಗೋವಿಂದಾ । ಜೋ ಜೋ ಪ

ಉರಗರಾಜನ ಹಾಸಿಗೆ ಮೇಲೆ ।
ಶಿರಿದೇವಿ ಕೈಯಲಿ ಶೇವೆಯ ಕೊಳ್ಳುತಲಿ ।
ಭರದಿ ನಾರದ ಗಾಯನದಲಿ । ಇಂಥಾ ।
ಮೆರೆವ ಯೋಗದ ನಿದ್ರೆಯಲೀ ॥ ಜೋಜೋ ೧

ಆದನೆಲ್ಲವ ಬಿಟ್ಟು ಶ್ರೀಹರಿ ।
ವಿದಿತ ಬಾಲಕ ವೇಷವದೋರಿ ।
ಪುದುಳದಿಂದಲಿ ತೊಟ್ಟಿಲ ಸಾರಿ ।
ಮುದದಲ್ಲಾಡುವ ಸುರ ಸಹಕಾರಿ ॥ ಜೋಜೋ ೨

ಏನು ಪುಣ್ಯವೋ ಗೋಕುಲ ಜನರ ।
ಶ್ರೀ ನಂದಾತ್ಮಜ ನಾದವಿನೋದಾ ।
ಧ್ಯಾನ ಮೌನಕೆ ಗೋಚರಪಾದ । ಮಹಾ ।
ದಾನಿ ಮಹೀಪತಿಸುತ ಪ್ರಿಯನಾದಾ । ಜೋ ಜೋ ೩

## ೩೯೮

ಜೋ ಜೋಯನುತಲಿ ಗೋಪಿ
ವಾಣಿಲಿತೂಗಿದಳು ಕೃಷ್ಣನ್ನ ಜೋ ಜೋ ಪ

ರನ್ನ ಖಚಿತ ತೊಟ್ಟಿಲದೊಳಗ
ಚಿನ್ನಾಂಬರದ್ಹಾಸಿಗಿ ಹಾಕಿ
ಉನ್ನತ ಮಹಿಮನ ತಂದಿರಿಸಿ
ಚೆನ್ನಾಗಿ ಪಿಡಿದ್ಹೆಡೆಯಾಡಿಸುತಾ ೧

ದುಷ್ಟ ಸೋದರ ಮಾವನ ತಲೆಯಾ
ನೆಟ್ಟನೆ ಕತ್ತರಿಸಲು ಜೀಯ್ಯಾ
ಅಷ್ಟಮಿ ದಿವಸದ ರಾತ್ರಿಯಲಿ
ಸ್ಪಷ್ಟದಿ ಪ್ರಕಟಿಸಿದ್ಯೆಧರಿಲಿ ೨

ಸುರರ ಮನೋಬಯಕೆಯವೃಕ್ಷಾ
ತ್ವರಿತದಿಫಲಿಸಿತು ಪ್ರತ್ಯಕ್ಷಾ
ಗುರುಮಹಿಪತಿಸುತ ಗಧ್ಯಕ್ಷಾ
ಗಿರುವೆನೀ ಮಾಡು ಸಂರಕ್ಷಾ ೩

## ೩೯೯

ಜೋ ಜೋ ಜೋ ಜೋ ದೇವರದೇವನೆ ಜೋ ಜೋ ಪ

ಶರಣ ಹೃತ್ಕು ಮುದನಿಶಾಮಣಿ ಜೋ ಜೋ
ದುರಿತಾವಳಿತಮದ್ಯುಮಣೀ ಜೋ ಜೋ
ಸುರಮುನಿಜನ ಚಿಂತಾಮಣಿ ಜೋ ಜೋ
ಮೆರೆವಗೋಪಾಳ ಚೂಡಾಮಣಿ ಜೋ ಜೋ ೧

ಬಾಲಕಲೀಲಾಲೋಲನೆ ಜೋ ಜೋ
ಮೂಲೋಕಜೀವನಪಾಲನೆ ಜೋ ಜೋ
ಕ್ಷುಲ್ಲಕರಿಪುಕುಲ ಶಾಲನೆ ಜೋ ಜೋ
ತಿಲಕಸ್ತೂರಿ ಬಾಲನೆ ಜೋ ಜೋ ೨

ಮೋಹನ ಮಾನಸ ಮೂರ್ತಿಯೆ ಜೋ ಜೋ
ಮಹಿಮನುಪಮ್ಯದ ಕೀರ್ತಿಯೆ ಜೋ ಜೋ
ಇಹಪರದಲಿ ಭಕ್ತ ಸಾರ್ಥಿಯೆ ಜೋ ಜೋ
ಮಹಿಪತಿನಂದ ನಿಷ್ಟಾರ್ಥಿಯೆ ಜೋ ಜೋ ೩

## ೪೦೦

ಶ್ರೀಮತ್ಕಾಂಚನ ಕೋಟಿರನ್ನತನಯಾ ।
ಕ್ಷೀರಾಂಬುನಿಧಿ ಮಧ್ಯದಿ ।
ನೇಮದಿಂ ನಿಜಧಾಮದಲ್ಲಿ ರಮೆಯಾ ।
ಒಡಗೂಡಿ ಸುರಸಿದ್ಧದೀ ।

ಸಾಮಗಾಯನ ಪ್ರಿಯನಾಗಿನಿರುತಾ ।
ಪಾಲಿಪ ಲೋಕಂಗಳಂ ।
ಶ್ರೀ ಮಾಧವ ದಯಾನಿಧೇ ವಧುವರಾ ।
ಕುರ್ಯಾತ್ಸದಾ ಮಂಗಳಂ । ೧

ಭಾನುಕೋಟಿಯ ತೇಜದಿಂ ಬೆಳಗುವಾ ।
ಮುಕಟವು ಮಸ್ತಕದಿ ।
ಶ್ರೀ ನೀಲಾಳಕ ಭಾಲಮಧ್ಯಮೆರೆವಾ ।
ಕೇಶಗ ಪೌಂಡ್ರಕದಿ ।
ಸೂನಾಸಿಕದಿ ವಾರಜಾಕ್ಷಅಧರಿಂ ।
ದೊಪ್ಪುವ ಕರ್ಣಂಗಳಂ ।
ತಾನೀಕುಂಡಲ ಭೂಷಣಾ ವಧುವರಾ ।
ಕುರ್ಯಾತ್ಸದಾ ಮಂಗಳಂ ೨

ಶ್ರೀ ಲಕ್ಷ್ಮೀ ನಿಜಶಾರದಾಗಿರಿಸುತೇ ।
ಭಾರತೀ – ಶಚಿ– ಭಾಮಿನೀ ।
ಕಾಲಿಂದೀವರ ನರ್ಮದಾ ಸರಸ್ವತೀ ।
ಗಂಗಾ ತ್ರಿಪಥಗಾಮಿನೀ ।
ಪಾಲಿಸುವ ಗೋದಾವರೀ ಭೀಮರಥೀ ।
ಶ್ರೀ ಕೃಷ್ಣ ವೇಣಿಂಗಳಂ ।
ಮೇಲೆ ಕಾವೇರಿತುಂಗೆ ತಾವಧುವರಾ ।
ಕುರ್ಯಾತ್ಸದಾ ಮಂಗಳಂ ೩

ವಾರಿಜಾಸನ ವಾಯು ಶಂಕರಗುರು ।
ತ್ವಂಹೇಂದ್ರ ವಸಿಷ್ಠನು ।
ಭಾರದ್ವಾಜ ಪರಾಶರಾತ್ರಿ ಭೃಗು ಕ–
ಶ್ಯಪ ಕೌಶಿಕ ಶ್ರೇಷ್ಠನು ।
ಕಾರುಣೀ ಜಮದಗ್ನಿ ರಾಮ ಮರಿಚೀ ।

ವ್ಯಾಸಾದಿ ಋಷಿ ಪುಂಗಳಂ ।
ನಾರದಾದಿ ಮುನೀಂದ್ರರೀ ವಧುವರಾ ।
ಕುರ್ಯಾತ್ಸದಾ ಮಂಗಳಂ ೪

ಇಂದ್ರೋವಹ್ನಿ ಪಿತೃಪತಿ – ನಿಋುಋುತಿ ।
ಮಕರೇಶ ಪ್ರಭಂಜನಾ ।
ಸಾಂದ್ರೈಶ್ವರ್ಯ ಕುಬೇರ ಈಶದಿಕ್ಪಾ
ಲಾದಿತ್ಯಶಶಿರಂಜನಾ ।
ಚಂದ್ರಾತ್ಮಜನುಭೌಮದೇವಗುರುತಾ ।
ಕವಿಮಂದ ಗ್ರಹಂಗಳಂ ।
ಸಾಂದ್ರಾಗೀಹ ಸಮಸ್ತಗಿರೀ ವಧುವರಾ ।
ಕುರ್ಯಾತ್ಸದಾ ಮಂಗಳಂ ೫

ಶ್ರೀ ಮತ್ಸ್ಯಾಕೃತಿ ಕೂರ್ಮನಾಗಿ ವರಹಾ ।
ನರಸಿಂಹನೆಂದೆ ನಿಸಿದಾ ।
ವಾಮನಾಭೃಗುವರ್ಯರಾಮರಘುಪಾ ।
ಯದುವಂಶದಲಿ ಜನಿಸಿದಾ ।
ತಾ ಮತ್ತೇ ನಿಜ ಬೌದ್ಧಕಲ್ಕಿ ಎನಿಸೀ ।
ತಾಳ್ದಾವತಾರಂಗಳಂ ।
ಶ್ರೀ ಮನೋಹರ ದೇವಕೀ ವಧುವರಾ ।
ಕುರ್ಯಾತ್ಸದಾ ಮಂಗಳಂ ೬

ಕಾಶೀ ಕಂಚಿ ಅವಂತಿಕಾ ವರಪುರೀ ।
ದ್ವಾರಾವತೀ ಮಥುರಾ ।
ದೋಷನಾಶಿಕ ಪುಣ್ಯಕ್ಷೇತ್ರ ಬದರೀ ।
ಶೇಷಾದ್ರಿವರ ಸೇತುಬಧ ತುಹಿನಾ ।
ರಜತಾದ್ರಿ ಸೈಲಂಗಳಂ ।
ಈ ಸಪ್ತಾಂಬುಧೀ ಸರ್ವದೀ ವಧುವರಾ ।
ಕುರ್ಯಾತ್ಸದಾ ಮಂಗಳಂ ೭

ದಶರಥಾತ್ಮಜನಾದ ರಾಮಜಗದೀ ।
ಜನಕಾತ್ಮಜಾ ಸೀತೆಯಾ ।
ಕುಶಲದೀ ನರಲೀಲೆಯಿಂದ ಮೆರೆವಾ
ವೈಭವ ಸಂಗಃತಿಯಾ
ಉಸರೀದಾ ಗುರುಮಹಿಪತಿಸುತ ಕ–
ನ್ನಡ ಭಾಡೆ ಶ್ಲೋಕಂಗಳಂ ।
ವಸುಧೆಯಲಿ ಸ್ಮರಿಸುವವರಿಂಗೆ ಕೊಡುವಾ ।
ರಘುನಾಥ ಜಯಮಂಗಳಂ ೮

## ಉಗಾಭೋಗಗಳು

### ೪೦೧

ಕಮಲನಯನೆ ತಾನ್ಯಾಕ ಮಲ್ಹರಬಾರನೇ ।
ಕಮಲಭವ ವಂದ್ಯನು ಕಮಲಾಕ್ಷ ಧೋರನೇ

ಕಮಲಶರಪಿತನಾ ಕಮಲವ ಕಾಣದೇ ।
ಕಮಲಲಿ ತಾಪಯಿದು ಕಮಲಬಾಡುತಿದೇ ।

ಕಮಲ ತುಂಬಿಕಂಡರೆ ಕಮಲ ಬಾಗಿಸಿಂದು ।
ಕಮಲ ಮುಗಿವೆ ಮಹಿಪತಿ ನಂದನೊಡೆಯಾ ೧

### ೪೦೨

ಕಶ್ಯಪಋಷಿಯ ಪುತ್ರನ ಪೌತ್ರನೈಯಂಗ ।
ವಶ್ಯನಾಗಿದ್ದೊಡೆಯನ ತಂದೆವಳಿಯನಾ ।
ಲಸ್ಯಮಾಡದೆ ಸಿರಿವರಿದು ಬಿಸುಟನಾ ।
ಗ್ರಭವನಾ ತಾತನಾ ತಂಗಿಯಾ ॥

ದೃಶ್ಯದಿಂದೊಡಗೊಂಡು ಬಂದಸೂಸತಿಯಾ ।
ಶಿಶ್ರೂಷಕ್ಕೆ ಮೆಚ್ಚದಾನೊಳಗೀಹ ಖೂಳನಾ ।
ಯುಷ್ಯರೇಖೆಯ ತೊಡದವನಂಶಹರಿದು ।
ರಾಘವ ರಕ್ಷಿಸುವದೆಮ್ಮನು ।

## ೪೦೩

ಕಾಳಿಫಣಿಪಣವನೇರಿ ಕಾಳಿಫಣಿಪಣವನೇರಿ
ನಿಂದುದೇವ ಉನ್ನತಪೇಣು ಕೈಯಿಂದ ಪಿಡಿದು
ಮ್ಯಾಲನಾನಾ ಪರಿಯ ಸುಸ್ವರದಿ ಊದುತಲಿ
ಧಿಗಿಧಿಗಿಲ ಧಿಂಕಿಟ ಧಿಗಿಯೆಂದು ಕುಣಿಯೆ
ಕಾಲಲಿಟ್ಟೆಹ ಕಡಗ ಗೆಜ್ಜೆ ಕಿಂಕಿಣಿಗಳ
ಝಣಝಣಕು ಝೇಝುಝೇಂಕು ಎಂಬ ದನಿಯಾ
ಕೇಳುತಲಿ ಬಂದಾ ಗೋವಳರಿಗ್ಗರುಷವನಿತ್ತಾ
ಮಹಿಪತಿಸುತನೊಡಿಯಾ ।

## ೪೦೪

ಗೋಪವಾಹನ ದೇವ ಗೋಭರಿತ ಚಕ್ರಧರ ।
ಗೋಪವಾಹನ ಮುಖ್ಯಯ ಗೋಜ ಪೂಜಿತ ಪಾದ ।
ಗೋಪ ಕೋಟಿ ಪ್ರಕಾಶ ಗೋಭವಾನ್ವಯತಿಲಕ ।
ಗೋರಾಸಿಜಾ ವಲ್ಲಭಾ ॥
ಗೋಪ ಕುವರನೆನಿಸಿ ವರಗೋಕುಲವ ವಿಹರಿಸುತ ।
ಗೋಪ ಮುಳಿಯಲು ಕರದಿ ಗೋವರ್ಧನೆತ್ತಿ –
ಗೋಪಾಲರಂ ಪೊರೆದ ಗುರುಮಹಿಪತಿ ಪ್ರಭುವೆ ।
ಗೋಕರ್ಣಶಯನ ಸಲಹೋ ॥

## ೪೦೫

ಗೋಪಾತ್ಮಜಂ ಬಿಟ್ಟ ಗೋಕರ್ಣ ಬಾಣ ಬರೆ ।
ಗೋಪ ದಾಗ್ಯದ ಲೊತ್ತಿ ಗೊಬಾಧೆ ಯನೆ ಬಿಡಿಸಿ ।
ಗೋಪಸುತನಂ ಕಾಯ್ದೆ ಗೋಪ ಗೋಭ ವಯುಗ್ಮ ।
ಗೋ ಗೋಜ ಸುರಪಾಲಕ ॥

ಗೋಪ ವೈರಿಯ ಶಿರದಿ ಗೋಸ್ತುತನೆ ನೃತ್ಯ ದಿಂ ।
ಗೋಪ ಗೋಪೇರ ಗೋ ಗೋ ಗಳಿಗೆ ಸುಖವಿತ್ತೆ ।
ಗೋಪಡೆದನೆಯ್ಯ ವರದನೇ ಮಹಿಪತಿ ನಿಜ ಪ್ರಭು ।
ಗೋಪಾಲಕೃಷ್ಣ ಸಲಹೋ ॥

## ೪೦೬

ಜೆನ್ನೊಡಲ ಮರಗ್ಟುಳ ಬಾನ್ಮಣಿಗಳಾವನಡಿ
ಮುನ್ನೊಲುವ ಪಡೆದು ಬೆಳಗುವರೆಂದು ಪಾಲ್ಗಡಲ
ಕನ್ನೆನಾಲ್ಕೈಮೊಗರ ನೆರೆಯ ಪಲಗಣ್ಣಾದರೆಯಾಣ್ಮ ಪಂಚೆರೆಯುತ ।
ಕನ್ನ ವಿಲ್ಲೇಯ ಬಣ್ಣ ಮಯ್ಯ ನರಸೆನುತೆರಗಿ
ತನ್ನಕೈಪೂಮಾಲೆ ಕೊರಳಿಗಿಕ್ಕಳಿದಾಗಿ
ಇನ್ನು ಹರಿಸರಿ ದೈವ ವಿಲ್ಲೆಂದು ಪಾಡಿದನು
ಗುರುಮಹಿಪತಿ ಯಣುಗನು ॥

## ೪೦೭

ತಿಳಿದು ನೋಡಯ್ಯಾ । ತಿಳಿದು ನೋಡಯ್ಯಾ ಎಲೋಜಿಯ್ಯಾ ।
ಸಿರಿಪ್ರಿಯಾ ಅಂಬುಜನಯ್ಯಬ್ಜಗೈಯ್ಯಾ ಕಮಿನೀಯ ಕಾಯಾ ।
ಸಲೆ ನಿನ್ನ ಚರಣ ಕಮಲದ ರಜಕ ನಂಬಿ ಮೊರೆ ಹೊಕ್ಕವನ ।
ಅವಗುಣವ ನಾರಿಸಬಹುದೇ ।
ಇಳೆಯೊಳಗ ಭವದುರಿತ ಬಂದಂಡಲಿಯೆ ಎನ್ನ ।
ನಿರ್ದಯದಿಂದಲಿ ಉಪೇಕಿಪುದುಚಿ – ತವೇ ನಿನಗೆ ॥

ಜಲಧರನ ವರ್ಷಣಕ ಪಕ್ಷಿಗಳಿಗಾಶ್ರಯದ ।
ವೃಕ್ಷ ಕೊಡುತಿರೆ ಮತ್ತೆ ತೆರನಾವುದೈ ।
ಲಲನೆ ಕುಂದಿನಿಯ ನೊಡಲಮೃತ್ಯನ ವಮಾನ ।
ಒಡೆಯ ನೋಡಲ್ಕಾವರಾರೈ ।
ಜಲಜಾಕ್ಷ ಎನ್ನ ಭಯ ಪರಿಹರಿಸಿ ।
ಸಲಹದಿರ್ದಡೆ ಮತ್ತೊಡೆಯರಾರು ।
ಮಹಿಪತಿ ಸುತ ಪ್ರಭುವೆ ॥

## ೪೦೮

ನಿನ್ನನೇ ಮೊರೆಹೊಕ್ಕಿಹೆನೋ ।
ನಿನ್ನ ನಂಬಿದ್ದವರ ಘನ್ನ ಭಯ ಹರಿವೆ ಎಂದು
ಧ್ಯಾನ ಮೌನಗಳೆಂಬ ಜ್ಞಾನ ಸಾಧನಗಳನು ।
ಏನು ಅರಿಯದ ಅತಿ ದೀನನಾ ಭವಕಂಜಿ

ಹಾಲೋಳಗೆದ್ದೆನ್ನ ಜಲದೊಳಗೆದ್ದಯ್ಯ ।
ತಿಳಿದಂತೆ ಮಾಡೋ ನೀ ಮಹಿಪತಿ ಸುತ ಪ್ರಿಯಾ

## ೪೦೯

ಪತ್ರ ವರರಥ ಪುತ್ರ ಪುತ್ರ ಪತಿಜಿತ ಪಿತ್ರ ।
ಪಿತ್ರ ಸುಖದ ಚರಿತ್ರ ರಿತ್ರಾಢಣ ವಿಚಿತ್ರ ।
ಚಿತ್ರಮಣಿಕಟಿಸೂತ್ರ ಸುತ್ರಾಮ ಸುತಮಿತ್ರ ।
ಮಿತ್ರ ಶತತೇಜ ಗಾತ್ರಾ ॥

ಗಾತ್ರ ರಹಿತನ ಮಿತ್ರ ಮಿತ್ರಜರಗತಿ ಸತ್ರ ।
ಸತ್ರಾ ತಾ ಧೃತ ಗೋತ್ರ ಗೊತ್ರೈಕ ಜನ ಸ್ತೋತ್ರ ।
ಸ್ತೊತ್ರ ಧರನುತ ಧಾತೃ ಧಾತ್ರೀಶ ।
ಗುರು ಮಹಿಪತಿಜ ಪ್ರಭು ಸಲಹು ಕಮಲ ನೇತ್ರ ॥

## ೪೧೦

ಬಲ್ಗೈಯರಸರಂಜಿ ಸುಮ್ಮನಿರೆ ದಶಕಂಠ
ಬಲ್ಗೆರಗಿ ನಿರ್ಗಾರಿ ಪೋಗಿ ಮುನಿ ಕೌಶಿಕನ
ಸೋಲ್ಗೇಳಿ ನಡೆತಂದು ಅಂಗುಟದಲೆತ್ತಿ
ಬಾಂದಳ ಗಂಗೆಯಾ ಪೊತ್ತನಾ

ಮೇಲ್ಗಂಡ ಧನು ಮುರಿಯೆ ನೋಡಿಹರುಷಿತಳಾಗಿ
ಕಾಲ್ಗೆರಗಿ ವೈದೇಹಿ ಕರದ ಪೂಮಾಲೆಯ ಕೊ
ರಳ್ಗಿರಿಸೆ ಮುದ ವಿತ್ತ ಮಹಿಪತಿದಜ ಪ್ರಭುರಾಮ
ನೇಳ್ಗೆಯ ಸ್ತುತಿ – ಸಲಳವೇ ॥

## ೪೧೧

ಪಾಲಯಾ ಉರಗಾರಿ ಗಮನಾ ।
ಶ್ರೀ ಲಕ್ಷುಮಿ ರಮಣಾ ।
ಕಾಲಿ ಫಣಿಮದ ಭಂಜನ ಸಾಗರ ।
ಕೀಲನ ಫಣಿಶಯನಾ ।
ಭಾಲಲೋಚನ ವಂದಿತ ಚರಣಾ ।
ತ್ರಿಲೋಕ ಜೀವನಾ ।
ವಾಲಿ ಮರ್ದನ ಶರಣಾಗತ ಜನ ।
ಪಾಲ ಕಮಲ ನಯನಾ ೧

ವಾರಜಾನನ ವಾರಿಜ ಭ್ರಮರಾ ।
ಕರಿಭಯ ನಿವಾರಾ ।
ನೀರದ ನೀಲ – ಶರೀರಾ ।
ಕೇಶವ ಕೇಯೂರ ಕೌಸ್ತುಭಧಾರ ।
ನೀರಜಾಸನನುತ ಯದುವೀರಾ ।

ಶ್ರೀರಂಗ ಗದಾಧರಾ ।
ಸಾರಂಗ ಪಾಣಿ ಸುಜನ ।
ಹೃದ್ವನಜ ವಿಹಾರ ಧರಣೀಧರಾ ೨

ಮಂದರೋದ್ಧರ ಪತಿತ ಪಾವನ ।
ಕುಂದ ಕುಟುಲಮರದನಾ ।
ಸ್ಯಂದ ಜನಕ ಸಖಸ್ಮರಪಿತಹರಿ ।
ಗೋವಿಂದ ಧುರಿತ ಹರಣಾ ।
ನಂದಕಿಶೋರ ಶ್ರೀ ನಾರಾಯಣಾ ।
ಸುಂದರ ವದನಾ ।
ಮಂದರಕುಲರಿಸಹೋದರ ಮಹಿಪತಿ ।
ನಂದನ ಪ್ರಭು ಕೃಷ್ಣಾ ೩

## ೪೧೨

ಪುಷ್ಕ ರಾದ್ಯಾದ ತೀರ್ಥಂಗಳಾವನ ಪಾದ ।
ಪುಷ್ಕರದ ಜಲಕ ಸಮಬಾರದೆಂದು ಭವಘನ ।
ಪುಷ್ಕರದ ಸರಿತೆಯಂ ಸಿರಿದೊಳಾಂತನು
ದೈವ ಪುಷ್ಕರ ಶಾಮನೆಂದು ।
ಪುಷ್ಕರದಿ ವಾರಿಚರ ನೋಯಸೆರದನೀ ಶಸಲೆ ।
ಪುಷ್ಕರವನ್ನೆತ್ತಿ ಮೊರೆಯಿಡೆ ಬಂದು ಅವನಿತ್ತ ।
ಪುಷ್ಕರವ ಕೊಂಡಲಿದೆ ಮಹಿಪತಿ ಜ ಪ್ರಭು ಸ್ವಾಮಿ ।
ಪುಷ್ಕರಣಿವಾಸ ಸಲಹೋ ೧

## ೪೧೩

ಯೆಲರುಣಿಸು ಮೈಮಂಚ ಪಕ್ಕಯಾಣ್ಮನದೇಶ ।
ನೆಲವೆಣ್ಣು ಸಿರಿದೇವಿಯರ ಸಿಯರುಪಾಲ್ಗಡಲ ।
ನೆಲೆಯ ಮನೆ ನೊರೆಲೆಯ ಮ್ಯಾಲ ಕುಳ್ಳಿರ್ಪವನು ।
ಹಿರಿಯ ಮಗ ಗಿಳಿದೇರನು ೧

ಚೆಲುವ ಕಿರಿಯ ಮಗ ನಾರದನ ಗಾನ ಸನಕಮುನಿ
ಕುಳಹ ಪಲಗಣ್ಣ ಸುರರೆಂಬ ಬಂಟರು ಕದವ ।
ಒಲಿದ ಜಯ ವಿಜಯರಿಂದೊಪ್ಪುತಿಹ ಗುರು ಮಹಿ ।
ಪತಿಜ ಪ್ರಭು ಸಲಹು ನಮ್ಮನು ೨

## ४೧೪

ರಾಮ ಬಾಣಾಕ್ಷಪಿತ ರಾಮ ಶಶಿಭುಜ ಶೋಭ ।
ರಾಮಾಕ್ಷಿ ಮುಖವಿನುತ ರಾಮಣಿಯಕ ರೂಪ ।
ರಾಮಾನುಜನೆ ಬಾಣ ರಾಮರಸ ಭುವ ।
ನಾಭಿರಾಮ ಸಕಲಾಂತರಾತ್ಮ ।
ರಾಮ ಋತು ಶಶಿವದನ ರಾಮ ಭಂಗ ಪ್ರಿಯನೇ ।
ರಾಮ ಶಾಮಾಸುರ ವಿರಾಮ ಕೃತ ಗುಣಮಂದಿ ।
ರಾಮಯ ವಿದೂರ ಶ್ರೀ ಗುರುಮಹಿಪತಿ ಪ್ರಭುವೆ
ರಾಮರಕ್ಷಿಸು ನಮ್ಮನು ೧

## ४೧೫

ಶರಣು ಶರಣು ಶರಣರಕ್ಷಕ ಶರಧಿವಾಸನೆ ಕೇಶವಾ ।
ಸರಸಿಜಾಪತಿ ಸರ್ವವ್ಯಾಪಕ ಸಕಲದುರಿತ ನಿವಾರಣಾ ॥
ಕರುಣಾಸಾಗರ ಕರಿಯಾಭಯಹರ ಕಮಲಭವಶಿವವಂದಿತಾ ।
ಪರಮ ಪಾವನ ಪದುಮ ಆನನ
ಪದುಮಲೋಚನ ದೇವ ದೇವಾ ॥
ಅಭಿನವಜಲಧರ ಸುಂದರಾ ಜಯ ।
ವಿಭೋಜಿತ ದಶಕಂಧರಾ ಜಯ ।
ಶುಭಕರ ಸನ್ಮೂರ್ತಿ ಜಯ ಜಯ ಪತಿತೋದ್ಧಾರಕಾ ॥
ಪ್ರಭುವೇ ಮಹಿಪತಿಸುತನ ಜೀವ ದೇವ ದೇವಾ ॥

## ೪೧೬

ಸಾರಂಗ ಧೃತನಾಗ್ರ ಭವಳ ಮುಖ ವಾರಿರುಹ ।
ಸಾರಂಗ ನೀಲೋತ್ಪಲ ಶ್ಯಾಮ ಜಗದಾತ್ಮ ।
ಸಾರಂಗ ರಾಜ ರಥ ನೆನಿದವರ ದುರಿತದ
ತು ಸಾರಂಗಳಂ ಸೇರಿಸೀ ।
ಸಾರಂಗಳಂ ಕೊಡುವೆ ಸರ್ವೇಶಯೋಗಿ ಜನ ।
ಸಾರಂಗ ಜೀಮೂತ ಕ ಕುಬೇಶನುತ ಪಾದ ।
ಸಾರಂಗ ನದಿ ಪಿತನೆ ಗುರು ಮಹಿಪತಿ ಪ್ರಭುವೆ ।
ಸಾರಂಗ ವರದ ಸಲಹೋ ।

## ೪೧೭

ಸಾರಂಗ ರಾಜ ನಿಜ ವೈರಿ ಬಲೆಯೊಳಗಾಗಿ ।
ಸಾರಂಗ ವರ್ಣದೇವನೇ ರಕ್ಷಿಸೆನೆ ಕೇಳಿ ।
ಸಾರಂಗ ರಿಪು ಆಶನಿಯೇರಿ ಬಂದುದ್ಧರಿಸಿ
ಸಾರಂಗ ಧಾಮವಿತ್ತೆ ।
ಸಾರಂಗ ವಾಹನ ಪ್ರೀಯ ಕಮಲ ಭವ ಜನಕ ।
ಸಾರಂಗ ವಾಹನ ಮರ ಮುಖ್ಯನುತ ಚರಣ ।
ಸಾರಂಗಧರ ಮಿತ್ರ ಗುರು ಮಹಿಪತಿ ಪ್ರಭುವೆ ।
ಸಾರಂಗ ಪಾಣಿ ಸಲಹೋ ೧

## ೪೧೮

ಸೋಮಮಿತ್ರ ಪ್ರೀಯ ಸರಸಿಜೋದ್ಭವನಯ್ಯಾ ।
ಸೋಮಧರ ಶಾಮಾಂಗ ಸಕಲ ದೇವೋತ್ತುಂಗ ।
ಸೋಮ ಪುತ್ರಿಯ ರಮಣ ಕೋಟಿ ಲಾವಣ್ಯಘನ ।
ಸೋಮಪತಿ ಸೇವ್ಯ ಚರಣಾ ।
ಸೋಮಪುತ್ರನ ಕೈಯ್ಯಲಳಿಸಿ ಸಂದಿನ ಮೈಯ್ಯ ।

ಸೋಮ ಪುತ್ರಂಗೊಲಿದೆ ರಾಜ ಪೂಜಕ ತಂದೆ ।
ಸೋಮಪತಿ ಶಯನ ಗುರು ಮಹಿಪತಿ ಸುತ ಪ್ರಾಣ ।
ಸೋಮ ಕುಲಭವನೆ ಸಲಹೋ ॥

## ೪೧೯

ಹರಿಯಾನಕ ಚಂದ್ರಕೆ ಚಕೋರಾದವರಾ ।
ಹರಿಯಾನಾಮಾ ಘನಕೆ ಮಯೂರಾದವರಾ ।
ಹರಿಯಾಪಾದಲಿಂಗಕೆ ಪಾವುಡಾದವರಾ ।
ಹರಿಯ ನಿರ್ಮೂಲ್ಯವಾದಾ ತುಲಸಿಯಾ ಘ್ರಾಣಿಸುವಾ ।
ಮಧುಕರಾದವರಾ ಪರಾಗಕೊಂಬುವರಾ ।

ಹರಯಾ ತೀರ್ಥ ಪ್ರಸಾದಾ ಚಾತಕದವರಾ ।
ಹರಿಯಾ ಸೇವೆ ಸಕಲರ್ಪಿತ ಮನದವರಾ ।
ಗುರು ಮಹಿಪತಿಸ್ವಾಮಿ ವಲುವೆಯನುಳ್ಳಾ ।
ವರದಾಸದಾಸನಾಶ್ರಯ ಸಾಖ ಸದನಾ ೧

## ೪೨೦

ಹರಿಪದ ಪದ್ಮ ಪರಾಗ ಮಧುಕರ – ರಾಧರ ನೆರೆ ಹಿಡಿಯೋ ।
ಹರಿಯ ಚರಿತ್ರ ಸುಧಾರಸ ಶ್ರವಣ ದ್ವಾರದಲಿ ಕುಡಿಯೋ ॥
ಹರಿದಾಡುವ ಚಂಚಲ ಚಿತ್ತವೇ ಮನನ ಧ್ಯಾಸದಿ ಜಡಿಯೋ ।
ಹರಿಸುವ ತಾಪವ ಗುರು ಮಹಿಪತಿ
ಪ್ರಭುನಾಮವ ನೀನುಡಿಯೋ ೧

## ೪೨೧

ಸಾರಸಾರ ವಿಚಾರ ವಿವೇಕದ ದಾರಿಯನೇ ಬಲಿಯೋ ।
ತೋರುವದೀ ಸಂಸಾರ ಸುಖ ಮೃಗ ನೀರಿನ ಪರಿ ತಿಳಿಯೋ ॥

ಸಾರುವ ಶೃತಿ ಗುರು ವಾಕ್ಯದಿ ಸ್ವಾನುಭವರತಿಯಲಿ ನಲಿಯೋ ।
ತಾರಕ ಗುರುಮಹಿಪತಿದಯದಿ ಭವರೋಗ ವಿಷಗಳಿಯೋ ೨

## ೪೨೨

ಭಂಗ ಬಡುವ ಸಂಸಾರದಿ ಕುಜನರ ಸಂಗದಲಿ ಸರಿಯೋ
ಅಂಗದೊಳಗ ಬಲಿದಿಹ ಆರರಿಗಳದಿಂಗಿತವನು ಜರಿಯೋ ।
ಮಂಗಳಕರ ಸುಖ ನೀಡುವ ಹರಿ ಭಜನಂಗಳರತಿ ಬೆರಿಯೋ ।
ಹಿಂಗದೆ ಗುರು ಮಹಿಪತಿ ಪ್ರಭು
ದಯದಲಿ ಕಂಗಳ ನೀದೆರೆಯೋ ೩

## ೪೨೩

ಸಲಹಬೇಕಯ್ಯಾ ಎನ್ನ ನೀನು । ಶರಣರ ಸುರಧೇನು ।
ತಪ್ಪು ನೋಡುವದೇನು ಇಳಿಯೊಳು ।
ನಿನ್ನ ಚರಣವನು ನಂಬಿದ ನಾನು

ವಿಷಯ ಸುಖಗಳಲ್ಲಿ ಬೆರೆದೆ । ಒಳಿತು ಗುಣ ಜರಿದೆ ।
ಭಜನಿ ಮಾರ್ಗ ತೋರದೇ । ಘಸಣಿಗೆ ಬಿದ್ದೆ ನಾನು ।
ಬರಿದೇ ಹರಿಯ ಮರೆದೇ

ನಾನಾ ಯೋನಿಗಳಲ್ಲಿ ಹಿಂದೆ । ಜನಿಸಿ ಬಹುನೊಂದೆ ।
ನರದೇಹದಲಿ ಬಂದೆ । ಘನಗುರು ಮಹಿಪತಿ ತಂದೆ ।
ಪ್ರಭು ಶರಣೆಂದೆ

## ೪೨೪

ಶರಣು ಸರ್ವಾತೀತೆ ಶ್ರೀದೇವಿ ವಿಖ್ಯಾತೆ ।
ಶರಣು ಸಾರಸ ನಯನೆ ಪೂರ್ಣೇಂದು ನಿಜವದನೆ ।

ಶರಣು ರತ್ನಾಭರಣೆ ದಿವ್ಯಾಂಬರಾವರಣೆ ।
ಶಕ್ತಿತ್ರಯದ ರೂಪಿಣಿ ॥

ಶರಣು ಜ್ಞಾನ ಪ್ರಕಾಶಿ ಸಕಲ ತೇಜೋರಾಶಿ ।
ಶರಣು ನಿಜ ಸುಖದಾನಿ ಮೂರುಲೋಕದ ಜನನಿ ।
ಶರಣು ಮಹಿಪತಿ ಕಂದ ನಿನ್ನವನೆನುತ ।
ಛಂದಾ ಸಲಹಮ್ಮ ಕರುಣದಿಂದ ೧

## ೪೨೫

## ಸುಳಾದಿ

ಕಾವುದ್ಯೆ ಎನ್ನ ನೀ ಕಂಬುಗಳಾ ।
ಶ್ರೀವರದೋರಿ ಶ್ರೀ ಪಾದಗಳಾ ।
ದೇವ ಬಿಡಿಸೋ ಭವ ಪಾಶಗಳಾ ।
ಈ ವದೆನಗ ಜ್ಞಾನ ನೋಟಗಳಾ ।
ಜವದಿ ಹರಿಯೋ ಜನ್ಮ ಮರಣಗಳಾ ।
ಜೀವನ ನೀ ಸರ್ವಲೋಕಗಳಾ
ದೇವಕಿ ಜಠರ ಶರಧಿ ಶಶಿಯೇ ।
ದೇವ ಮುನಿಗಳ ಅರಿಯಾರರಿಯೇ ।
ಭಾವಿಕರ ಸ್ಮರಣೆಗೆ ಒಲಿವೇ ।
ಶ್ರೀ ವತ್ಸಾಂಕಿತ ಗುರುವರ ಮಹಿಪತಿ ಪ್ರಿಯಾ ೧

ಕನಕಗರ್ಭ ಅಮರ ಪತಿಗಳಾ ।
ಅನುದಿನಲಿ ನುತಿಸಿಕೊಂಬುದೇತಾ ।
ಅನಳ ಸುತೆಯಾ ಪತಿ ಯುಧೀಷ್ಟರನಾ ।
ಮನೆಯ ಎಚ್ಚಿಷ್ಟ ಪಾತ್ರ ಬಳುವರೇ ತಾ ।
ಅನಳ ಅನುಜನಾ ರಥ ಪೂಡುರೇ ರಂಗಯ್ಯಾ ।
ಘನಚರಿತಾ ಗುರುವರ ಮಹಿಪತಿ ಪ್ರೀಯಾ ೨

ಅಂದು ರಾವಣನು ಸರ್ವರಿಗೆ ಪೀಡಿಸುತಿರೆ ।
ಬಂದು ಆ ಅಸುರನ ಕಂದರ ಹರಿಯಲು ।
ಧಿಂ ಧಿಂ ಧಿಂ ಧಿಂ ಧಿಮಿ ಧಿಂ ಧಿಂ ಧಿಂ ಧಿಂ ಧಿಮಿ ।
ಕೆಂದು ಸುರರು ದುಂದುಭಿ ಪೊಡೆಯೆ ।
ವಂದಿಸಿ ಮುನಿಜನಗಳು ಸ್ತುತಿಸೆ ।
ಸುಂದರ ಕುಜದಶಬೇದನೆ ಗೈಯ್ಯುಂತಾ ।
ಛಂದದಿ ನಾರದ ಪಾಡಿದಾನಂದ ದಿಂದಾ ।
ಧಿಂ ಧಿಂ ಧೀಂ ಧೀಂ ಧಿಮಿ ಧೀಂ ಧೀಂ ಧಿಮಿಕೆಂದು
ಅಂದಿಗಿಂದಿಗೆ ಭಕ್ತವೃಂದ ರಕ್ಷಿಸುತಿಹೆ ।
ಇಂದೆನ್ನ ಕಾಯೋ ಗುರುವರ ಮಹಿಪತಿ ಪ್ರಿಯಾ ೩

ಅನಂತ ಮಹಿಮಾ ಅನಂತ ನಾಮಾ ।
ಅನಂತ ಕುಲ ಅರಿಗಮನಾ ಸುರೇಶಾ ।
ಅನಂತ ಶಯನಾ ಅನಂತ ಸುದ್ಗುಣಾ ।
ಅನಂತ ಕೋಟಿ ಬ್ರಹ್ಮಾಂಡದೊಡಿಯಾ ।
ಅನಂತ ಕೋಟಿ ಬ್ರಹ್ಮಾಂಡದೊಡಿಯಾ ।
ಅನಂತ ರೂಪಾ ಅನಂತ ಚರಿತಾ ।
ಅನಂತ ವರದ ಗುರವರ ಮಹಿಪತಿ ಪ್ರೀಯಾ ೪

ವನಜನಕಾ ವನಜಾನನೇ
ಜನಜಾಲಯ ಮುಖ ಚಂದ್ರ ಚಕೋರಾ ।
ವನಜ ಪದಾ ವನಜ ಲೋಚನಾ ।
ವನಜೋದ್ಭವ ವಂದಿತ ಕರಿವರದಾ ।
ವನಜ ಶರಾಜನಕ ಮುಕುಂದಾ ।
ವನಜಜನುತ ಗುರವರಮಹಿಪತಿ ಪ್ರೀಯಾ ೫

ಧೀರ ಉದಾರ ಮಂದಾರಾಗೋದ್ಧರಾ ।
ತಾರಿಸೋ ಎನ್ನ ನೀ ಗುರುಮಹಿಪತಿ ಪ್ರೀಯಾ

ಆಚಮನ = ಅಂಗೈಗುಳಿಯಲ್ಲಿ ಶುದ್ಧೋದಕ ಕುಡಿಯುವುದು
ಆತಪಿ = ಸೂರ್ಯ
ಆನತ = ಬಾಗಿದ, ನಮಸ್ಕರಿಸಿದ
ಆಪ = ವ್ಯಾಪಿಸು, ಸ್ವಾಧೀನಮಾಡಿಕೊಳ್ಳು
ಆವು = ಆಕಳು
ಆರೋಗಣೆ = ಊಟ
ಆಲಯ = ಮನೆ
ಆಸ್ಯ = ಮುಖ
ಆಳಿ = ಸಮೂಹ
ಇಷ್ಟಾರ್ಥ = ಬೇಡಿದ ಫಲ
ಇಂಗಿತ = ಇಷ್ಟದ, ಇಚ್ಛಿತ
ಇಂದುಧರ = ಶಿವ
ಈಕ್ಷಿಸಿ = ನೋಡಿ
ಉದರ = ಹೊಟ್ಟೆ
ಉದ್ದಂಡ = ಪ್ರಬಲ, ಪ್ರಚಂಡ
ಉನ್ಮತ್ತ = ಸೊಕ್ಕಿಗೇರಿದ
ಉಪಟಳ = ಹಿಂಸೆ, ತೊಂದರೆ
ಉಪಮೆ = ಹೋಲಿಕೆ
ಉಪ್ಪವಡಿಸು = ನಿದ್ರೆಯಿಂದ ಏಳು
ಉಪೇಕ್ಷಿಸು = ಅಲಕ್ಷಿಸು
ಉಬ್ಬಸ = ಸಂಕಟ, ಮೇಲುಸಿರು
ಉರಗ = ಹಾವು
ಉರಗಣ್ಣ = ಶಿವ
ಉರ್ವಿ = ಭೂಮಿ
ಊಳಿಗ = ಸೇವೆ

ಐತರಲು = ಬರಲು
ಒಡಮೂಡಿ = ಪ್ರತ್ಯಕ್ಷವಾಗಿ
ಕಣ್ಣಿ = ಹಗ್ಗ
ಕದ = ಬಾಗಿಲು
ಕದಪು = ಗಲ್ಲ
ಕದಶನ = ಕೆಟ್ಟ ಊಟ
ಕನಕಗರ್ಭ = ಬ್ರಹ್ಮ
ಕನಕ ಮೃಗ = ಕಾಂಚನ ಮೃಗ
ಕನಕ ಪಕ್ಕಿ = ಗರುಡ
ಕಮಠ = ಆಮೆ
ಕಯಾದುಸುತ = ಪ್ರಲ್ಹಾದ
ಕರಿ = ಆನೆ
ಕಲೆಗಳು = ಲಕ್ಷಣಗಳು
ಕಂಜಸಖ = ಸೂರ್ಯ
ಕಂಜಾಕ್ಷ = ಕಮಲನೇತ್ರ
ಕಂಜೋದ್ಭವ = ಬ್ರಹ್ಮ
ಕಂತುಪಿತ = ಕೃಷ್ಣ
ಕಂತುಹರ = ಪಾಪಹರಣ
ಕಂದರ್ಪ = ಮನ್ಮಥ
ಕಂದುಗೋಳ = ಶಿವ
ಕಂಗಳು = ಕಣ್ಣುಗಳು
ಕಂಬು = ಶಂಖ
ಕಾಕುಬುದ್ಧಿ = ನೀಚಬುದ್ಧಿ
ಕಾನನ = ಅಡವಿ
ಕೃಚ್ಛ್ರ = ಕೃಶವಾಗುತ್ತಹೋಗುವ ಒಂದು ವ್ರತ
ಕಾಮಧೇನು = ದೇವಲೋಕದ ಬೇಡಿದ್ದನ್ನು ಕೊಡುವ ಆಕಳು

ಕಾಮಿತಾರ್ಥ = ಬೇಡಿದ್ದು
ಕಾವ = ಕಾಯುವ
ಕಾವನ = ಕಾಮನ
ಕಾವನು = ಕಾಯುವವನು ರಕ್ಷಿಸುವವನು
ಕುತ್ಸಿತ = ನಿಂದ್ಯವಾದ, ಕೆಟ್ಟ
ಕುರ್ತು = ಕುರಿತು
ಕುಮುದ = ಕಮಲ
ಕುರುಳು = ಗುಂಗುರು
ಕುಂಜರ = ಆನೆ
ಕುಂದ = ಕೊರತೆ
ಕುಂಜಡೆ = ಕೆಂಪುಬಣ್ಣದ ಜಡೆ
ಕೇಣವನು = ಹೊಟ್ಟೆಕಿಚ್ಚು
ಕೇಣಿ = ಗುತ್ತಿಗೆ, ಮೈತ್ರಿ, ಸಾಲು
ಕೇಯೂರ = ತೋಳಬಂದಿ
ಕೈರಲ = ಬಿಳಿಯ ಕಮಲ
ಕೈವಲ್ಯ = ಮೋಕ್ಷ
ಕೊಚ್ಚಿ = (ನಾ) ಕೆಸರು, ರಾಡಿ, (ಕ್ರಿ) ಆತ್ಮಸ್ತುತಿ, ಕುಯಿದು
ಕೊಂಬುಕೊಡು = ಕೊಳ್ಳುಕೊಡು
ಕ್ರೋಢ = ಹಂದಿ, ಎದೆ
ಕೌಸ್ತುಭ = ವಿಷ್ಣುವಿನ ಎದೆಯನ್ನು ಅಲಂಕರಿಸಿದ ಒಂದು ರತ್ನ
ಖಗವರ = ಗರುಡಪಕ್ಷಿ
ಖೂನ = ಗುರುತು
ಖಂಡನ = ಮಂಡಿಸು, ಮುರಿ
ಗಗನಧುನಿ = ಗಂಗೆ
ಗರಳ = ವಿಷ
ಗ್ರೀವ = ಕೊರಳು, ಕಂಠ
ಗೋವಳರು = ಗೋಪಾಲಕರು
ಗೋದಲ್ಹಾಕು = ಜಗದಂಬೆಯ ಪ್ರೀತಿಗಾಗಿ ಹಾಕುವ ಗೊಂದಲ
ಘಸಣಿ = ಆಘಾತ
ಘಾತಿಸು = ಹೊಡೆ, ಕೊಲ್ಲು
ಚಮು = ಸಮೂಹ
ಚಾರುತರ = ಸುಂದರವಾದ
ಚಿತ್ತ = ಮನಸು
ಚೂಕಿ = ತಪ್ಪು
ಚೂತಫಲ = ಮಾವಿನ ಹಣ್ಣು
ಛಲ = ಹಟ
ಛಂದದ = ರೀತಿ, ಇಚ್ಛೆ
ಜವದಿ = ವೇಗದಿ
ಜಾರ = ವ್ಯಭಿಚಾರಿ
ಜಿಷ್ಣು = ಇಂದ್ರ
ಜೀರ್ಣಕಂಥ = ಹಳೆಯವಸ್ತು
ಜಿವ್ಹೆ = ನಾಲಿಗೆ
ಜೀಮೂತ = ಮೋಡ
ಜಂಭಾರಿದೃತ = ಪರ್ವತಧರ
ಜಾಂಬೂನದಾಂಬರ = ನೀಲವರ್ಣ ವಸ್ತ್ರ
ಠಕ್ಕಿಸಿ = ಮೋಸಗೊಳಿಸಿ
ಡಂಭ = ಒಣ ಹೆಮ್ಮೆ, ಜಂಭ
ಡಿಂಭ = ಶರೀರ, ಮೊಟ್ಟೆ
ತಡಿಯಗ್ರಾಮ = ದಂಡೆಯ ಊರು

ತರಣಿ = ಸೂರ್ಯ
ತರಣೋಪಾಯ = ತಾರಕ ಮಂತ್ರ ಉದ್ದಾರ ಮಾರ್ಗ
ತನುಜ = ಮಗ
ತ್ರಯಂಬಕ = ಮೂರುಕಣ್ಣುಳ್ಳವ, ಶಿವ
ತಾರ್ದವನು = ತಾರದೆ ಇರುವವನು
ತಾರಕ = ಉದ್ಧಾರಮಾರ್ಗ
ತಾರಿಸು = ಉದ್ಧರಿಸು
ತ್ರಿಕಾಲಜ್ಞ = ಭವಿಷ್ಯಗಳನ್ನು ಬಲ್ಲವ
ತ್ರಿಗುಣಮಯ = ಸ್ತತ್ವ, ರಜತಮ ಗುಣಗಳು
ತ್ರಿಜಗನುತ = ಮೂರುಲೋಕಗಳಿಂದ ಪೂಜಿತ
ತ್ರೀವೇಣಿತೀರ = ಗಂಗಾಯಮುನಾ ಸರಸ್ವತಿ ನದಿಗಳದಂಡೆ
ತುಷ್ಣೀಕರ = ಸೂರ್ಯ
ತೆಪ್ಪ = ದಾಟಲು ಸಹಾಯ
ತೋಯಜ = ಕಮಲ
ತುಂಬಿ = ಭ್ರಮರ
ತುಂಬುಲ = ಎಲೆ, ಅಡಿಕೆ
ದಧಿ = ಮೊಸರು
ದರ್ಪ = ಸೊಕ್ಕು
ದರ್ಪಣ = ಕನ್ನಡಿ
ದಮ = ಇಂದ್ರಿಯನಿಗ್ರಹ
ದಾವ = ಆವನ, ಯಾವಾತನ
ದುರೀತ = ಪಾಪ, ಕಷ್ಟ
ದುರಿತವಿನಾಶ = ಕಷ್ಟಗಳನ್ನು ಪರಿಹರಿಸುವವ
ದುರುಬ = ತುರುಬ
ದುರ್ವಾದಿ = ಕೆಟ್ಟವಾದಿಗಳು
ದ್ಯುಮಣಿ = ಆಕಾಶ ಮಂಡಲ
ದೋರಿ = ತೋರಿ
ದೋರ್ರೈಯ್ಯಾ = ತೋರ್ರೈಯ್ಯಾ
ಧನಿ = ಧ್ವನಿ
ಧವ = ಗಂಡ
ಧಾರಣಿ = ಭೂಮಿ
ಧ್ಯಾಯಿಸು = ಧ್ಯಾನಿಸು
ಧೃತಿ = ತಾಳುವಿಕೆ, ಧೈರ್ಯ
ಧೂಪಾರತಿ = ಸುವಾಸನೆ ವಸ್ತುವನ್ನುಕೆಂಡದ ಮೇಲೆ ಸಾಕಿಬರುವ ಹೊಗೆಯ ಆರತಿ
ಧೀಂಖಿಟ್ಟು = ಹಾರಿ, ನೆಗೆದು
ನಖಕ್ಷತ = ಉಗುರುಗಾಯ
ನಗ = ಪರ್ವತ
ನಡತಿ = ರೀತಿ, ವರ್ತನೆ
ನಳಿನ = ಕಮಲ
ನಾಕಜರು = ದೇವತೆಗಳು
ನಾಕಪುರ = ಸ್ವರ್ಗಪುರ, ಅಮರಾವತಿ, ಕೈಲಾಸ, ವೈಕುಂಠ, ಇತ್ಯಾದಿ
ನಾನ್ನುಡಿ = ನಾಡುನುಡಿ
ನಾಭಿ = ಹೊಕ್ಕಳು
ನಿಗಮಾಗಂಗಳು = ವೇದಶ್ರುತಿಗಳು
ನಿಚ್ಚ = ನಿತ್ಯ, ನಿರಂತರ
ನಿಟಿಲ = ಹಣೆ
ನಿತ್ಯ = ನಿತ್ಯ

ನಿರ್ಮಾಲ್ಯ = ಪ್ರಜೆಯಾದಮೇಲೆ ತೆಗೆದ ದೇವರ ಮೇಲಿನ ಬಾಡಿದ ಹೂ

ನಿಬ್ಬರ = ತುಂಬಿದ

ನಿರಯಾ = ಸೀರೆಯ ನೆರಿಗೆಗಳು

ನಿರುತ = ನಿತ್ಯ

ನಿರ್ಲಿಪ್ತ = ಅಂಟಿಕೊಳ್ಳದ, ಅನಾಸಕ್ತ

ನಿವಾರಾ = ಕಳೆ, ತಡೆ

ನಿವಾಳೆ = ದೃಷ್ಟಿ ದೋಷತೆಗೆ

ನಿಸ್ಸಾಳ = ಒಂದು ಬಗೆಯ ಚರ್ಮ ವಾದ್ಯ

ನೀಗಿ = ತೊಲಗಿಸಿ

ನುತಿಸು = ಸ್ತುತಿಸು

ನುಗ್ಗು = ನುಗ್ಗಾಗು, ಪುಡಿಯಾಗು

ನುಸಳಿ = ಸರದು

ನೂಪುರ = ಕಾಲಂದುಗೆ

ನ್ಯೂನ = ಕುಂದುಳ್ಳ, ಕೊರತೆಯುಳ್ಳ

ನೆಗಳಿ = ಪ್ರಸಿದ್ಧಿ, ಕೀರ್ತಿ

ನೆಚ್ಚಿದ = ನಂಬಿದ, ವಿಶ್ವಾಸದ

ನೊಸಲು = ಹಣೆ

ನೌಲ್ಗರಿ = ನವಿಲುಗರಿ

ನಿಂದ್ಯ = ನಿಂದನೀಯ

ನಿ:ಶಂಕ = ಸಂಶಯವಿಲ್ಲದ

ಪಟಹ = ಒಂದು ಬಗೆಯ ಚರ್ಮವಾದ್ಯ

ಪಡಕೊ = ಗಳಿಸಿಕೊ

ಪಡಿಯಾನಿತ್ತು = ಸಾಕಷ್ಟು ಕೊಟ್ಟು

ಪರ್ಣ = ಎಲೆ

ಪತಿತ = ಪಾಪಿ

ಪಥ = ದಾರಿ

ಪದರಜ = ಪಾದಧೂಳಿ

ಪನ್ನಗ = ಹಾವು

ಪನ್ನಗಾರಿ = ಗರುಡ

ಪರತಾ = ಮತ್ತೆ

ಪರಶು = ಕೊಡಲಿ

ಪರಸ = ಸ್ಪರ್ಶಮಣಿ

ಪರ್ಯಂಕ = ಹಾಸಿಗೆ

ಪ್ರಭಂಜನಾ = ಬಿರುಗಾಳಿ, ಮುರಿಯು

ಪಾಕಶಾಸನ = ಇಂದ್ರ

ಪಾಪಾದ್ರಿಕುಲಿಶ = ಪಾಪಗಳ ಪರ್ವತಕ್ಕೆ ಕೊಡಲಿ

ಪಾವುಡ = ವಸ್ತ್ರ ಉಡುಗೊರೆ

ಪಿಡಿದು = ಹಿಡಿದು

ಪಿನಾಕಿ = ಶಿವ

ಪುನೀತ = ಪವಿತ್ರ

ಪುಷ್ಕರಣಿ = ಕೊಳ, ಹೊಂಡ

ಪುಷ್ಯರಾಗ = ಒಂದು ವಿಧದ ರತ್ನ

ಪೂಸರ = ಹೂವಿನಸರ

ಪೆರೆ = ಚಂದ್ರ

ಪೇರ್ಗಳು = ಬೇರುಗಳು

ಪೊರಗೆ = ಹೊರಗೆ

ಪೊಡಮಟ್ಟು = ನಮಸ್ಕರಿಸು

ಪೋಕ = ನೀಚ, ನಿಷ್ಪ್ರಯೋಜಕ
ಪೊಂಬ್ಬರಿವಾಣ = ಚಿನ್ನದ ತಟ್ಟೆ
ಪೊಂಬಾಳೆ = ಹೊಂಬಾಳೆ
ಫಾಲಾಕ್ಷ = ಹಣೆಯಲ್ಲಿ ಕಣ್ಣುಳ್ಳ (ಶಿವ)
ಬಧಿರ = ಕಿವುಡ
ಬನ್ನ = ಕಷ್ಟ, ತೊಂದರೆ
ಬಪ್ಪುವೆ = ಬರುವೆ
ಬಬ್ಬುಳಿ = ನೀರಗುಳ್ಳೆ
ಬರೇ = ಕೇವಲ
ಬಾಹ್ಯ ಅಧರ = ಹೊರತುಟಿ
ಬಿನುಗು = ಕ್ಷುದ್ರ ಹೀನ
ಬಿಸರುಹ = ಕಮಲ
ಬೇರ್ತು = ಬೆರೆತು
ಭಂಡ = ನಾಚಿಕೆ ಇಲ್ಲದವ
ಭಂಡಿ = ಗಾಡಿ, ಚಕ್ಕಡಿ, ರಥ
ಭ್ರಾಂತ = ಭ್ರಮೆ, ಸಂಶಯ
ಭೂರಿ = ಅಧಿಕ
ಭಾವಜ = ಕಾಮ, ಮದನ
ಭೂರಿಜನ = ಬ್ರಾಹ್ಮಣಜನ
ಭೂಸುರರು = ಬ್ರಾಹ್ಮಣರು
ಭೇರಿ = ವಾದ್ಯ
ಭೋಗಭೂಷಣ = ಶಿವ (ಭೋಗ = ಹಾವು)
ಭಂಜನಾ = ಮುರಿಯುವುದು
ಮಗುಳೆ = ಮತ್ತೆ
ಮಜ್ಜನ = ಸ್ನಾನ
ಮರ್ತ್ಯ = ಸಾಯುವಲೋಕ, ಭೂಲೋಕ
ಮತಿ = ಬುದ್ಧಿ
ಮರಹು = ಮರೆಯುವುದು
ಮಾಗಿತು = ಪಕ್ವವಾದದ್ದು
ಮ್ಯಾಲೆ = ಮೇಲೆ
ಮೃಡ = ಶಿವ
ಮಾರ್ಜನ = ಸಿಂಪಡಿಸು
ಮಾರ = ಮನ್ಮಥ
ಮುಕ್ಕಣ್ಣ = ಮೂರು ಕಣ್ಣುಳ್ಳವ, ಶಿವ
ಮುಗ್ಗಿತು = ಕುಗ್ಗಿತು, ನಾಶವಾಯಿತು
ಮುದದಿ = ಆನಂದದಿ
ಮುನ್ನಿನ = ಮೊದಲಿನ
ಮುರವಿಟ್ಟು = ಅಕಳಿಗೆ ಇಡುವ ಒಂದು ಆಹಾರ
ಮುಳಿಯಲು = ಸಿಟ್ಟಾಗಲು
ಮೂಷಕ = ಇಲಿ
ಮೇದಿನಿ = ಭೂಮಿ
ಮೇರು = ಒಂದು ಪರ್ವತದ ಹೆಸರು
ಮೊತ್ತವಾದ = ಒಟ್ಟುಗೂಡಿದ
ಮೋದ = ಸಂತೋಷ
ಮೊರೆ = ಪ್ರಾರ್ಥನೆ
ಮಂಡೆ = ತಲೆ
ಮಂಡಿಸು = ಕುಳಿತುಕೊಳ್ಳು, ವಿಷಯ ಮಂಡಿಸು

ಮಿಂದು = ಸ್ನಾನಮಾಡು
ಮುಂಜರಗು = ಸೆರಗಿನ ತುದಿ
ಯುವಿಗಳು = ಕಣ್ಣಿನಯುವಿಗಳು
ರನ್ನ = ರತ್ನ
ರವ = ಧ್ವನಿ
ರಿಣ = ಋಣ
ಲಜ್ಜೆ = ನಾಚಿಕೆ
ಲಂಘಿಸು = ಹಾಕು
ವಕ್ರತುಂಡ = ಗಣಪತಿ
ವಡ್ಯಾಣ = ಆಭರಣ, ಡಾಬು
ವದಗಿ = ಒದಗಿ
ವನರುಹಾಕ್ಷಿ = ಕಮಲಾಕ್ಷಿ
ವಪು = ದೇಹ, ಶರೀರ, ರೂಪ, ಆಕಾರ
ವರ್ಮಾ = ಸೇಡು
ವಸುಧಾಕಾಯ
ಸಂಭೂತೆ = ಸೀತೆ
ವಾಣಿ = ಮಾತು, ಸರಸ್ವತಿ
ವಾರ್ತಿ = ವಾರ್ತೆ, ಸುದ್ದಿ
ವಾರಣ = ಆನೆ, ಪ್ರತಿಭಟನೆ
ವಾರಿಯ = ಜಲ, ನೀರು
ವಾರಿರುಹ = ಕಮಲ
ವಾಸವ = ಇಂದ್ರ
ವಾಲಗ = ಓಲಗ, ವಾದ್ಯವರು
ವ್ಯಾಳ್ಯ = ವೇಳೆ
ವಿಗಗಡಮುನಿ = ನಾರದ
ವಿಪುಳ = ದೊಡ್ಡ, ಬಹಳ
ವಿಮಲತಾದಿ = ಸುಂದರವಾದ
ವಿರಕ್ತಿ = ವೈರಾಗ್ಯ
ವಿರತಿ = ವೈರಾಗ್ಯ
ವಿರಿಂಚಿ = ಬ್ರಹ್ಮ
ವಿಸ್ಮಿತ = ಆಶ್ಚರ್ಯ
ವ್ಯೋಮಕೇಶ = ಶಿವ
ವಂಚಿಪ = ಮೋಸಮಾಡಿದ
ವಂದ್ಯ = ಪೂಜನೀಯ
ಶರ್ಕರ = ಸಕ್ಕರೆ
ಶಮ = ಮನೋನಿಗ್ರಹ
ಶಮಿತ = ನೆಮ್ಮದಿ, ಸಮಾಧಾನ
ಶರ್ವ = ಶಿವ
ಶರ್ವಾಣಿ = ಶಿವೆ, ಪಾರ್ವತಿ
ಶಾಖಂಗಗಳು = ಕಾಯಿಪಲ್ಯೆ
ಶಿಲ್ಕಿ = ಸಿಲುಕಿ, ಸಿಕ್ಕು
ಶ್ರೀಪತಿ = ವಿಷ್ಣು
ಶುಕ = ಗಿಳಿ
ಶುಂಡ = ಸೊಂಡಿಲು, ಆನೆ
ಸತ್ರ = ಯಾಗ, ಛತ್ರ
ಸತ್ಯಪೂರ್ಣರು = ಉತ್ತರಾದಿಮಠದ ಶ್ರೀಗಳು
ಸತ್ಯವಿಜಯ = ಉತ್ತರಾದಿಮಠದ ಶ್ರೀಗಳು
ಸದಮಲ = ಶುದ್ಧ, ನಿರ್ಮಲ
ಸನ್ಮತಿ = ಒಳ್ಳೆಯಬುದ್ಧಿ
ಸರಳ = ಬಾಣ
ಸರಸಿಜಸಖ = ಸೂರ್ಯ
ಸರೋಜ = ಕಮಲ

ಸ್ವರ್ಣ = ಬಂಗಾರ
ಸ್ಮರ = ಕಾಮ
ಸ್ಮರಹರ = ಶಿವ
ಸಾಕೇತಪುರ = ಅಯೋಧ್ಯೆ
ಸಾಯಾಸ = ಸಾಹಸ
ಸಾರಂಗ = ಜಿಂಕೆ
ಸೀತಾಂಶು = ಚಂದ್ರ
ಸುಕೃತ = ಪುಣ್ಯ
ಸ್ವಾದ = ರುಚಿ
ಸರತರು = ಕಲ್ಪವೃಕ್ಷ
ಸುರಧೇನು = ಕಾಮಧೇನು
ಸುರನದಿ = ಗಂಗಾನದಿ
ಸುರಪುರೋಹಿತ = ವಶಿಷ್ಠ
ಸೊಲ್ಲು = ಮಾತು

ಸೋಪಾರಿಕುಲೀಶ = ಸೂರ್ಯ
ಸಂಗಡಿಸೀತು = ಸಂಗ್ರಹಿಸಿತು
ಸಂಚಿತ = ಕೂಡಿಟ್ಟ
ಸಂತೈಸಿ = ಸಮಾಧಾನಗೊಳಿಸಿ
ಸ್ಯಂದನ = ತೇರು, ರಥ
ಸಿಂಧುರ ವದನ = ಆನೆಯ ಮುಖದವ (ಗಣಪತಿ)
ಹರಿವಾಣ = ತಟ್ಟೆ
ಹವಣದಿ = ಉಪಾಯದಿ
ಹೊರೆಯಲು = ಕಾಪಾಡಲು
ಹಂಬಲಿಸು = ಚಿಂತಿಸು, ಆಸೆಪಡು
ಹಿಂಡು = ಸಮೂಹ, ಗುಂಪು
ಕ್ಷಿತಿ = ಭೂಮಿ
ಕ್ಷೋಣಿ = ಭೂಮಿ

# ಅನುಬಂಧ-೨

## ಪೂರ್ವ ಕಥೆಗಳು ಮತ್ತು ಲಘು ಟಿಪ್ಪಣಿಗಳು

### ೮

ಆತ್ಮರಾಮನನು ಎಚ್ಚರಿಸುವ ಪದ. ಇಲ್ಲಿಯ ಆತ್ಮರಾಮನಿಗೆ ಪೌರಾಣಿಕ ವ್ಯಕಿಗಳಾದ ಬೋಧಸೂರ್ಯ, ಶಾಂತಿ ಸೀತೆ ಮೊದಲಾದ ಹೋಲಿಕೆಗಳು ಗಮನಾರ್ಹ

### ೧೩

ಕಾಶಿ-ಪ್ರಯಾಗಗಲ್ಲಿ ನಿಂತು ಗಂಗೆಯು ಜನರನ್ನು ಉದ್ಧರಿಸುವಂತೆ ೧೨

(ನುಡಿ-೨) ವರುಷಗಳಿಗೊಮ್ಮೆ ಗುರುಗ್ರಹ ಕನ್ಯಾರಾಶಿಯಲ್ಲಿ ಪ್ರವೇಶಿಸಿದಾಗ ಗಂಗೆಯು ಕೃಷ್ಣೆಯಲ್ಲಿ ಬಂದು ದಕ್ಷಿಣ ದೇಶದವರನ್ನು ಉದ್ಧರಿಸುವಳು.

### ೧೬

ಮೂರು ತಾಪಗಳು = ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ.

### ೨೯

೧) ನಕ್ಷತ್ರ=ಉತ್ತರೆ, ರಮಣ=ಅಭಿಮನ್ಯು, ಅಯ್ಯ=ಅಪ್ಪ-ಅರ್ಜುನ ಒಲಿದು ಶರವನಿತ್ತೆ=ಪಾಶುಪತಾಸ್ತ್ರವನ್ನು ಕೊಟ್ಟ, ಶಿವ.

೨) ನಕ್ಷತ್ರ=ರೇವತಿ, ವಲ್ಲಭ=ಗಂಡ ಬಲಾರಾಮ, ತಮ್ಮ-ಕೃಷ್ಣಸುತ=ಮನ್ಮಥ, ಸುಟ್ಟೆ=ಮನ್ಮಥನ ಸುಟ್ಟ, ಶಿವ

೩) ನಕ್ಷತ್ರ=ಶ್ರವಣಾ(ಕಿವಿ)ಇಲ್ಲದವನ=ಹಾವು(ಕಿವಿಲ್ಲದ ಪ್ರಾಣಿ ಹಾವು) ವೈರಿ=ನವಿಲು ಗಮನನ=ನವಿಲು ಗಮನ-ಷಣ್ಮುಖ. ತಾತ=ಅಪ್ಪ,ಶಿವ

೪) ನಕ್ಷತ್ರ ಕಾಂತಧರ–ಚಂದ್ರಧರ–ಶಿವ

೫) ನಕ್ಷತ್ರಜ=ಚಿತ್ರಾನಕ್ಷತ್ರಜ=ಮನ್ಮಥ,ಅಣ್ಣ=ಬ್ರಹ್ಮ ಮಸ್ತಕ ತರಿದವ=ಶಿವ

೬) ನಕ್ಷತ್ರ=ಹಸ್ತಾ(ಕೈ), ಸಾವಿರ ಕೈಗಳುಳ್ಳ ಬಾಣರಾಸುರನ ಬಾಗಿಲ ಕಾಯ್ದ ಶಿವ

೭) ನಕ್ಷತ್ರ ನೀನೇ=ಜ್ಯೇಷ್ಠಾ ನಕ್ಷತ್ರ, ಇಂದ್ರಾದಿ ದೇವತೆಗಳಿಗೆ ಜ್ಯೇಷ್ಠನಾದವನು=ಶಿವ

೮) ನಕ್ಷತ್ರ ಭೂಷಣ=ಆಶ್ಲೇಷ(ಸರ್ಪ)=ಸರ್ಪಭೂಷಣ=ಶಿವ

೩೩

ಅದ್ರಿಧರ=ಕೃಷ್ಣ ಕೃಷ್ಣನ ಪ್ರಿಯ=ಶಿವ,

ಅದ್ರಿಕೃತಾಲಯ=ಪರ್ವತವನ್ನೆ ಮನೆಮಾಡಿಕೊಂಡವ=ಶಿವ

ಅದ್ರಿಜಾಮಾತ=ಪರ್ವತನ ಅಳಿಯ. ಶಿವ

ಅದ್ರಿರಿಪುನುತ=ಅದ್ರಿರಿಪು=ಇಂದ್ರ, ಇಂದ್ರನಿಂದ ಸ್ತುತಿಸಿಕೊಳ್ಳುವ ಶಿವ

ಅದ್ರಿಜೆಪತಿ=ಪಾರ್ವತಿಯ ಗಂಡ ಶಿವ

೩೫

ಕೃಷ್ಣಾನದಿಯ ದಂಡೆಯ ಮೇಲಿರುವ ಶೂರ್ಪಾಲಿಯ ಉತ್ತರೇಶ್ವರ (ಶಿವ)ನ ಸ್ತುತಿಯ ಹಾಡು

೩೬

ಪಂಚಶರಾರಿ=ಐದು ಬಾಣಗಳುಳ್ಳ ಮನ್ಮಥನ ವೈರಿ=ಶಿವ, ಐದು ಬಾಣಗಳು=ಅರವಿಂದ, ಅಶೋಕ, ಚೂತ, ನವಮಲ್ಲಿಕಾ ನೀಲೋತ್ಪಲ.

೫೪

೧) ಲಂಕೆಯ, ಸಖಿಗೆ ನಿಶ್ಯಂಕೆಯಲಿ ಉಣಿಸಿದಾ=ಲಂಕೆಯನ್ನು ತನ್ನ ಮಿತ್ರನಾದ ಅಗ್ನಿಗೆ, ನಿಶ್ಯಂಕೆಯಿಂದ ಉಣಿಸಿದ ಹನುಮಂತ.

೨) ಕೌರವ ಬಲದ ಕುಠಾರಿಯೆಂದೆನಿಸಿದ= ಭೀಮಸೇನ

೩) ಮೂರೇಳು ದುರ್ಭಾಷ್ಯ ಹಾರಿಸಿದ ಮುನಿ = ೨೧ ದುರ್ಭಾಷ್ಯಗಳನ್ನು ಹಾರಿಸಿದ ಮಧ್ವಾಚಾರ್ಯರು

೪) ಹರಿಮತ ಸ್ಥಾಪನ ಬಿರಿದಂಕ=ಹರಿಸರ್ವೋತ್ತುಮತ್ತವ ಮತವನ್ನು (ದ್ವೈತಮತವನ್ನು) ಸ್ಥಾಪಿಸಿದವರೆಂಬ ಬಿರುದು ಪಡೆದ ಮಧ್ವಾಚಾರ್ಯರು

೫೫

೧) ದ್ಯುಮಣಿ ಮಂಡಲ ತಾಡುಕಲು ಹವಣಿಸಿದ ಹಸ್ತ=ಬಾಲ ಹನುಮಂತ ಸೂರ್ಯನನ್ನು ಪಡೆಯಲು ಆಕಾಶಕ್ಕೆ ಹಾರಿದ ಕೈ(ಹನುಮಂತನದು)

೨) ವಿಮಲ ಮುದ್ರಿಕೆ ಜನನಿಗಿತ್ತ ಹಸ್ತ =ರಾಮನ ಮುದ್ರಿಕೆಯನ್ನು ಸೀತಾಮಾತೆಗೆ ಕೊಟ್ಟ ಹಸ್ತ (ಹನುಮಂತನದು)

೫೬

ಹನುಮ, ಭೀಮ. ಮಧ್ವಮೂರವತಾರಗಳ ವರ್ಣನೆ.

೫೯

ಕೃಷ್ಣೆಯ ತೀರದ ಯಲಗೂರ ಹನುಮಂತನ ಸ್ತುತಿ ಪದ

೬೦

೧) ಹರಿ=ವಾಯು, ವಾಯುದೇವರ ಪೂರ್ಣಾಂಶದಿಂದ ಜನಿಸಿದವ

೨) ಹರಿ=ಕಪಿ, ಕಪಿಕುಲದಲ್ಲಿ ಹುಟ್ಟಿದವ

೩) ಹರಿ=ಸೂರ್ಯ, ಸೂರ್ಯನನ್ನು ಹಿಡಿಯಲು ಹರಿದವ

೪) ಹರಿ=ವಾಯು, ವಾಯುವೇಗದಿಂದ ಬರುವವ

೫) ಹರಸೆ ದನುಜ ಮೃಗವಾ=?

೬) ಹರಿರೂಪದಲಿ ನಿಂದೆ=?

೭) ಹರಿ=ಸುಗ್ರೀವ, ಸುಗ್ರೀವ ಮನೆಯಲ್ಲಿ ನಲಿದವ

೮) ಹರಿ=ರಾಮ,ರಾಮಬರಲು ನಮಿಸಿ

೯) ಹರಿದಶ್ವ=ಸೂರ್ಯ,ಜ=ಸೂರ್ಯಪುತ್ರ ಸುಗ್ರೀವ, ಸುಗ್ರೀವನಿಗೆ ಒಲಿಸಿ

೧೦) ಹರಿಹಯ=ಇಂದ್ರ, ಜ=ಇಂದ್ರನ ಮಗ ವಾಲಿ, ವಾಲಿಗೆ ಮುನಿದೆ (ಸಿಟ್ಟಾದೆ)

೧೧) ಗೋಪೇಂದ್ರನಾಜ್ಞೆಯಲಿ=ಪರಮಾತ್ಮನ ಆಜ್ಞೆಯಂತೆ

೧೨) ಗೋಪದಾಂಬುಧಿ ಪರಿಲಿ=ಆಕಳ ಪಾದದಷ್ಟು ನೀರಿನಂತೆ

೧೩) ಗೋಪನ ಲಂಘಿಸಿ=ಸಮುದ್ರವನ್ನೇ ಜಿಗಿದು (ಗೋ=ಸಮುದ್ರ)

೧೪) ಗೋಪುತ್ರಿಯ ಕಂಡು=ಸೀತೆಯನ್ನು ಕಂಡು (ಗೋ=ಭೂಮಿ)

೧೫) ಗೋಪೀಡಕರ ಮುರಿದೆ=ರಾಕ್ಷಸರನ್ನು ನಾಶಮಾಡಿದಿ.

೧೬) ಗೋಪಾರಿಗಿದಿರಾಗಿ=ಇಂದ್ರನ ವೈರಿ ಇಂದ್ರಜಿತುವಿಗೆ ಎದುರಾಗಿ

೧೭) ಗೋಪಾಸ್ತ್ರವಶನಾಗಿ=ಬ್ರಹ್ಮಾಸ್ತ್ರಕ್ಕೆ ವಶನಾಗಿ (ಗೋ–ಬ್ರಹ್ಮ)

೧೮) ಗೋಪುರವ ನುರಹಿ=?

೧೯) ಗೋಪಾನ್ವಯ ಗರುಹಿ=ಪರಮಾತ್ಮನಿಗೆ ತಿಳಿಸಿ

೨೦) ಗೋಪದವಿಯ ಪಡೆದೆ=ಬ್ರಹ್ಮಪದವಿಯನ್ನು ಪಡೆದೆ.

೨೧) ಮಹಿಧರಾನೇಕವ ತಂದು=ಸಂಜೀವಿನಿ ಪರ್ವತ ಬೇಕೆಂದರೆ ಅಲ್ಲಿದ್ದ ಅನೇಕ ಪರ್ವತಗಳನ್ನು ತಂದವ

೨೨) ಮಹೋದಧಿಯನೆ ಜಿಗಿದು=ಸಮುದ್ರವನ್ನು ಜಿಗಿದು

೨೩) ಮಹಿಯೊಳು ಮೂರವತಾರಿ=ಈ ಭೂಮಿಯಲ್ಲಿ ಹನುಮ, ಭೀಮ, ಮಧ್ವರೆಂಬ ಮೂರವತಾರಗಳನ್ನು ಎತ್ತಿ

೬೧

ಹನುಮಂತನ ಮೂರು ಅವತಾರಗಳ ವರ್ಣನೆ.

೬೫

೧) ಗಾವುದೈವತ್ತು ಸಾವಿರದಲಿಹ ಪರ್ವತವ ಝಾವ ಮೂರಕೆ ತಂದ=ಐವತ್ತು ಸಾವಿರ ಗಾವುದ ದೂರದ ಸಂಜೀನೀ ಪರ್ವತವನ್ನು ಮೂರು ಗಳಿಗೆಯಲ್ಲಿ ತಂದ ಹನುಮಂತನ ಕಥೆ ರಾಮಾಯಣದಲ್ಲಿ ಬರುತ್ತದೆ.

೨) ಹೋಗಲು ಕಷ್ಟತರವಾದ ಸ್ಥಳಕ್ಕೆ ಹೋಗಿ ಸೌಗಂಧಿಕಾ ಪುಷ್ಪವನ್ನು ತಂದು ದ್ರೌಪದಿಗೆ ಕೊಟ್ಟ ಭೀಮನ ಕಥೆ ಮಹಾಭಾರತದಲ್ಲಿ ಬರುತ್ತದೆ.

೩) ವೆಂದಾಂತವೆಂಬ ಸಮುದ್ರದಲ್ಲಿ ಹಲವಾರು ದುರ್ವಾದಿಗೆಳೆಂಬ ಜಲಚರ ಪ್ರಾಣಿಗಳ ಬಾಯಿ ಮುಚ್ಚಿಸಿದ. ಮಧ್ವಾಚಾರ್ಯರು ದ್ವೈತ ಸಿದ್ಧಾಂತದ ಪ್ರವರ್ತಕರು

೮೩

೧) ಇಂದ್ರಾನುಜ=ಇಂದ್ರನ ಅನುಜ=ಉಪೇಂದ್ರ=ಕೃಷ್ಣ

೨) ವಾತಜ ಕೇತುಳ್ಖಾತನ ಸ್ಯಂದನಾ ಸೂತ ಕೃಷ್ಣ(ವಾತಜ=ಹನುಮಂತ, ಕೇತು=ಧ್ವಜ ಹನುಮಧ್ವಜ ಉಳ್ಖಾತ=ಅರ್ಜುನ,ಸ್ಯಂದನ=ರಥ)

೧೦೨

ಅರುಣಾನುಜ ವೈರಿಯಾಭರಣನ ಮಿತ್ರ=ಕೃಷ್ಣ (ಅರುಣಾನುಜ=ಗರುಡ, ವೈರಿ=ಸರ್ಪ;ಸರ್ಪಾಭರಣ=ಶಿವ ಶಿವನ ಮಿತ್ರ=ಕೃಷ್ಣ)

# ಅನುಬಂಧ ೩

## ಕೀರ್ತನೆಗಳ ಅಕಾರಾದಿ


| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೧. | ಅಕ್ಕ ಕೇಳೆ ನಿನ್ನ ತಪಸಿಯರೊಳಗೊಬ್ಬ | ೨೩ |
| ೨. | ಅಯ್ಯಾಜಗದಯ್ಯ | ೧೨೦ |
| ೩. | ಅರುಣಾನುಜ ವೈರಿಯಾ ಭರಣನ ಮಿತ್ರನತೋರೆ | ೧೦೨ |
| ೪. | ಅವತಾರ ಹರಿಯ ವಿವರಿಸೆ ಬ್ರಹ್ಮಗಳ ಅಳವಲ್ಲಾ | ೧೧೫ |
| ೫. | ಅವನೆವೆ ಧನ್ಯ ನೋಡಿ | ೧೧೪ |
| ೬. | ಅಹುದಹುದನಾಥ ಬಂಧು | ೧೨೧ |
| ೭. | ಅಹುದಹುದು ದೀನ ಬಂಧು | ೧೨೨ |
| ೮. | ಅಂಥವನಲ್ಲಾ ಕಾಣಿರೇ ಸಂತತ ತೃಪ್ತಾ | ೧೨೪ |
| ೯. | ಅಂದೇನಿಂದೆನುತಾ | ೧೨೩ |
| ೧೦. | ಆನಿ ಬಂತಿದಕೋ ಮಹ ಮದ್ದಾನಿ ಬಂತಿದಕೋ | ೧೧೦ |
| ೧೧. | ಆರತಿ ಬೆಳಗುವೆನಾ ಅಸುರವಂದ್ಯಗೆ | ೭೭ |
| ೧೨. | ಅರತಿಯೆತ್ತಿರೆ ಆರತ ಭಕುತಿಲಿ ಆರತಿಪತಿಪಿತ | ೩೭೬ |
| ೧೩. | ಆವ ಪುಣ್ಯವ ಮಾಡಿದಳೋ ಮುನ್ನೆ ಗೋಪಿ | ೧೨೯ |
| ೧೪. | ಆರು ನಿನ್ನಂಘ್ರಿ ಭಜಿಸುವರಯ್ಯ | ೧೨೮ |
| ೧೫. | ಆರೇ ಸುಳಿದವನಿಂದು | ೧೨೫ |
| ೧೬. | ಆರೋಗಣೆಯ ಮಾಡೋ ಮುಕುಂದಾ | ೧೨೭ |
| ೧೭. | ಆರೋಗಣೆಯ ಮಾಡೋ ವಾರಿಜರಮಣಾ | ೧೨೬ |
| ೧೮. | ಇದಿರುಗೊಂಡಳು ಇಂದಿರಾದೇವಿ | ೮೦ |
| ೧೯. | ಇದೇನಿದೇನು ನಿನ್ನ ಪದವ | ೧೩೦ |
| ೨೦. | ಇದೋ ಬಂದಾನೇಳೆ ಭಾವೇ ನಿನ್ನರಸಾ | ೧೩೧ |
| ೨೧. | ಇದೋ ಶಿವಬಂದಾ | ೨೫ |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೨. | ಇನ್ನಾರ ಭಜಿಸಲ್ಯೆಯ್ಯಾ ಯನ್ನಗತಿ | ೧೪೬ |
| ೨೩. | ಇನ್ನಾಕೆ ದೇವಿ ಮುನಿಸು ಮಾತಾಡೇ | ೧೩೨ |
| ೨೪. | ಇವನಾನೆಲೆಗಾಣೆ ನಮ್ಮಯ್ಯಾ ಸಣ್ಣವನೆ | ೧೩೩ |
| ೨೫. | ಇವನೋಡಮ್ಮಾ ಮಾನವನೆ | ೧೩೪ |
| ೨೬. | ಇಷ್ಟಲಿಂಗಾರ್ಚನವಾ ಮಾಡುವರಾ | ೨೭ |
| ೨೭. | ಇಂತು ಯನ್ನಾ ಬಯಕೆ ಕೈಗೂಡಿಸೋ ದೇವಾ | ೧೩೮ |
| ೨೮. | ಇಂದ್ಯಾಕೆ ಬಾರನಮ್ಮಾ ಎನ್ನೊಳುದಯಾ | ೧೩೭ |
| ೨೯. | ಇಂದಿನ ದಿನವೇ ಶುಭದಿನವು | ೧೬೫ |
| ೩೦. | ಇಂದಿರೆಯರಸಿನಾಡಿದ ಆಟ ನೋಡಿ ನಲಿದಾಡೆ | ೧೩೬ |
| ೩೧. | ಇಂದಿರೆರಮಣಾ ಇಟ್ಟಾಂಗಿರಬೇಕು | ೧೩೭ |
| ೩೨. | ಇಂದುಕುಲಮಣಿಯಾ | ೧೩೯ |
| ೩೩. | ಇಂದು ಕಂಡೆ ಚರಣಾ ಶ್ರೀಕೃಷ್ಣನಾ | ೧೪೩ |
| ೩೪. | ಇಂದು ಕಂಡೆನಾ ಇಂದು ಕುಲಕಮಣಿ | ೧೪೦ |
| ೩೫. | ಇಂದು ಕಂಡೆ ನಾನು ಶಂಕರನಾ | ೨೬ |
| ೩೬. | ಇಂದು ಧನ್ಯನಾ | ೧೪೧ |
| ೩೭. | ಇಂದು ನಮ್ಮ ಸಲಹಯ್ಯಾ ಸಿರಿರಮಣಾ | ೧೪೪ |
| ೩೮. | ಇಂದು ಪರಮಾನಂದ ನಮಗ | ೧೪೨ |
| ೩೯. | ಇಂದು ಸಲಹಿದೇ ಆರ್ತರ ಬಂಧು | ೧೪೫ |
| ೪೦. | ಈತ ಸೀತಾನಾಥನೇ ಪಾರಿಜಾತ ಪ್ರೀತನೇ | ೧೧೬ |
| ೪೧. | ಈತನೇನೆ ಹನುಮನು ಈತನೇನೆ ನಮ್ಮ ಗುರು | ೫೪ |
| ೪೨. | ಉದಯದಲೆದ್ದು ಶ್ರೀ ಹರಿ ನಾಮಂಗಳನು | ೩ |
| ೪೩. | ಉಪಕಾರವೇನಾ ಹೇಳಲಿ ಮಾಯಾ ದೇವಿಯಾ | ೬೯ |
| ೪೪. | ಎದ್ದಳೀಗಿದಕೋ ಶ್ರೀ ರಮಣಿ ಎದ್ದಳೀಗಿದಕೋ | ೬೮ |
| ೪೫. | ಎನಗ ನೀ ಕಾಯಲಾಗದೇ ಆಗದೇ ದೇವಾ | ೧೪೭ |
| ೪೬. | ಎನ್ನ ಪಾಲಿಸುವದಾಗದೇ ಸಿರಿರಮಣಾ | ೧೪೮ |
| ೪೭. | ಎನ್ನಪಾಲಿಸೋ ಕರುಣಾಕರಾ | ೧೪೯ |
| ೪೮. | ಎನ್ನ ಪ್ರಿಯನಾ ನೀ ತಂದು ತೋರೇ ಸುಜ್ಞಾನೇ | ೧೦೬ |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೪೯. | ಎನ್ನ ಸಲಹುದೋ ರಂಗಾ ಎನ್ನ ಸಲಹು | ೧೫೧ |
| ೫೦. | ಎನ್ನ ಸಲಹೋ ಚರಣವನ್ನು ದೋರಿಪರಮ | ೧೫೨ |
| ೫೧. | ಎನ್ನ ಸಲಹೋ ನೀ ದಯಾಂಬುಧಿ | ೧೫೦ |
| ೫೨. | ಎಮ್ಮಳವೇ ಪೊಗಳಲಮ್ಮಮ್ಮಾ | ೧೫೪ |
| ೫೩. | ಎಲೆ ದೇವಿ ಎಂತು ಚಿಂತೆಯು ಯಾಕ | ೧೫೫ |
| ೫೪. | ಎಷ್ಟೆಂದು ತೋರುವೆ ನಿಮ್ಮಾ ನಾಮಾಮಹಿಮ | ೧೫೬ |
| ೫೫. | ಎಂತು ನೋಡುವಿಯನ್ನಾ ಅಂತ ಹರಿಯೇ | ೧೫೭ |
| ೫೬. | ಎಂದು ಕಾಂಬುವೆ ರಂಗಯ್ಯನಾ | ೮೩ |
| ೫೭. | ಎಂದು ಕಾಂಬೆನೆ ಯದುವರನಾ | ೧೬೧ |
| ೫೮. | ಎಂಥ ವನಿವನಮ್ಮಾ ಬಾಲಕನಂತಿಹ ಗೋಪೆಮ್ಮಾ | ೧೫೮ |
| ೫೯. | ಎಂಥಾ ಬಾಲಕನಿವನು ಎಷ್ಟೆಂದ್ಹೇಳಲಿ ನಾನು | ೧೫೯ |
| ೬೦. | ಎಂಥಾ ಮಾಯಾಗಾರನೇ | ೧೬೦ |
| ೬೧. | ಎಂಥಾ ಮೋಹನನೇ ನೋಡಮ್ಮಯ್ಯಾ | ೧೧೭ |
| ೬೨. | ಏನಯ್ಯಾ ವಾರಿಜನಯನಾ : ಎನ್ನನುದ್ಧರಿಸಲಾರೆಯಾ | ೧೬೨ |
| ೬೩. | ಏನಾದರೇನು ಗುರುದಯ ಪಡದನಕಾ | ೧೫೩ |
| ೬೪. | ಏ ನೀರೇ ತೋರೇ ರಂಗನಾ | ೧೦೧ |
| ೬೫. | ಏನು ಕಾರಣವಿಲ್ಲಿನಿಂದೇ ಅಶ್ವತ್ಥಶ್ರೀ | ೧೬೩ |
| ೬೬. | ಏನು ಕಾರಣವೆನ್ನ ಮನೆಗಿಂದು ಬಾರನು | ೧೦೩ |
| ೬೭. | ಏನು ಕೊಟ್ಟನೇ ಮಗಳಾ ಉದಾಸೀನದಿ | ೨೮ |
| ೬೮. | ಏನೆಂದು ಬಣ್ಣಿಪೆ ಶ್ರೀನಾಥ ನಿನ್ನಯ | ೧೬೪ |
| ೬೯. | ಏನೆಂದು ಬಣ್ಣಿಸುವೆನೋ ನಾನು | ೯ |
| ೭೦. | ಏನೆಂದ್ಹೇಳಲಿ ರಂಗನಟ್ಟುಳಿ | ೧೬೬ |
| ೭೧. | ಏಳುತಲಿ ಎದ್ದು ಎಚ್ಚರಿಸುತ ನೀ ನೆನೆಯೋ | ೪ |
| ೭೨. | ಏಳೈಯ್ಯಾ ಆತ್ಮಾರಾಮಾ ಯತಿ ಮುನಿಜನ ಪ್ರೇಮ | ೮ |
| ೭೩. | ಏಳಯ್ಯಾ ಏಳು ಕಂದಾ | ೭ |
| ೭೪. | ಓ ಎನ್ನಬಾರದೇ ಹರಿಯೇ ನಾ ಕರೆದರೆ | ೮೪ |
| ೭೫. | ಓಂ ನಮೋ ರಾಘವೇಂದ್ರ | ೧೬೭ |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೧೩೦. | ಜಯ ಜಯ ಮಂಗಳ ಗುರುಮೂರ್ತಿ | ೩೯೪ |
| ೧೩೧. | ಜಯ ಜಯ ಯಾದವನಾಥ ಮುರಾರಿ | ೩೮೭ |
| ೧೩೨. | ಜಯ ಜಯ ರಾಮಾ ಸಕಲ ಗುಣಧಾಮ | ೩೮೬ |
| ೧೩೩. | ಜಯ ಜಯವೆಂದು ಶರಣೆನ್ನಿ ಹನುಮಯ್ಯಗ | ೫೬ |
| ೧೩೪. | ಜಯಜಯದೇವ ದೇವಾ | ೫೨ |
| ೧೩೫. | ಜಯ ಜಯ ಶ್ರೀನಿವಾಸ | ೩೮೦ |
| ೧೩೬. | ಜಯ ಭಾಗೀರಥಿದೇವಿ ಜಯ ಜಾನ್ಹವಿ | ೧೨ |
| ೧೩೭. | ಜಯ ಮಂಗಳಂ ನಿತ್ಯಶುಭ ಮಂಗಳಂ | ೪೭ |
| ೧೩೮. | ಜಯ ಮಂಗಳಂ ಮಹಾ ಶುಭಮಂಗಳಂ ಭಯ | ೩೮೧ |
| ೧೩೯. | ಜಯ ಮಂಗಳಂ ಮಹಾಶುಭಮಂಗಳಂ ತ್ರಯಭುವನ | ೩೮೩ |
| ೧೪೦. | ಜಯ ಮಂಗಳಮ ಮಹಾಶುಭಮಂಗಳಂ ಮಂಗಳಂ | ೩೮೪ |
| ೧೪೧. | ಭಾವ ಭಕುತಿಗೆ ವಲಿವ ನೋಡಿರೋ | ೨೮೫ |
| ೧೪೨. | ಜಯರಾಘವ ಜಯರಾಘವ ಜಯರಾಘವ ರಾಮಾ | ೩೭೮ |
| ೧೪೩. | ಜೆನ್ನೊಡಲ [illegible] ಬಾನ್ಮಣಿಗಳಾವನಡಿ | ೪೦೬ |
| ೧೪೪. | ಜೋಗಿ ಬಂದನೋ ಗೋವಿಂದಾ ನಮ್ಮಾ | ೧೯೫ |
| ೧೪೫. | ಜೋಗಿಯ ನೋಡಿರೇ ತಾಪಸ ಯೋಗಿಯ ನೋಡಿರೇ | ೨೪ |
| ೧೪೬. | ಜೋ ಜೋ ಜೋ ಜೋ ದೇವರದೇವನೆ ಜೋ ಜೋ | ೩೯೯ |
| ೧೪೭. | ಜೋ ಜೋ ನಿಜಕಂದಾ ಮುಕುಂದಾ | ೩೯೬ |
| ೧೪೮. | ಜೋ ಜೋ ಜೋ ಬಾಲ ಮುಕುಂದಾ | ೩೯೭ |
| ೧೪೯. | ಜೋ ಜೋಯೆನ್ನುತಲಿ ಗೋಪಿ | ೩೯೮ |
| ೧೫೦. | ಡಂಭಕ ಹರಿದೂರ ಪ್ರಾಣ | ೧೯೬ |
| ೧೫೧. | ತಪ್ಪುಗಳೆಣಿಸದೆ ಸಿದ್ದೇಶಾ | ೧೯೭ |
| ೧೫೨. | ತಪ್ಪು ಕ್ಷಮೆಮಾಡೋ ಕೃಪೆಯಿಂದ ನೋಡೋ | ೧೯೮ |
| ೧೫೩. | ತಾನೇ ತಾನು ಜಗದಂತರ್ಯಾಮಿ ವಿಶ್ವಂಭರಿತಾ | ೧೯೯ |
| ೧೫೪. | ತಾರಿಸಬೇಕೋ ಯನ್ನಾ ಯಾದವ ರನ್ನಾ | ೨೦೦ |
| ೧೫೫. | ತಾಳಲಾರೆನಮ್ಮಾ ಬಾಲಕನಟ್ಟುಳ್ಳಿ ಗೋಪಿ ಘನವಮ್ಮ | ೨೦೧ |
| ೧೫೬. | ತಿಳಿದು ನೋಡಯ್ಯಾ ತಿಳಿದು ನೋಡಯ್ಯಾ | ೪೦೭ |
| | ಜಯ ಮಂಗಳಂ ಮಹಾ ಶುಭಮಂಗಳಂ [illegible] | [illegible] |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೧೫೭. | ತಿಳಿಯದು ಆಟಾ ಶ್ರೀಹರಿ ನಿನ್ನ | ೨೦೨ |
| ೧೫೮. | ತಿಳಿಯದ್ಯೆ ಶ್ರೀಹರಿಯೇ ನಿನ್ನ ಮಹಿಮೆ | ೨೦೩ |
| ೧೫೯. | ತೋರವ್ವ ಕೆಳದೀ ಶ್ರೀನಿಧಿಯ ಕಾರುಣ್ಯಾಂಬುಧಿಯಾ | ೨೦೪ |
| ೧೬೦. | ತೋರವ್ವಾ ಕೆಳದಿ ಶ್ರೀರಂಗನಾ ಭವ ಭಂಗನಾ | ೨೦೫ |
| ೧೬೧. | ತೋರಿಸೇ ಗೋಪಿ ತೋರಿಸೇ | ೧೧೦ |
| ೧೬೨. | ತಂದು ತೋರೆ ಮಂದಹಾಸನ ಕಾಮಿನಿ | ೧೦೫ |
| ೧೬೩. | ತಂದು ತೋರೆ ಮಂದಹಾಸನಾ ತಂದು ತೋರೇ | ೭೯ |
| ೧೬೪. | ದಯಮಾಡ್ಯೆ ಶ್ರೀಹರಿಯನಗಿಂದು | ೨೦೬ |
| ೧೬೫. | ದಾರಿ ದೋರೆನಗೆ ಮುಕ್ಕುಂದಾ | ೨೦೭ |
| ೧೬೬. | ದಾರೇನೆಂಬುರ್ಯೆ ಹರಿಭಕ್ತರಿಗೆ ದಾರಲ್ಲವೆಂಬುರ್ಯೆ | ೨೦೮ |
| ೧೬೭. | ದಾಸನಾಗುವೆನು ಹರಿಯೇ ನಿಮ್ಮ | ೨೦೯ |
| ೧೬೮. | ದೀನದಯಾಳು ಹರಿ ಕೃಪಾನಿಧಿ | ೨೧೩ |
| ೧೬೯. | ದ್ಯುಮಣಿ ಮಂಡಲವ ತುಡುಕಲು ಹವಣಿಸಿದ ಹಸ್ತಾ | ೫೫ |
| ೧೭೦. | ದೇವತನದ ಮಹಿಮೆಯಗಳೆದೇ | ೨೧೦ |
| ೧೭೧. | ದೇವ ದೇವ ಧೇವ ದೇವ ದೇವಾದಿದೇವಾ | ೨೧೨ |
| ೧೭೨. | ದೇವ ದೇವಾ ಸಾರಂಗಪಾಣೀ | ೨೧೧ |
| ೧೭೩. | ಧನ್ಯನಾದೆನು ಗುರು ನಿಮ್ಮಯ ದಯದೀ (ಸತ್ಯಪೂರ್ಣರ ಸ್ತೋತ್ರ) | ೧೬ |
| ೧೭೪. | ಧಾನ್ಯಮೌನಗಳೆಂಬ ಜ್ಞಾನಸಾಧನೆಗಳನು | ೨೧೪ |
| ೧೭೫. | ಧೂಪಾರತಿಯ ನೋಡುವ ಬನ್ನಿರಯ್ಯಾ | ೨೧೫ |
| ೧೭೬. | ನಡಿ ನೀರೇ ಪೋಪಾ ದೇವಿ ಇದ್ದೆಡೆಗೆ | ೨೧೬ |
| ೧೭೭. | ನಡಿಯಬೇಕಲ್ಲೋ ರಂಗಾ ವಳಮನಿಗೆ | ೧೧೧ |
| ೧೭೮. | ನಮ್ಮ ರಂಗನ ಕಂಡಿರ್ಯಾ ಹೇಳಿರಿ ನೀವಮ್ಮಾ | ೨೧೭ |
| ೧೭೯. | ನಮ್ಮ ರಂಗ ಮಥುರೆಗೆ ನಡೆತರಲು | ೧೧೯ |
| ೧೮೦. | ನಮೋ ನಮೋ ನಮೋ ಎಂಬೆ ನಿನಗೆ ಸ್ವಾಮಿ | ೨೧೮ |
| ೧೮೧. | ನಮೋ ನಮೋ ಗಣೇಶಾ | ೧೮ |
| ೧೮೨. | ನಮೋ ನಮೋ ಮುಖ್ಯ ಪ್ರಾಣನಾಥನೇ | ೫೭ |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೧೮೩. | ನಮೋ ನಮೋ ವೆಂಕಟೇಶ | ೨೧೯ |
| ೧೮೪. | ನಮೋ ಶ್ರೀರಮಣೀ ಜಯ ತ್ರಿಭುವನ ಜನನೀ | ೭೦ |
| ೧೮೫. | ನರನಾದಮ್ಯಾಲ ಹರಿನಾಮ ಜಿಹ್ವೆದಲಿರ ಬೇಕು | ೨೨೦ |
| ೧೮೬. | ನರಹರಿ ತಾರಿಸೊ ಎನ್ನಾ ದುರಿತಾರಿ | ೧೦೮ |
| ೧೮೭. | ನರ ಹರಿನಾಮವ ನೀ ನೆನೆದರೆ | ೨೨೧ |
| ೧೮೮. | ನರಹರಿಬಂದು ಮೂಡಿದಾ | ೧೦೯ |
| ೧೮೯. | ನಜ ಸುವರ್ಣದ ಪರಿಯ ಹೊಳೆವಕೆಂಜೆಡೆಯಲೀ | ೪೬ |
| ೧೯೦. | ನಕ್ಷತ್ರ ರಮಣನಯ್ಯನಿಗೊಲಿದು ಶರವನಿತ್ತೆ | ೨೯ |
| ೧೯೧. | ನಾಥ ದೀನಾನಾಥ ಸದ್ಗತಿ ದಾತ ನೋಡಿರೊ ಭವ | ೧೧೮ |
| ೧೯೨. | ನಾಮ ನೆನೆಯೊ ನೀಲಾಂಗನಾ | ೨೨೨ |
| ೧೯೩. | ನಾರಾಯಣ ನರಹರಿ ಮಾಧವ ನಿಮ್ಮ ಪಾದಾ ದೋರೋ | ೨೨೩ |
| ೧೯೪. | ನಿನಗೇನಾಯಚ್ಚರಿಲ್ಲೊ ಕೇಳಾತ್ಮಾ | ೨೨೪ |
| ೧೯೫. | ನಿನ್ನ ನಗಲಿದಾ ಮೊದಲು ಪನ್ನಗವೇಣಿ | ೨೨೫ |
| ೧೯೬. | ನಿನ್ನ ನಾನೇನೆಂದೆ ನಿರ್ಮಲರೂಪನೆ | ೩೦ |
| ೧೯೭. | ನಿನ್ನನೇ ಮೊರೆ ಹೊಕ್ಕಿಹೆನೋ | ೪೦೮ |
| ೧೯೮. | ನಿನ್ನನೇ ನಂಬಿದೆನಯ್ಯಾ ಎನ್ನ ಬಿಡದಿರು ಕೈಯ್ಯಾ | ೪೦೮ |
| ೧೯೯. | ನಿನ್ನ ಮೂರುತಿಯ ತೋರಿಸೋ ರಂಗಯ್ಯಾ | ೮೫ |
| ೨೦೦. | ನಿನ್ನವನಾನೆಂದು ಸಿರಿನಲ್ಲಾ – ರಕ್ಷಿಸೋ | ೨೨೭ |
| ೨೦೧. | ನಿನ್ನವನೆನಿಸಿದಾ ಮಾನವನಿಂಗೆ | ೨೨೮ |
| ೨೦೨. | ನಿನ್ನ ಹಿತವಾ ಪಡಿಯೋ ಹರಿಯ ಭಜಿಸಿ | ೨೨೯ |
| ೨೦೩. | ನಿಲ್ಲದೋ ನಿಲ್ಲದೋ ಮನವಿದು ಸಲ್ಲದೋ ಸಲ್ಲದೋ | ೨೩೦ |
| ೨೦೪. | ನಿಲಿಸಯ್ಯಾ ನಿಲಿಸೆನ್ನ ಮನವ ಶ್ರೀ ಹರಿಯೇ ನಿನ್ನಾ | ೨೩೧ |
| ೨೦೫. | ನೀಡಲೋ ಶ್ರೀರಂಗಾ ನಿನ್ನ ದಾಸರ ಸಂಗಾ | ೨೩೨ |
| ೨೦೬. | ನೀಯನ್ನಾ ಸಲಹುತಿಹೆ ಜನುಮ ಜನುಮಗಳಲ್ಲಿ | ೨೩೮ |
| ೨೦೭. | ನೀರಜಗಂಧಿಯೇ ಹೇಳೆ ಸುಳಿದವರಾರಮ್ಮ | ೨೩೩ |
| ೨೦೮. | ನೀರೇ ಜಗದಾಧಾರನ ತೋರೇ ಮೋಹನಕಾರೇ | ೨೩೪ |
| ೨೦೯. | ನೀರೇ ತೋರೇ ಪಯೋನಿಧಿ ವಾಸನಾ | ೨೩೫ |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೦೦. | ನೀರೇ ದೋರೇ ದೋರೇ ರಂಗನಾ | ೮೧ |
| ೨೦೧. | ನೀರೇ ನೀ ಕರೆತಾರೇ ಪ್ರಾಣದೊಲ್ಲಭನಾ ಜಾಣೆ ಸುಜ್ಞಾನೇ | ೨೩೬ |
| ೨೦೨. | ನೀರೇ ತೋರೆಲ ಜಗಪಾಲ ಮುಕುಂದನಾ | ೨೩೭ |
| ೨೦೩. | ನುಡಿ ಎನ್ನ ಪ್ರಿಯನಾ ನೀ ತಂದು ತೋರೇ ಸುಜ್ಞಾನೆ | ೨೩೯ |
| ೨೦೪. | ನೆನಿ ಮನವೇ ನೀ ಮುಕುಂದನಾ | ೨೪೦ |
| ೨೦೫. | ನೆನೆಯೋ ನೀ ಯನ್ನ ಮನವೇ | ೨೪೧ |
| ೨೦೬. | ನೆನೆವೆನಾ ನೆನೆವರಿಗೊಲಿವನಾ | ೨೪೨ |
| ೨೦೭. | ನೋಡಮ್ಮಾ ಎಂಥವನಿವಾ ಚಿನ್ನನೆ | ೨೪೩ |
| ೨೦೮. | ನೋಡಮ್ಮ ಶ್ರೀವಾಸುದೇವನಾ ನಮ್ಮ | ೨೪೪ |
| ೨೦೯. | ನೋಡಿರೇ ನೋಡಿರಮ್ಮ ಚೆಲುವನಾ ನೋಡಿರೇ | ೧೦೭ |
| ೨೧೦. | ನೋಡಿರೇ ನಂದ ಕಂದನಾ | ೨೪೫ |
| ೨೧೧. | ನೋಡಿರೆ ನೋಡಿರೆ ನಂದನ ಕಂದನ | ೨೪೬ |
| ೨೧೨. | ನೋಡುವ ಬನ್ನಿಪೂಜೆ ಮಾಡುವ ಬನ್ನಿ | ೩೧ |
| ೨೧೩. | ನೋಡುವರೇ ಅಂತವಾ ನೋಡುವರೇ | ೨೪೭ |
| ೨೧೪. | ನಂದಕಂದನ ನೋಡಿರೇ ಅಂದದಿ ಛಂದದಿ ಪಾಡಿರೆ | ೨೪೮ |
| ೨೧೫. | ನಂದ ಕಂದನೇ ಇವ ಸುರವೃಂದ ವಂದ್ಯನೇ | ೨೪೯ |
| ೨೧೬. | ನಂದ ನಂದನ ಪದ್ಮಾನಂದನ ವಂದ್ಯನೇ | ೨೫೦ |
| ೨೧೭. | ನಂಬಬೇಕು ಹರಿಯ ನಾಮಾ | ೨೫೧ |
| ೨೧೮. | ನಂಬಿದವರಾಇಂಬಾದಾ ಕಮಲಾಂಬಕನೇ | ೨೫೭ |
| ೨೧೯. | ನಂಬಿ ನೆನಿಯೋ ಹರಿಯ ನಾಮಾ ವಿಡಿದು ಘನಪ್ರೇಮಾ | ೨೫೨ |
| ೨೨೦. | ನಂಬಿ ಭಜಿಸಿರ್ಕೈಯ್ಯಾ ಶರಣರು | ೨೫೩ |
| ೨೨೧. | ನಂಬಿ ಭಜಿಸು ಹರಿಯಾ | ೨೫೪ |
| ೨೨೨. | ನಂಬು ದಯಾನಿಧಿ ರಾಮನಾ | ೨೫೬ |
| ೨೨೩. | ನಂಬು ನರಮೃಗನಾ ಮನುಜಾ | ೨೫೮ |
| ೨೨೪. | ನಂಬುಗೇ ಪಡೆಯಿರೋ ದೇವರದೇವನಾ | ೨೫೫ |
| ೨೨೫. | ನಂಬುಮನವೇ ರಾಮಚಂದ್ರನಾ | ೨೫೯ |
| ೨೨೬. | ನಂಬು ಹರಿಯಾ ಎನ್ನ ಮನವೇ | ೨೬೦ |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೩೭. | ಪತ್ರವರರಥ ಪುತ್ರ ಪುತ್ರ ಪತಿಜಿತ ಪಿತ್ರ | ೪೦೯ |
| ೨೩೮. | ಪಾದಕ ನಮಿಸುವೆನಾ ಶಿವನಾ ಪಾದಕ ನಮಿಸುವೆನಾ | ೩೨ |
| ೨೩೯. | ಪಾದಾ ನಂಬು ಮನವೇ ಶ್ರೀರಂಗಯ್ಯನ | ೨೬೧ |
| ೨೪೦. | ಪಾಲಯಾ ಉರಗಾರಿ ಗಮನಾ | ೪೧೧ |
| ೨೪೧. | ಪಾಲಯಾನಂತ ಶಯನಾ | ೨೬೨ |
| ೨೪೨. | ಪಾಲಿಸಯ ಯನ್ನ ಪಾದ ಪದ್ಮದೋರಿ ನೀ | ೨೬೩ |
| ೨೪೩. | ಪಾಲಿಸೆನ್ನ ದೀನದಯಾಳಾ | ೨೫೪ |
| ೨೪೪. | ಪಾಲಿಸೋ ಎನ್ನ ನೀ ಘನಕರುಣದಲಿ | ೨೬೫ |
| ೨೪೫. | ಪಾಲಿಸೋ ರಘುರಾಯಾ | ೨೬೬ |
| ೨೪೬. | ಪಾರ್ವತಿಪತಿ ಆರ್ವರಾಭಿಷ್ಟಿಯ | ೫೩ |
| ೨೪೭. | ಪಾಹಿಮಾಂ ಪಾಹಿ ಶಿವಹರ ಮೃಡ ಶಂಭೋ | ೩೩ |
| ೨೪೮. | ಪ್ರಾಣನ್ನೋಡಿರೇ ಮುಖ್ಯ ಪ್ರಾಣನ್ನೋಡಿರೇ | ೫೮ |
| ೨೪೯. | ಪುಷ್ಕರಾದ್ಯಾದಿ ತೀರ್ಥಂಗಳಾವನ ಪಾದ | ೪೧೨ |
| ೨೫೦. | ಪೂಜೆಯ ನಾನೇನ ಮಾಡಿವೆ ಮಹಾ ರಾಜರಾಜ | ೨೬೭ |
| ೨೫೧. | ಫಲಹಾರವ ಮಾಡೋ ಪದುಮಲೋಚನನೆ | ೨೬೮ |
| ೨೫೨. | ಬಣ್ಣಿಸಲಳವಲ್ಲ ನಿಮ್ಮ ಪ್ರಸನ್ನ ಮೂರುತಿ | ೫೯ |
| ೨೫೩. | ಬರಹೇಳಮ್ಮಾಭಾವೇ ಮನೆಗೆ | ೨೭೦ |
| ೨೫೪. | ಬರದು ಬಂದು ದೂರಬ್ಯಾಡಿರೇ ನೀವೆಲ್ಲಾ | ೨೬೯ |
| ೨೫೫. | ಬರೇ ವಾಚಾಭಿಮಾನವಿದೇಕೆ ಹರಿ ಲೀಲಾಮೃತ ಸೇವಿಸಲಿಕ್ಕೆ | ೧ |
| ೨೫೬. | ಬಲವಂತರೊಳಗೆ ಬಲವಂತ ಹನುಮಾ | ೬೫ |
| ೨೫೭. | ಬಲ್ಗೈಯರಸರಂಜಿಸುಮ್ಮನಿರೆ ದಶಕಂಠ | ೪೧೦ |
| ೨೫೮. | ಬಾರವ್ವ ಜಗದಂಬೆ ಶರಣೆಂದು ಬಲಗೊಂಬೆ | ೭೧ |
| ೨೫೯. | ಬಾರನ್ಯಾತಕ ಯದುವೀರಾ ಪಾದಾಂಬುಜವದೋರಾ | ೨೭೧ |
| ೨೬೦. | ಬಾರನೇನೆ ಭಾಗ್ಯನಿಧಿ ಬಡವರ ಮರೆಯದೇ | ೧೧೪ |
| ೨೬೧. | ಬಾರೆನ್ನ ಸಖಿಯೇ ಕರೆದು ತೋರೆಸೇ | ೨೭೩ |
| ೨೬೨. | ಬಾರೋ ಈರೇಳು ಜಗಜೀವನಾ | ೯೧ |
| ೨೬೩. | ಬಾರೋ ಬಾರೋ ರಂಗಾ | ೮೬ |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೬೪. | ಬಾರೋ ಬಾರೋ ಕೋಪವಿನ್ಯಾತಕೆನ್ನ ಕೂಡ ರಂಗರಾಯ | ೨೭೪ |
| ೨೬೫. | ಬಾರೋ ಬಾರೋ ಬಾರೋ ರಂಗಾ ಬಾರೋ ಶುಭಾಂಗಾ | ೮೯ |
| ೨೬೬. | ಬಾರೋ ಬಾರೋ ಭಾವಜನ್ಯೆಯ್ಯಾ ತಾರಿಸೋ ಎನ್ನನು | ೮೮ |
| ೨೬೭. | ಬಾರೋ ಬಾರೋ ಮೋಹನಾ ಶ್ರೀ ದೇವಾ | ೯೭ |
| ೨೬೮. | ಬಾರೋ ಬಾರೋ ಎನ್ನ ನೀತಾರಿಸಬಾರೋ | ೯೬ |
| ೨೬೯. | ಬಾರೋ ಬಾರೋ ರಂಗಯ್ಯ | ೯೫ |
| ೨೭೦. | ಬಾರೋ ಬಾರೊ ರಂಗಯ್ಯ ನೀ ಬಾರೋ ನಿನ್ನ | ೯೪ |
| ೨೭೧. | ಬಾರೋ ವಾರಿಜಚರಣಾ | ೯೦ |
| ೨೭೨. | ಬಾರ್‍ಯೆಯ್ಯಾ ಕುರುಣಾ ಸುರಾರ್ಚಿತ | ೮೭ |
| ೨೭೩. | ಬಾರ್‍ಯೆಯ್ಯಾ ಗೋವಿಂದಾ ನಂದ ಮುರಹರ | ೯೮ |
| ೨೭೪. | ಬಾರ್‍ಯೆಯ್ಯಾ ಗೋವಿಂದಾ ಕೀರ್ತನೆಗೆ ಮುಕುಂದಾ | ೯೨ |
| ೨೭೫. | ಬಾರ್‍ಯೆಯ್ಯಾ ಗೋವಿಂದಾ ಬಾರೋ ನಂದನ ಕಂದಾ | ೯೩ |
| ೨೭೬. | ಬಾಲನೇ ಗೋಪಿ ಬಾಲನೇ | ೨೭೨ |
| ೨೭೭. | ಬಾಲ ಲೀಲ ಕೃಷ್ಣನಾ ಬಾಲಲೀಲ ಲೋಲ ಕೃಷ್ಣ | ೨೭೫ |
| ೨೭೮. | ಬಿಡೆ ಬಿಡೆನೋ ನಿನ್ನಾ ಅಡಿಗಳ ಯುಗಳನ್ನಾ | ೨೭೬ |
| ೨೭೯. | ಬೆಳಗಾಯಿತೇಳಿರಯ್ಯಾ ಇಳೆಯೊಳಭಿನವ ಮುನಿ | ೧೪ |
| ೨೮೦. | ಬೆಳಗುವಾರುತಿ ಬನ್ನಿ ಲಲನೆಯರೆಲ್ಲರು | ೨೭೭ |
| ೨೮೧. | ಬಂದ ಜನ್ಮಬರಲಂಜಲ್ಯಾತಕ ಗೋವಿಂದ ನಿನ್ನೆಚ್ಚರ | ೨೭೮ |
| ೨೮೨. | ಬಂದನಮ್ಮಾ ಬಂದನಮ್ಮಾ ನಮ್ಮ ರಂಗನು | ೨೭೯ |
| ೨೮೩. | ಬಂದನೇಳೇದೇವಿ ರಂಗ ಮನೆಗೆ | ೨೮೧ |
| ೨೮೪. | ಬಂದವನಾರ್‍ಯೆಯ್ಯಾ ನೀನು | ೨೮೨ |
| ೨೮೫. | ಬಂದಾನಲ್ಲೆವೆ ಮನೆಗಿಂದು ಕೇಳವ್ವಾ | ೨೮೦ |
| ೨೮೬. | ಭಕುತರ ರಿಣಕಂಜಿ ಅಡಗಿದರೇ | ೯೯ |
| ೨೮೭. | ಭಕುತಿಯಲಿ ಭಜಿಸಿ ಹರಿಯ ಸುಖಿಸಬಾರದೇ | ೨೮೩ |
| ೨೮೮. | ಭಜಿಸು ಮನವೇ ಶ್ರೀ ರಂಗಯ್ಯನಾ | ೨೮೪ |
| ೨೮೯. | ಭಾವಭಕುತಿಗೆ ವಲಿವ ನೋಡಿರೋ | ೨೮೫ |
| ೨೯೦. | ಭಂಗ ಬಡುವ ಸಂಸಾರದಿ ಕುಜನರ ಸಂಗದಲಿ ಸರಿಯೋ | ೪೨೨ |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೯೧. | ಮತ್ತೆ ನಾನೇನೆಂದೆ ಮದನ ಜನಕ | ೨೮೬ |
| ೨೯೨. | ಮದ್ದಾನೆಗತಿ ಸಖಿಬಾರಮ್ಮ | ೨೮೭ |
| ೨೯೩. | ಮರುಳು ಮಾಡಿದನಲ್ಲೇ ಏಣಾಕ್ಷಿ | ೨೮೮ |
| ೨೯೪. | ಮಾಡು ಸಂತರ ಬಳಕೀ ಏ ಮಾನವಾ | ೨೮೯ |
| ೨೯೫. | ಮಾಡೆಲೋ ಹರಿಪಾದ ಭಜನಿ ಮನವೇ ನೀ | ೨೯೦ |
| ೨೮೬. | ಮಾತನಾಡಲೆ ಜಾಣೆಮೋಹನಭಿ ಮದಯಾನೆ | ೨೯೧ |
| ೨೯೭. | ಮಾಧವಾ ನಿಮ್ಮ ನಾಮ ಸಾಲದೇ | ೨೯೨ |
| ೨೯೮. | ಮಾಧವಾ ರಕ್ಷಿಸೆನ್ನಾ ಮೋಹನಾ ನಿನ್ನಾ | ೨೯೩ |
| ೨೯೯. | ಮಾ ಮನೋಹರಾ ಮುರಾರಿ ಬಾರೋ | ೨೯೪ |
| ೩೦೦. | ಮುಕುತಿಗೆ ಹೊಣೆಯಿದಕೋ ಭಕುತಿ | ೨೯೫ |
| ೩೦೧. | ಮುದ್ದುತಾರೋ ರಂಗಾ ಮುದ್ದುತಾರೋ ಕೃಷ್ಣಾ | ೨೯೬ |
| ೩೦೨. | ಮುನಿದಳ್ಯಾತಕ ನೀರೇ ಪಾರ್ವತಿ ಮಾಡ ಸಮರತಿ | ೨೯೭ |
| ೩೦೩. | ಮೊರೆಯ ಹೊಕ್ಕೆನು ನಿನ್ನಾ ಚರಣ ಕಮಲಕ | ೨೯೮ |
| ೩೦೪. | ಮಂಗಳ ಜಯ ಜಯ ಮಂಗಳ ಶುಭ | ೩೯೨ |
| ೩೦೫. | ಮಂಗಳ ಮಹಿಮ ಶುಭಾಂಗಗ ಮಂಗಳ | ೩೮೯ |
| ೩೦೬. | ಮಂಗಳಾರುತಿಯ ತಂದೆತ್ತಿರೇ | ೩೯೧ |
| ೩೦೭. | ಮಂಗಳಾರುತಿಯ ತಂದೆತ್ತಿರೇ ಜಯ ಮಂಗಳ ಮೂರ್ತಿ | ೨೧ |
| ೩೦೮. | ಮಂಗಳಂಜಯ ಮಂಗಳಂ ಶುಭ ಮಂಗಳಗೆನ್ನಿರೇ | ೩೮೮ |
| ೩೦೯. | ಮಂಗಳಂ ಶ್ರೀರಂಗಗ ಮಂಗಳಂ | ೩೯೦ |
| ೩೧೦. | ಯಲರುಣಿಸು ಮೈಮಂಚ ಪಕ್ಕಿಯಾಣ್ಮನದೇರ | ೪೧೩ |
| ೩೧೧. | ಯಾಕೆ ರಂಗ ನಿನಗೆ ಮಾಕಾಂತೆಯೊಳು ಗರ್ವ | ೩೦೦ |
| ೩೧೨. | ಯಾಕೆಲೋ ರಂಗ ನಿನ್ನರಸಿಯೊಳು ಮುನಿದಿರುವೆ | ೨೯೯ |
| ೩೧೩. | ಯಾಕೆ ವದಗಲೊಲ್ಲಿಯನ್ನಯಬಿನ್ನಹಕ | ೩೦೧ |
| ೩೧೪. | ರಘುನಾಥ ದೀನಾನಾಥ ಸದ್ಗತಿದಾತ ನೋಡಿರ್ಯೋ | ೩೦೨ |
| ೩೧೫. | ರಘುಪತಿಯಾ ತೋರಮ್ಮಾ | ೭೪ |
| ೩೧೬. | ರಘುರಾಯ ಎನ್ನ ಮನವ ನಿಲಿಸಲಾಗದೇ | ೩೦೩ |
| ೩೧೭. | ರಕ್ಷಿಸೆನ್ನ ನೀ ಲಕ್ಷುಮೀಪತಿ | ೩೦೪ |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೩೧೮. | ರಾಮಕೃಷ್ಣ ಗೋವಿಂದ ಗೋಪಾಲಾ ಜಯ ಜಗಜೀವನಾ | ೩೦೫ |
| ೩೧೯. | ರಾಮಚಂದ್ರನೇ ಪರದೈವನೊ ನಮ್ಮ | ೩೦೭ |
| ೩೨೦. | ರಾಮಾನಮವನು ನೆನಿಯಬಾರದೆ | ೩೦೮ |
| ೩೨೧. | ರಾಮ ಬಾಣಾಕ್ಷಪಿತ ರಾಮ ಶಶಿಭುಜ ಶೋಭ | ೪೧೪ |
| ೩೨೨. | ರಾಮ ರಘೋತ್ತಮ ಕೃಷ್ಣಘನ | ೩೧೧ |
| ೩೨೩. | ರಾಮರಸಾಯನವಾ ಬನ್ನಿರಯ್ಯಾ ಸೇವಿಸುವಾ | ೩೦೯ |
| ೩೨೪. | ರಾಮ ಸಲಹಯ್ಯ ಪುಣ್ಯನಾಮ | ೩೧೨ |
| ೩೨೫. | ರಾಮ ಬಂದನೇನೆ ಶ್ರೀರಘುರಾಮ ಬಂದನೇನೆ | ೧೧೨ |
| ೩೨೬. | ರಾಮಾಕೃಷ್ಣಾ ಗೋವಿಂದಾ ಗೋಪಾಲ ಕೇಶವಾ | ೩೦೬ |
| ೩೨೭. | ರಮಾಯೆನ್ನಿ ರಾಮಾಯೆನ್ನಿ ರಾಮಯೆನ್ನಿರೈಯ್ಯಾ | ೩೧೦ |
| ೩೨೮. | ರಂಗನಟ್ಟುಳಿ ಕೇಳೆ ಗೋಪಮ್ಮಾ | ೩೧೩ |
| ೩೨೯. | ರಂಗ ಬಂದಾನಮ್ಮಾ ಭಂಗಿಸಿ ಕಾಳಿಯ ಫಣಿಯಲಿಂದು | ೩೧೪ |
| ೩೩೦. | ವದನದಲಿ ಮನವೆ ನೆನಿನಾಮ ಶ್ರೀ ಹರಿಯಾ | ೩೧೫ |
| ೩೩೧. | ವನರುಹಾಕ್ಷಿ ವನಮಾಲಿಂಗೇ ಏನು ಮರುಳಾದೇ ನೀ | ೭೨ |
| ೩೩೨. | ವಾರಿವದನ ಗೇಹ ವಾಸಮಾಡಿದನ | ೩೪ |
| ೩೩೩. | ವಾಸುದೇವನ್ನಾ ಪಾದವ ನಂಬಬಾರದೇ | ೩೧೬ |
| ೩೩೪. | ವಿವೇಕದಿಂದಾ ಮತಿಯಕ್ತನಾಗಿ | ೩೧೭ |
| ೩೩೫. | ಶರಣಜನೋದಧಿ ಚಂದ್ರಾಸಿರಿ | ೩೧೮ |
| ೩೩೬. | ಶರಣರೆಳಕಂದಿ ನೀನ್ಯಾಕ ಕರುಣಿಸಲೊಲ್ಲಿ | ೩೧೯ |
| ೩೩೭. | ಶರಣು ಕೃಷ್ಣವೇಣಿ ಶರಣು ಪುಣ್ಯಾಭರಣಿ | ೧೧ |
| ೩೩೮. | ಶರಣು ವೆಂಕಟರಮಣ ಭಕ್ತ ಸಂಕಟಹರಣ | ೩೨೦ |
| ೩೩೯. | ಶರಣುಶರಣು ಶರಣರಕ್ಷಕ ಶರಧಿವಾಸನೆ ಕೇಶವಾ | ೪೧೫ |
| ೩೪೦. | ಶರಣುಶರಣು ಹರ ಸುಂದರ ಶಂಕರ | ೫೬ |
| ೩೪೧. | ಶರಣು ಶಾರದೆ ವಾಣಿ | ೬೬ |
| ೩೪೨. | ಶರಣು ಶಾರದೆ ವಾಣಿ ಸರಸಿಜಾಸನ ರಾಣಿ | ೬೭ |
| ೩೪೩. | ಶರಣು ಶಿರೀಶ ಹರೇ | ೩೨೨ |
| ೩೪೪. | ಶರಣು ಶಿರೀಶ ಹರೇಗೋವಿಂದಾ | ೩೨೧ |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೩೪೫. | ಶರಣು ಶ್ರೀಗಣನಾಥ ಮೂಷಕೇಂದ್ರ ವರೂಥ | ೧೯ |
| ೩೪೬. | ಶರಣು ಶ್ರೀಗುರುಲಿಂಗ ಶರಣು ಮುನಿಜನಸಂಗ | ೩೫ |
| ೩೪೭. | ಶರಣು ಸರ್ವಾತೀತೆ ಶ್ರೀದೇವಿ ವಿಖ್ಯಾತೆ | ೪೨೪ |
| ೩೪೮. | ಶರಣು ಶರಣು ಸರ್ವಾತೀತೆ ಸುರಬ್ರಹ್ಮಾದಿವಂದಿತೆ | ೭೩ |
| ೩೪೯. | ಶರಣು ಹೈಮವತೀಶ ಶಿವಶಂಭು ಅವಿನಾಶ | ೩೭ |
| ೩೫೦. | ಶರಣೆಂಬೆ ಗುರುರಾಯಾ ಶರಣ ಜನರಾಶ್ರಯಾ | ೬೦ |
| ೩೫೧. | ಶರಣೆಂಬೆ ತನು ಮನದಿಂದ ಗಣರಾಯಾ | ೨೦ |
| ೩೫೨. | ಶಿವನಾ ಭವನಾ ಮನವೇ ನೆನೆ ಗಿರಿಜಾಧವನಾ | ೪೦ |
| ೩೫೩. | ಶಿವ ಶಿವ ಮಹಾದೇವಾಶಂಕರಾ ಹರಹರ ಮಹಾದೇವಾ | ೩೮ |
| ೩೫೪. | ಶಿವ ಶಿವಯನ್ನಿ ಮನದೊಳು ಹರಹರಯನ್ನಿ | ೪೧ |
| ೩೫೫. | ಶಿಶುಗಳ ಪರಾಧಕೆ ಶಿಕ್ಷೆ ಕಣ್ಣಿಲಲ್ಲದೇ | ೩೨೩ |
| ೩೫೬. | ಶಿಶುವಿನ ಯಾತಕೆ ದೂರುವಿರೆ | ೩೨೪ |
| ೩೫೭. | ಶ್ರೀಕೃಷ್ಣನಾ ಚರಣಾ ನಂಬಿ ಭಜಿಸುವುದು ಬಲು ಲೇಸು | ೩೨೫ |
| ೩೫೮. | ಶ್ರೀ ಗಿರೀಶಾ ನಮೋ ಮಹಾದೇವಾ | ೩೯ |
| ೩೫೯. | ಶ್ರೀ ಮತ್ಕಾಂಚನ ಕೋಟಿರನ್ನತನಯಾ | ೪೦೦ |
| ೩೬೦. | ಶ್ರೀರಮಣಿಯರಸ ಕಂಜೋದ್ಭವಾರ್ಚಿತ ಪುಣ್ಯ | ೫ |
| ೩೬೧. | ಶ್ರೀ ರಾಮನಾಮ ಸ್ಮರಿಸೀಕ್ಷಕಾರಿ | ೩೨೬ |
| ೩೬೨. | ಶ್ರೀ ಲತಾಂಗಿಯ ವಲ್ಲಭಾಯನ್ನ | ೩೨೭ |
| ೩೬೩. | ಶ್ರೀ ವಧುನಯನಾಬ್ಜ ವಿಲೋಚಿನಾ | ೩೨೮ |
| ೩೬೪. | ಶ್ರೀ ವಧುರಮಣನ ಚರಿತಾಮೃತನು ಸೇವಿಸಬಾರದೆ ಜಿವ್ಹೆ | ೩೨೯ |
| ೩೬೫. | ಸಖೀ ಕೇಳೇ ಇನ್ನು ಹರುಷದ ಮಾತಾ | ೩೩೦ |
| ೩೬೬. | ಸಖಿ ಬಾರೆ ಸುರಮೋಹನ ನೀ ಕರತಾರೆ | ೩೩೧ |
| ೩೬೭. | ಸಣ್ಣವನೆಘನನೀಲಾ ಗೋಪಿ ಸಣ್ಣವನೆ ಘನನೀಲಾ | ೩೩೨ |
| ೩೬೮. | ಸರಸಿಜಾನನೆ ಉಚಿತ ವಲ್ಲದು | ೩೩೫ |
| ೩೬೯. | ಸರಸಿ ಜಾಂಬಕಿ ನೀರೇ ಎನಗ ತ್ವರಿತದಿ ತೋರೆ | ೩೩೬ |
| ೩೭೦. | ಶಿಶುಗಳಪರಾಧಕೆ ಶಿಕ್ಷೆ ಕಣ್ಣಿಲಲ್ಲದೇ | ೩೨೩ |
| ೩೭೧. | ಸಲಹಯ್ಯಾ ನಿನ್ನ ಸಾರಿದೇ ಶ್ರೀರಮಣನಾ | ೩೩೭ |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೩೭೨. | ಸಲಹದ್ಯೆ ಸಲಹುದ್ಯೆ ಸಲಹದ್ಯೆ ಎನ್ನಾ | ೩೩೯ |
| ೩೭೩. | ಸಲಹು ಸಲಹು ಸಲಲಿಜ ನಯನಾ ಎನ್ನಾ | ೩೩೮ |
| ೩೭೪. | ಸಲಹು ಸಲಹು ಸಲಿಲಜಾಂಬಕ | ೩೪೧ |
| ೩೭೫. | ಸಲಹುಸಲಹು ಹರಿಯೇ ದಯದಿಂದಲಿ | ೩೪೦ |
| ೩೭೬. | ಸ್ಮರಿಸೋ ಎಲೆ ಮನವೇಜಗದಯ್ಯನಾ | ೪೨ |
| ೩೭೭. | ಸ್ಮರಿಸು ಮನವೇ ನೀ ಪೂರ್ಣ ಕರುಣಾಸಾಗರ | ೩೩೪ |
| ೩೭೮. | ಸ್ಮರಿಸೆನ್ನ ಮನವೇ ಯಾದವರಾಯನ | ೩೩೩ |
| ೩೭೯. | ಸಾರ ಸಾರ ವಿಚಾರ ವಿವೇಕದ ದಾರಿಯನೇ ಬಲಿಯೋ | ೪೨೧ |
| ೩೮೦. | ಸಾರಿರ್‍ಯೆಯ್ಯಾಜನರು ಗಂಭೀರ ಗುಣನಿಧಿ ಮುಖ್ಯಪ್ರಾಣನ | ೬೧ |
| ೩೮೧. | ಸಾರಂಗ ಧೃತನಾಗ್ರಭವಳ ಮುಖ ವಾರಿರುಹ | ೪೧೬ |
| ೩೮೨. | ಸಾರಂಗರಾಜ ನಿಜ ವೈರಿ ಬಲೆಯೊಳಗಾಗಿ | ೪೧೭ |
| ೩೮೩. | ಸಿರಿದೇವ ನಮ್ಮನಿದ್ಯೆವನು ಶರಣುರಕ್ಷಕ ವಾವನು | ೩೪೨ |
| ೩೮೪. | ಸುಖಿಸು ವರದ ಕೊಂಡು | ೩೪೩ |
| ೩೮೫. | ಸುಮ್ಮನೆ ದೋರಯ್ಯಾ ರಮ್ಮೆಯಾ ಕರದಲಿ | ೩೪೪ |
| ೩೮೬. | ಸೋಮ ಮಿತ್ರಪ್ರಿಯ ಸರಸಿಜೋದ್ಭವನಯ್ಯಾ | ೪೧೮ |
| ೩೮೭. | ಸಂಗ ಮಾಡೆಲೋ ಶ್ರೀಹರಿದಾಸರಾ | ೩೪೫ |
| ೩೮೮. | ಸಾಂಬ ಶಿವಾ ಜಯ ಸಾಂಬಶಿವಾ | ೪೩ |
| ೩೮೯. | ಹನುಮಾ ಹನುಮಾಯನ್ನೆ ಉದ್ಧರಿಸುವೆ ನೀ ಜನುಮಾ | ೬೨ |
| ೩೯೦. | ಹರಿಕೃಪೆಯೋಗ್ಯ ಮುಮುಕ್ಷನು | ೩೪೬ |
| ೩೯೧. | ಹರಿದಾಸನವನೇನೋಡಿ | ೩೪೭ |
| ೩೯೨. | ಹರಿನೀನೆವೆ ಸರ್ವಚೇತನ ಧೃತಿಯ ಸಕಲವೇ | ೩೫೦ |
| ೩೯೩. | ಹರಿ ಪದ ಪದ್ಮ ಪರಾಗ ಮಧುಕರರಾಧರ ನೆರೆ ಹಿಡಿಯೋ | ೪೨೦ |
| ೩೯೪. | ಹರಿ ಪರಮಾನಂದಾ ಗೋವಿಂದಾ | ೩೫೨ |
| ೩೯೫. | ಹರಿಪಾದವ ನಂಬಿರೋ ಮನುಜರೆಲ್ಲಾ | ೩೫೧ |
| ೩೯೬. | ಹರಿಭಜನೆಯ ಮಾಡು ಮನವೆ | ೩೫೩ |
| ೩೯೭. | ಹರಿಯಾನತ ಚಂದ್ರಕೆ ಚಕೋರಾದವರಾ | ೪೧೯ |
| ೩೯೮. | ಹರಿಯಾ ಪಾದಕ ಶರಣೆನ್ನಿ | ೩೫೪ |

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೩೯೯. | ಹರಿಯಾ ಪೂಜೆಯಾ ಮಾಡಿ ಗತಿಗಳ ಬೇಡಿ | ೩೫೫ |
| ೪೦೦. | ಹರಿಯೆಂದೆನ್ನಿ ಕಪಿಲಾ ಗೋ ಸಹಸ್ರವನು ಸಾಲಂಕಾರದಿ ಸಕಲ | ೩೫೪ |
| ೪೦೧. | ಹರಿಯೇ ಕಾವುದು ಕಾವುದು ನೀ | ೩೫೬ |
| ೪೦೨. | ಹರಿಯೇ ಗತಿ ಬರ್ತನು ಜಗಕೇ | ೩೪೯ |
| ೪೦೩. | ಹರಿಯೇದಯಮಾಡು ಮಾಡು ಮಾಡು ಮಾಡು | ೩೫೭ |
| ೪೦೪. | ಹರಿಯೇ ನಮ್ಮ ಪರದೈವ ಹರಿಯೇ ತ್ರಿಭುವನ ಕಾವಾ | ೩೫೮ |
| ೪೦೫. | ಹರಿಯ ನೆನಿಯೊ ಹರಿಯಾ | ೩೫೮ |
| ೪೦೬. | ಹರಿಲೀಲೆಯ ನೋಡಿ ಹರಿಯಾಡುವದೀ | ೩೬೦ |
| ೪೦೭. | ಹರಿ ವಿಮುಖನಾದ ಮನುಜ ಶ್ವಪಚ ಶ್ರೇಷ್ಠನು | ೩೬೧ |
| ೪೦೮. | ಹರಿಹರಿ ಎನ್ನಬಾರದೇ ಮನವೇ ನೀನು | ೩೬೨ |
| ೪೦೯. | ಹರಿ ಹರಿ ಕೊಡು ನಿನ್ನ ಯಚ್ಚರನು | ೩೬೩ |
| ೪೧೦. | ಹರಿ ಹರಿ ಹರಿ ಗೋವಿಂದ ಯನಬಾರದೇ ಪ್ರಾಣಿ | ೩೬೪ |
| ೪೧೧. | ಹರಿಹರಿತಾರಿಸನ್ನ ಸಹಕಾರಿ ದಯಬೀರಿ | ೩೬೫ |
| ೪೧೨. | ಹರಿಹರಿಯನ್ನಿರೋ | ೩೬೬ |
| ೪೧೩. | ಹರಿ ಹರಿಹರಿ ಹರಿಯೆಂದು ನೆನೆದವನೇ ಧನ್ಯ | ೩೬೭ |
| ೪೧೪. | ಹರಿ ಹರಿಯೆಂದು ಸ್ಮರಿಸಲೋ ಪ್ರಾಣಿ | ೩೬೮ |
| ೪೧೫. | ಹರಿ ಹರಿ ಹರೀ ಎನ್ನಿ ಮನದೊಳು ಸ್ಮರಣೆಗೆ ಕರತನ್ನಿ | ೩೬೯ |
| ೪೧೬. | ಹಾರುವರಿಗೆ ಭೂಮಿಯಾ ನೀಡಿದೆನೆಂದು | ೩೭೦ |
| ೪೧೭. | ಹಿತನೋಡಿ ಸಂತರ ಕೂಡೀ | ೩೭೧ |
| ೪೧೮. | ಹಿಡಿಹಿಡಿರಿಂದು ಸಿಕ್ಕಿದ ಕಳ್ಳನಾ | ೩೭೨ |
| ೪೧೯. | ಹಿರಿಯ ಒಡೆಯ ಕಂಡೆನಮ್ಮಾ ಧರಿಯಾ ಮ್ಯಾಲೊಂದುನಾ | ೩೭೩ |
| ೪೨೦. | ಹೇಳೆಲೆ ಸಖಿ ಘಮ್ಮನೆ ಸುಳಿದವನಾರೇ | ೮೨ |
| ೪೨೧. | ಹೊಂದಿ ಬದಕಿರ್ರ್ಯೋ | ೩೭೪ |
| ೪೨೨. | ಹೊಂದಿ ಬದುಕಿರ್ರೈಯ್ಯಾ ದೇವನಾ | ೪೫ |
| ೪೨೩. | ಹೊಂದಿ ಸುಖಿಸಿರ್ರೈಯ್ಯಾ ನಮ್ಮ ದೇವ ದೇವನಂ | ೪೪ |
| ೪೨೪. | ಹೊಂದಿ ಸುಖಿಸಿ ಹೊಂದಿ ಸುಖಿಸಿ | ೬೩ |
| ೪೨೫. | ಜ್ಞಾನ ಸಖೀ ಕೇಳೇ ಜ್ಞಾನಿಗಳಾರಾಧಿಸುವಾ | ೩೭೫ |

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು.
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು